# ತಿಂಗಳ ಕೊನೆ--ಬಂಧು ಬಳಗ ಬಂದಾಗ ಸಾಂಗಲೀ ಬ್ಯಾಂಕೇ ಕಾಪಾಡುವದು.

ಗಳಿಕೆ ಕಡಿಮೆ -- ಬೆಲೆಯೇರಿಕೆಯ
ಕತ್ತರಿಯಲ್ಲಿ ಸಿಕ್ಕು ಏನು ಮಾಡಬೇಕು
ಎನ್ನುವ ಅವಸ್ಥೆಯಲ್ಲಿರುವಾಗ
ತಿಂಗಳ ಕೊನೆಗೆ ಬೀಗರು ಬರಬೇಕು...
ಇಂತಹ ಪರಿಸ್ಥಿತಿಯಲ್ಲಿ ನಗುಮೊಗದಿಂದ (?)
ಸ್ವಾಗತ ಮಾಡುವ ನಟನೆ ಯಾವ
ನಟ ಸಾಮ್ರಾಟನಿಗೂ ಮಾಡಲು ಅಸಾಧ್ಯ.
ಎಲ್ಲ ಗ್ರಹಗಳ ವಕ್ರದೃಷ್ಟಿ ಆ ಕ್ಷಣದಲ್ಲಿ
ನಿಮ್ಮ ಕುಂಡಲಿಯ ಮೇಲೆಯೇ ಕೇಂದ್ರೀಕೃತ.
ಇಂತಹ ಪ್ರಸಂಗದಲ್ಲಿ ನಿಮ್ಮ ಸಹಾಯಕ್ಕೆ
ಧಾವಿಸಿ ಬರುವ ಒಂದೇ ಒಂದು ಗ್ರಹ...
ಉಳಿತಾಯ. ಹೀಗೆ ಬಂದ ಪ್ರಸಂಗ
ಸುಲಭವಾಗಿ ದೂರವಾಗುವದು. ಕುಂಡಲಿಯಲ್ಲಿ

ಉಚ್ಚ ಸ್ಥಾನದಲ್ಲಿರುವ ಗ್ರಹ...ಉಳಿತಾಯ
ಉಳಿತಾಯಕ್ಕಾಗಿ ಸಾಂಗಲೀ ಬ್ಯಾಂಕ್.




ನಿಮ್ಮ ಉತ್ಕರ್ಷದಲ್ಲಿಯ ಪಾಲುಗಾರ

**ದಿ ಸಾಂಗಲಿ ಬ್ಯಾಂಕ್ ಲಿ.**

ರಜಿ. ಆಫೀಸ: ರಾಜವಾಡಾ ಚೌಕ, ಸಾಂಗಲಿ

ಚೇರಮನ್—ಎಮ್. ಆರ್. [illegible]

Parkerson 8155 Kan

ಸಾವಿರಾರು ಕುಟುಂಬಗಳು,
ಬಳಕೆಯಲ್ಲಿರುವ ಲವಂಗದೆಣ್ಣೆಯ
ಗುಣಗಳನ್ನು ಪ್ರಾಮಿಸ್‌ನಲ್ಲಿ ಕಾಣುತ್ತವೆ.

# ಲವಂಗದ ಎಣ್ಣೆಯುಳ್ಳ ಅಪೂರ್ವ ಟೂಥ್‌ಪೇಸ್ಟ್ ಪ್ರಾಮಿಸ್

ನೀವೂ ಇದನ್ನು ಉಪಯೋಗಿಸಬಹುದಲ್ಲ!






## ಪ್ರಾಮಿಸ್

ದಂತಕ್ಷಯವನ್ನು ತಡೆಗಟ್ಟಲು ನೆರವಾಗುತ್ತದೆ,
ಶ್ವಾಸದ ದುರ್ಗಂಧವನ್ನು ನಿವಾರಿಸಿ
ಬಾಯಿಯನ್ನು ಸ್ವಚ್ಛಗೊಳಿಸುತ್ತದೆ




ಬಲ್ಸಾರಾ ತಯಾರಿಕೆ

ಅಧಿಕ ಆರೋಗ್ಯವುಳ್ಳ ಹಲ್ಲು ಮತ್ತು ಒಸಡುಗಳು,
ಆಹ್ಲಾದಕರ ಶ್ವಾಸ—
ಅದಕ್ಕಾಗಿ ಪ್ರಾಮಿಸ್

CHAITRA-BLS-453 KAN

---

ಖಾಲಿ ಟ್ಯೂಬ್‌ಗಳ ಬೇಡಿಕೆಯನ್ನು ಅಪಾರ ಜನಾಗ್ರಹದ ಮೂಲಕ
೩೦ ನೇ ಜೂನ್ ೧೯೮೧ ರ ವರೆಗೆ ಅವಧಿ ವಿಸ್ತರಿಸಲಾಗಿದೆ.

ಅಮ್ಮನ ಅಚ್ಚುಮಚ್ಚು
ದೀಪಾಮತ್ತು ಬ್ರೀತ... ಮತ್ತು
ಇವರ ಅಚ್ಚುಮಚ್ಚು ಎಲ್. ವಿ. ಟಿ.
ಗ್ಲೂಕೋಸ್ ಬಿಸ್ಕತ್ತುಗಳು






ಎಲ್. ವಿ. ಟಿ. ಪ್ರಾಡಕ್ಟ್ಸ
ಹುಬ್ಬಳ್ಳಿ.580 030.




LVT/8146

# ಅಭಿವೃದ್ಧಿಯೆಡೆಗೆ ಸರ್ಕಾರದ ಮಹತ್ತರ ಹೆಜ್ಜೆ

- ರಾಜ್ಯದ ೧೦೨ ತಾಲೂಕುಗಳಲ್ಲಿ ಆಗಾಗ್ಗೆ ಉಂಟಾಗುವ ಅಭಾವ ಪರಿಸ್ಥಿತಿಯ ಶಾಶ್ವತ ನಿವಾರಣೆಗಾಗಿ ಕೇಂದ್ರಕ್ಕೆ ೨೦೫ ಕೋಟಿ ರೂ.ಗಳ ಯೋಜನೆಯ ಸಲ್ಲಿಕೆ.
- ಇಪ್ಪತ್ತು ಅಂಶಗಳ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಅತ್ಯಂತ ಹೆಚ್ಚಿನ ಆದ್ಯತೆ, ಅದಕ್ಕಾಗಿ ತಾಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಸಮಿತಿಗಳ ರಚನೆ.
- ಸಾಮಾಜಿಕ ನ್ಯಾಯದಿಂದ ಕೂಡಿದ ಆರ್ಥಿಕ ಪ್ರಗತಿ ಸರ್ಕಾರದ ಗುರಿ.
- ಅಂಗವಿಕಲರಿಗಾಗಿ ೧೦.೫೦ ಲಕ್ಷ ರೂಪಾಯಿ ಅಂದಾಜು ವೆಚ್ಚದ ವಿಶೇಷ ಯೋಜನೆಗಳು.
- ಪ್ರೆಸ್ ಅಕಾಡೆಮಿ ಸ್ಥಾಪನೆಗೆ ನಿರ್ದಿಷ್ಟ ಕ್ರಮ.
- ಹಂಪೆಯ ಪ್ರಾಚೀನ ವೈಭವವನ್ನು ಮರಳಿ ತರಲು ವಿಶೇಷ ಯೋಜನೆ.
- ಮೈಸೂರಿನಲ್ಲಿ ವಿಶ್ವ ಕನ್ನಡಿಗರ ಸಮ್ಮೇಳನವನ್ನು ನಡೆಸಲು ನಿರ್ಧಾರ.
- ರಾಜ್ಯದಲ್ಲೇ ತಯಾರಾಗಿ, ಪ್ರದರ್ಶನವಾಗುವ ಎಲ್ಲಾ ಕನ್ನಡ ಚಿತ್ರಗಳಿಗೆ ಶೇಕಡಾ ೫೦ ರಷ್ಟು ಮನರಂಜನಾ ತೆರಿಗೆ ವಿನಾಯಿತಿ.
- ಗ್ರಾಮ ಸಹಾಯಕರ ಮಾಸಿಕ ಸಂಭಾವನೆ ೧೦೦ ರೂ.ಯಿಂದ ೧೨೦ಕ್ಕೆ ಹೆಚ್ಚಳ.
- ವಿದ್ಯುತ್ ಯೋಜನೆಗಳಿಗಾಗಿ ೧೧೭ ಕೋಟಿ ರೂ. ನೀಡಿಕೆ.
- ೧೨ ಕೋಟಿ ರೂ. ವೆಚ್ಚದಲ್ಲಿ ಉದ್ಯೋಗ ದೃಢೀಕರಣ ಯೋಜನೆ.
- ಸಹಕಾರಿ ವಲಯದಲ್ಲಿ ಇನ್ನೂ ನಾಲ್ಕು ನೂಲಿನ ಗಿರಣಿಗಳ ಸ್ಥಾಪನೆ.

**ಪ್ರಕಟಣೆ– ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ಕಸ್ತೂರಿ

ಕನ್ನಡ ಡೈಜೆಸ್ಟ್



ಸಂಪಾದಕ :

ಬಿ. ವಿ. ಜಿಗಜಿನ್ನಿ

ಕಲೆ :

ಕೆ. ಬಿ. ಕುಲಕರ್ಣಿ

ಮುಖಪುಟ :

ಏನಿದು ಯೋಚನೆ?

ಚಿತ್ರ :

ಎನ್. ಸಿ. ದೇಸಾಯಿ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೦೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೩-೦೦ |
| ೨ ವರ್ಷಕ್ಕೆ | ,, | ೪೫-೦೦ |
| ೩ ವರ್ಷಕ್ಕೆ | ,, | ೬೬-೦೦ |

KASTURI June 1981


## ಬೆಳಕಿಂಡಿ

ಪ್ರೇಮಕ್ಕೆ ಗರಿಗಳಿಲ್ಲ, ಪುಚ್ಛಗಳಿಲ್ಲ, ಗಂಟೆಗಳಿಲ್ಲ, ಜಾಗಟೆಗಳೂ ಇಲ್ಲ. ಅದು ಯಾವಾಗಲೂ ಸದ್ದುಗದ್ದಲವಿಲ್ಲದೆ ಬರುವಂಥಾದ್ದು. ಅದು ಬರುವಾಗ ಗಂಟೆಗಳ ಧ್ವನಿ ಕೇಳಿಬಂದರೆ ವೈದ್ಯರ ಹತ್ತಿರ ನಿಮ್ಮ ಕಿವಿಯನ್ನು ಪರೀಕ್ಷಿಸಿಕೊಳ್ಳಿ.

—ಎರಿಕ್ ಸೆಗಲ್

*

ಮಾನವ ಪರಿಪೂರ್ಣಗೊಳಿಸಲ್ಪಡುವ ಸರಕು ಅಲ್ಲ, ಬದಲು ಸುಧಾರಣೆಗೊಳ್ಳುವಂಥಾದ್ದು. —ಎರಿಕ್ ಸೆವಾರೀಡ್

*

ನಮಗೆ ಶಾಶ್ವತವಾದ ಶಾಂತಿ ಸಿಕ್ಕಿಲ್ಲವಾದರೂ ಶಾಶ್ವತವಾದ ಶಾಂತಿ ಪರಿಷತ್ತಾದರೂ ಸಿಕ್ಕಿದೆಯಲ್ಲ.

—ಬೆಟ್ಸಿ ಹ್ಯಾಸಿಟ್

*

ಇದ್ದುದನ್ನು ಇದ್ದಹಾಗೆ ಹೇಳಲು ಸಾಧ್ಯವಿದ್ದಾಗಲೆಲ್ಲ ನಾವು ಅದನ್ನು ಹೇಳದೆ ದೊಡ್ಡ ತಪ್ಪನ್ನು ಮಾಡುತ್ತೇವೆ. ಏಕೆಂದರೆ ಸತ್ಯವನ್ನು ನುಡಿಯುವ ಇಚ್ಛೆಯಾದಾಗಲೆಲ್ಲ ನಾವು ಅದನ್ನು ಆಚರಣೆಗೆ ತರುವುದೇ ಇಲ್ಲ. —ಮಾಂಟೆಸ್‌ಕ್ಯೂ

*

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಸಹಚಿಂತನೆ

## ಹೈಲಿಯೋ ವೈಲ್ಡನೊ?

'ಕಸ್ತೂರಿ' ಮೇ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಕುಮಾರಿ ಕರೆನ್' ಕಾದಂಬರಿಯ ಮೂಲ 'ಓವರ್ ಲೋಡ್' ಬರೆದವರು ಆರ್ಥರ್ ಹೈಲಿ. ತಮ್ಮ ಸಂಚಿಕೆಯಲ್ಲಿ ಮೂಲ ಕಾದಂಬರಿಯ ಕರ್ತೃ ಆಸ್ಕರ್ ವೈಲ್ಡ್ ಎಂದು ತಪ್ಪಾಗಿ ಅಚ್ಚಾಗಿದೆ.

ಬೆಂಗಳೂರು —ಕೆ. ತಾರಾಬಾಯಿ

[ನೀವನ್ನುವುದು ನಿಜ. ಇದನ್ನು ಈಗಾಗಲೇ ಎಷ್ಟೋ ಓದುಗರು ನಮ್ಮ ಗಮನಕ್ಕೆ ತಂದಿದ್ದಾರೆ. ಅನುವಾದಕರು ಹಸ್ತಪ್ರತಿಯಲ್ಲಿ ಮೂಲ ಲೇಖಕರು ಆಸ್ಕರ್ ವೈಲ್ಡ್ ಎಂದು ತಪ್ಪಾಗಿ ಬರೆದದ್ದೆ ಈ ಪ್ರಮಾದಕ್ಕೆ ಕಾರಣವಾಯಿತು. ಇದನ್ನು ಅನುವಾದಕರೂ ತಡವಾಗಿಯಾದರೂ ನಮ್ಮ ಗಮನಕ್ಕೆ ತಂದಿದ್ದಾರೆ. – ಸಂ.]

'ಕಸ್ತೂರಿ' ಮೇ ಸಂಚಿಕೆಯಲ್ಲಿ ಪ್ರಕಟವಾದ ಆಸ್ಕರ್ ವೈಲ್ಡ್‌ರ 'ಓವರ್ ಲೋಡ್' ಕಾದಂಬರಿಯನ್ನು ಆಧರಿಸಿ ಊರ್ಮಿಳಾ ಅವರ ಸಂಗ್ರಹ, 'ಕುಮಾರಿ ಕರೆನ್' (ಪುಸ್ತಕ ವಿಭಾಗ) ಒಂದು ಉತ್ಕೃಷ್ಟವಾದ ಸಂಗ್ರಹ. ಕ್ಯಾಲಿಫೋರ್ನಿಯಾ ದಂತಹ ರಾಜ್ಯಗಳಲ್ಲಿ ಅಂಗವಿಕಲರಿಗೆ ದೊರೆಯುವ ಸೌಲಭ್ಯಗಳು ನಮ್ಮ ದೇಶದಲ್ಲಿ ಅಂಗವಿಕಲರ ವರ್ಷವನ್ನು ಆಚರಿಸುತ್ತಿರುವಾಗಲಾದರೂ ದೊರೆತಾವೇ?

ಶಿವಮೊಗ್ಗ —ಮುರಳೀಧರ, ಕೆ.ಪಿ.

## ಬುದ್ಧಿಶಾಲಿಗಳಾರು ಯಾರು?

ಮೇ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಬರಲಿದೆ ಬುದ್ಧಿಶಾಲಿಗಳ ಸುಗ್ಗಿ' (ಮಾರ್ಚ್ ೧೯೭೦ರ ಸಂಚಿಕೆಯಿಂದ) ಬಹುಶಃ ಇಂದು ಕೆಲವು ರೀತಿಯಿಂದಲಾದರೂ ನಮಗೆ ಅನ್ವಯಿಸದು. ಲೇಖಕರ ಪ್ರಕಾರ ಹೆಚ್ಚು ವಿದ್ಯಾವಂತರೆಂದರೆ, ಹೆಚ್ಚು ಪದವಿಗಳನ್ನು ಗಳಿಸಿದವರು ಮಾತ್ರವೆಂದೆ? ಶಿವರಾಮ ಕಾರಂತರಂತಹ ಸರ್ವತೋಮುಖಿ ಪ್ರಜ್ಞೆಯುಳ್ಳ ವಿದ್ಯಾರ್ಥಿಗಳಿಲ್ಲದಿರುವರೂ ಇಲ್ಲವೆ? ಈಗ ಇತ್ತೀಚಿನ ದಿನಗಳಲ್ಲಂತೂ ಅತಿ ಸಾಧಾರಣ ವಿದ್ಯಾರ್ಥಿಗೂ ೮೫% ರಿಂದ ೯೦% ಬರುವುದು, ಹಾಗೂ ಅಂತಹವರಿಗೆ ಸುಲಭವಾಗಿ ಮೆಡಿಕಲ್, ಎಂಜಿನಿಯರಿಂಗಿಗೆ ಸೀಟು ಸಿಗುವುದೂ ಇದೆ. ಆದ್ದರಿಂದ ಪದವಿ ಗಳಿಸಿದವರೆಲ್ಲರೂ ವಿದ್ಯಾವಂತರೆಂದಾಗಲಿ, ಅವರನ್ನೆಲ್ಲ ಲೆಕ್ಕಕ್ಕೆ ಹಿಡಿದು ಅವರೆಲ್ಲ ಅತಿ ಹೆಚ್ಚಿನ ಐ. ಕ್ಯೂ. ಪಡೆದಿದ್ದಾರೆ ಎಂದು ಲೆಕ್ಕ ಹಾಕಿದರೆ ಅದು ಖಂಡಿತ ತಪ್ಪಾಗುವುದು. ಮೊದಲು ನಮ್ಮ ರಾಷ್ಟ್ರದ ವಿದ್ಯಾಭ್ಯಾಸದ, ಶಿಕ್ಷಣದ ವಿಧಾನವೇ ಬದಲಾಗಬೇಕು.

ತುಮಕೂರು —ಸುಮನ್

[ಈ ಲೇಖನವನ್ನೋದಿ ಕೆಲವೊಂದು ಅನಾವಶ್ಯಕ ಸಂದೇಹಗಳು ಮೂಡಿದಂತೆ ತೋರುತ್ತದೆ. ಲೇಖಕರು ಯಾರದೇ ಬುದ್ಧಿಶಕ್ತಿಯನ್ನ ಳೆಯಲು ಅವರು ಗಳಿಸಿದ ಪದವಿಗಳೇ ಮಾನದಂಡವೆಂದು ಹೇಳಿಲ್ಲವಲ್ಲ. ಅವರು ಇಡೀ ಸಮಸ್ಯೆಯನ್ನು ಮುಖ್ಯತಃ ಇಡಿ ಮಾನವ ಜನಾಂಗಕ್ಕೆ ಅನ್ವಯವಾಗುವ ರೀತಿಯಲ್ಲಿ ಚರ್ಚಿಸಿದ್ದಾರೆ. ನೀವು ನಮ್ಮ ದೇಶದ ಶೈಕ್ಷಣಿಕ ಸಮಸ್ಯೆಗಳನ್ನು ಎತ್ತಿಕೊಂಡು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಬಗ್ಗೆ ಭಿನ್ನಾಭಿಪ್ರಾಯ ಬರುವ ಅಗತ್ಯವಿಲ್ಲ. —ಸಂ.]

## ಭೇಶ್!

ನಾನು ಮೇ ತಿಂಗಳಿನಲ್ಲಿ ಪ್ರಕಟವಾದ 'ಕಸ್ತೂರಿ'ಯ ಮುಖಪುಟವನ್ನು ನೋಡಿ ಬಹಳ ಸಂತಸಗೊಂಡೆ. ಆ ಪ್ರಕೃತಿಚಿತ್ರ ತುಂಬಾ ಚೆನ್ನಾಗಿದ್ದಿತು. ಇದೇ ರೀತಿ ಮುಂದೆಯೂ ನಿಸರ್ಗ ಚಿತ್ರಗಳನ್ನು ಪ್ರಕಟಿಸಲು ಕೇಳಿಕೊಳ್ಳುತ್ತೇನೆ.

ಕುಣಿಗಲ್ —ಎಸ್. ಆರ್. ರವೀಂದ್ರಬಾಬು

## ಮರೆಯಲಾಗದ ಮೊರೇಸ್

'ಕಸ್ತೂರಿ' ಮೇ ಸಂಚಿಕೆಯಲ್ಲಿ ಪ್ರಕಟವಾಗಿರುವ 'ನನ್ನ ತಂದೆ' ಲೇಖನ ದಿ. ಫ್ರ್ಯಾಂಕ್ ಮೊರೇಸ್ ಅವರ ಜೀವನದ ಸ್ಫುಟ ಚಿತ್ರ ನೀಡುತ್ತದೆ. ಅವರ ಗಂಭೀರ ಮುಖದ ಹಿಂದಿನ ಒಂದೊಂದೆ ಭಾವನೆಯನ್ನು ಅವರ ಮಗ, ಖ್ಯಾತ ಕವಿ ಡಾಮ್ ಮೊರೇಸ್ ತುಂಬ ರಮ್ಯವಾಗಿ ಸೆರೆ ಹಿಡಿದಿರುವರು.

ಅನುವಾದ ಸೊಗಸಾಗಿದೆ. ಮೂಲದ ವಿಚಾರಗಳು ಮಾರ್ಮಿಕವಾಗಿ ಮೂಡಿವೆ.

ಧಾರವಾಡ —ಎನ್.ಎಸ್. ಪಾಟೀಲ

### ದೇವರಲ್ಲದೆ ಮತ್ತೇನು?

ಮೇ ತಿಂಗಳ ಕಸ್ತೂರಿಯಲ್ಲಿ 'ದೇವರಲ್ಲಿ ನಾವು ನಂಬಿಕೆ ಇಡಬೇಕೇ?' ವಿಚಾರ ವೇದಿಕೆಯಲ್ಲಿ ಹಲವು ಮಂದಿ ತಮ್ಮ ಅಭಿಪ್ರಾಯಗಳನ್ನು ಉತ್ತಮವಾಗಿ ವಿಶ್ಲೇಷಿಸಿದ್ದಾರೆ. ಇದು ವಿಚಾರವಂತರಿಗೆ ಹೊಸ ಬೆಳಕು ಚೆಲ್ಲಿದೆ. ಇಷ್ಟಂತೂ ಸತ್ಯ. ಹಗಲು-ರಾತ್ರಿ, ಋತು ಬದಲಾವಣೆ ಮುಂತಾದವುಗಳನ್ನು ಗಮನಿಸಿದಾಗ ಜಗತ್ತನ್ನು ನಿಯಂತ್ರಿಸುವ ಒಂದು ಶಕ್ತಿ ಇರಲೇಬೇಕು. ಇದನ್ನು ನಂಬಲೇಬೇಕು. ಆ ಶಕ್ತಿ ದೇವರಲ್ಲದೆ ಮತ್ತೇನು?

ಶ್ರೀಸಿದ್ಧಗಂಗಾಕ್ಷೇತ್ರ

—ಬಿ. ಕೆ. ಅನ್ನಪೂರ್ಣಾದೇವಿ

### ತಿರುಳು ಮುಖ್ಯ

'ಕಸ್ತೂರಿ' ಓದುಗರಿಗೆ ಬೆಲೆ ಎಷ್ಟಾದರೂ ಅದನ್ನು ಬಿಡುವುದು ಅಸಾಧ್ಯ. ಮೇ ಸಂಚಿಕೆಯಲ್ಲಿ ಶ್ರೀ. ಎ. ಗುರುಪ್ರಸಾದ, ಉಡುಪಿ, ಅವರ ಮಾತು ಸರಿಯಾದರೂ ಹೆಚ್ಚಿನ ಪುಟದಿಂದ ಪ್ರಯೋಜನ ಇಲ್ಲ. ಒಳ್ಳೆಯ ಲೇಖನದಿಂದ ಮಾತ್ರ ಉಪಯುಕ್ತ. ಒಳ್ಳೆಯ ಕಥೆಗಳು 'ಕಸ್ತೂರಿ'ಯಲ್ಲಿ ಅಪರೂಪಕ್ಕೆ ಬರುತ್ತವೆ. ಯೋಗ್ಯ ಗುಣ ಮಟ್ಟದ ಕಥೆಯನ್ನು ಓದುಗರಿಗೆ ಒದಗಿಸಿಕೊಟ್ಟರೆ ಒಳ್ಳೆಯದು.

'ಸ್ಪರ್ಶೇಂದ್ರಿಯ'ದ ಬಗ್ಗೆ ವಿಷಯ ಕಡಿಮೆಯಾಗಿತ್ತು. ಎಲ್ಲವೂ ನಡೆಯುವುದು ಸ್ಪರ್ಶೇಂದ್ರಿಯದಿಂದಲ್ಲವೆ ತಿಳಿಯುವುದು?

—ಮುಲ್ಕಿ ಹರಿಶ್ಚಂದ್ರ ಸಾಲಿಯಾನ್

### ಎಸ್. ವೆಂಕಟರಾವ್

ತಮ್ಮ ಏಪ್ರಿಲ್ ಸಂಚಿಕೆಯಲ್ಲಿ ಶ್ರೀ ವಿಜಯಶಂಕರರವರ ಲೇಖನದಲ್ಲಿ 'ಎಲ್ಲರಿಗಾದ ಸಮಾಜವಾದಿ ಎಸ್. ವೆಂಕಟರಾವ್' ಲೇಖನದಲ್ಲಿ ಕಂಡು ಬಂದ ಕೆಲವು ತಪ್ಪು ಗ್ರಹಿಕೆಗಳ ಬಗ್ಗೆ ಈ ಪತ್ರದ ಮೂಲಕ ಗಮನ ಸೆಳೆಯಲು ಬಯಸುತ್ತೇನೆ.

ಶ್ರೀ ವಿಜಯಶಂಕರರು ಬರೆದಿರುವಂತೆ ಶ್ರೀ ಎಸ್. ವೆಂಕಟರಾವ್ ಕೇವಲ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮಾಡಿದ್ದು ಅವರ ವಿದ್ವತ್ತು ಪೂರ್ಣವಾಗಿ ಜೀವನದ ಅನುಭವಗಳ ಮೂಲಕ ರೂಪಿತವಾಯಿತು ಎಂದಿದೆ. ಎಸ್. ವೆಂಕಟರಾವ್ ಅವರನ್ನು ನಾನು ಸಹ ಸ್ವಲ್ಪಮಟ್ಟಿಗೆ ಬಲ್ಲೆ. ಅವರು ೧೯೪೭ರಲ್ಲಿ ಇಂಜಿನಿಯರಿಂಗ್ ಡಿಪ್ಲೋಮಾದೊಡನೆ ಬಾಂಬೆ ಸರಕಾರದಲ್ಲಿ ಕೆಲಸಮಾಡುತ್ತಿದ್ದರು. ರಾಜಕೀಯ ಸಂಘಟನೆಗಳಲ್ಲಿ ಅವರು ತೊಡಗಿದ್ದ ಕಾರಣ ಸರಕಾರ ಅವರನ್ನು ರಿಟ್ರೆಂಚ್ ಮಾಡಿದ ಬಳಿಕ ಅವರು ಸಂಪೂರ್ಣವಾಗಿ ತಮ್ಮ ಮೊದಲ ಒಲವುಗಳಾಗಿದ್ದ ಕಾರ್ಮಿಕ ಸಂಘಟನೆ ಮತ್ತು ಸಮಾಜವಾದೀ ಆಲೋಚನೆಗಳೊಂದಿಗೆ ಕೆಲಸ ಮಾಡತೊಡಗಿದರು.

ಶ್ರೀ ವಿಜಯಶಂಕರರು 'ವೆಂಕಟರಾವ್ ದಿ. ಶಾಂತವೇರಿ ಗೋಪಾಲಗೌಡರ ಗರಡಿಯಲ್ಲಿ ತಯಾರಾದ ವ್ಯಕ್ತಿ' ಎಂದು ಬರೆದಿದ್ದಾರೆ. ವೆಂಕಟರಾವ್ ಮೊದಲಿನಿಂದ ಮಾರ್ಕ್ಸ್‌ವಾದಿಯಾಗಿ ಮತ್ತು ಸ್ಟಾಲಿನ್ ವಿರೋಧಿಯಾಗಿದ್ದರು. ಗೋಪಾಲಗೌಡರು ಮತ್ತು ವೆಂಕಟರಾವ್ ಇಬ್ಬರಿಗೂ ಭಿನ್ನ ಸೈದ್ಧಾಂತಿಕ ಹಿನ್ನೆಲೆಗಳಿದ್ದವು. ಇಬ್ಬರೂ ಬಹುಮಟ್ಟಿಗೆ ಸಮಕಾಲೀನರು. ವೆಂಕಟರಾವ್, ಗೌಡರಿಗಿದ್ದ ಸಮೂಹ ನಾಯಕತ್ವದ ಲಕ್ಷಣಗಳಿಗಾಗಿ ಅವರನ್ನು ಅತೀವವಾಗಿ ಗೌರವಿಸುತ್ತಿದ್ದರು ಎನ್ನುವುದು ನಿಜ.

ಮತ್ತೊಂದು ಮುಖ್ಯ ಸಂಗತಿಯೆಂದರೆ, ಶ್ರೀ ವೆಂಕಟರಾವ್ ಬರೆದ ಪ್ರವಾಸ ಕಥನದ ಹೆಸರು ಶ್ರೀ ವಿಜಯಶಂಕರರು ಸೂಚಿಸಿರುವಂತೆ 'ಪರ್ಯಟನೆ' ಅಲ್ಲ, 'ಪ್ರದಕ್ಷಿಣೆ'. ಮಾಸ್ಕೋ, ಯುರೋಪ್, ಅಮೇರಿಕ ಮತ್ತು ಪೂರ್ವ ಏಶಿಯಾಗಳಲ್ಲಿನ ತಮ್ಮ ಪ್ರವಾಸದ ವಿವರಗಳನ್ನು ವೆಂಕಟರಾವ್ ಬಹಳ ಚಿತ್ರವತ್ತಾಗಿ ವಿವರಿಸಿದ್ದಾರೆ.

ಮೈಸೂರು —ಪುರುಷೋತ್ತಮ, ಎ.



# ಕಸ್ತೂರಿ

ವರ್ಷ: ೨೫ ಸಂಚಿಕೆ: ೧೦

ಜೂನ್ ೧೯೮೧

## ದೀಪದಾನ

**ರವೀಂದ್ರನಾಥ ಠಾಕೂರ**

ನಿರ್ಜನ ನದೀ ತೀರದ ಇಳುಕಲಿನಲ್ಲಿಯ ಎತ್ತರದ ಹಸಿರು ಹುಲ್ಲುಗಾವಲಿನಲ್ಲಿ ಅವಳನ್ನು ಕೇಳಿದೆ: "ಬಾಲೆ, ಕೈಯಲ್ಲಿ ಹಿಡಿದ ಹಣತೆಯ ಜ್ಯೋತಿಯನ್ನು ಸೆರಗಿನಿಂದ ಮರೆಮಾಡಿಕೊಂಡು ಎಲ್ಲಿಗೆ ಹೊರಟಿರುವೆ? ನನ್ನ ಮನೆಯಲ್ಲೆಲ್ಲ ಅಂಧಕಾರ. ಏಕಾಂತತೆ ಆವರಿಸಿದೆ– ದೀಪದಾನ ಮಾಡು ಬಾ!"

ಆಕೆ ಒಂದು ಕ್ಷಣ ನಿರ್ನಿಮೇಷಳಾಗಿ ನನ್ನನ್ನೊಮ್ಮೆ ಆ ಮಬ್ಬುಗತ್ತಲೆಯಲ್ಲಿ ನೋಡಿ, "ಈ ಪ್ರದೋಷ ಕಾಲದಲ್ಲಿ ನನ್ನ ದೀಪವನ್ನು ಹೊಳೆಯಲ್ಲಿ ತೇಲಿಬಿಡಲು ಬಂದಿರುವೆ," ಎಂದಳು.

ಎತ್ತರದ ಹಸಿರು ಹುಲ್ಲುಗಾವಲಿನಲ್ಲಿ ನಾನೊಬ್ಬನೇ ನಿಂತು ಪ್ರವಾಹದಲ್ಲಿ ಅವಳ ದೀಪದ ಚಿಕ್ಕ ಕುಡಿ ವ್ಯರ್ಥ ಕೊಚ್ಚಿಕೊಂಡು ಹೋಗುತ್ತಿರುವುದನ್ನು ನೋಡಿದೆ.

ಇರುಳಿನ ನಿಃಶಬ್ದತೆಯಲ್ಲಿ ಅವಳನ್ನು ಕೇಳಿದೆ: "ಬಾಲೆ, ನಿನ್ನ ಮನೆಯು ಜ್ಯೋತಿಗಳೆಲ್ಲ ಬೆಳಗುತಿವೆ. ಈ ಹಣತೆಯನ್ನು ಹಿಡಿದುಕೊಂಡು ಎತ್ತಲ್ಲಿ ಹೊರಟಿರುವೆ? ನನ್ನ ಮನೆಯು ತುಂಬಾ ಅಂಧಕಾರ. ದೀಪದಾನ ಮಾಡು ಬಾ !"

ಆಕೆ ಕಣ್ಣೆವೆಗಳನ್ನು ಪಿಳುಕಿಸಿ, ಒಂದು ಕ್ಷಣ ಸಂದೇಹದಿಂದ ನನ್ನ ಮುಖವನ್ನು ಅವಲೋಕಿಸಿ, "ನನ್ನ ದೀಪವನ್ನು ಆಗಸಕ್ಕೆ ಅರ್ಪಿಸಲು ಬಂದಿದ್ದೇನೆ," ಎಂದಳು.

ನಾನು ಏಕಾಕಿಯಾಗಿ ನಿಂತು ಅವಳ ದೀಪ ಶೂನ್ಯದಲ್ಲಿ ವ್ಯರ್ಥವಾಗಿ ಉರಿದುಹೋಗುವುದನ್ನು ನೋಡಿದೆ.

ಚಂದ್ರನಿಲ್ಲದ ಆ ಮಧ್ಯರಾತ್ರಿಯು ಗಾಢಾಂಧಕಾರದಲ್ಲಿ. "ಬಾಲೆ, ಹೃದಯದ ಹತ್ತಿರ ಹಣತೆ ಹಿಡಿದುಕೊಂಡು ಯಾವುದರ ಅನ್ವೇಷಣೆಯಲ್ಲಿ ಹೊರಟಿರುವೆ? ನನ್ನ ಮನೆಯಲ್ಲೆಲ್ಲ ಅಂಧಕಾರ ಏಕಾಂತತೆ ಆವರಿಸಿದೆ— ನಿನ್ನ ದೀಪದಾನ ಮಾಡು ಬಾ !" ಎಂದು ಅವಳನ್ನು ಕರೆದೆ.

ಆಕೆ ಒಂದು ಕ್ಷಣ ತಡೆದು, ಆಲೋಚಿಸಿ, ಕತ್ತಲೆಯಲ್ಲಿ ನನ್ನ ಮುಖವನ್ನು ದಿಟ್ಟಿಸಿ, "ದೀಪೋತ್ಸವದಲ್ಲಿ ಬೆಳಗಲು ನನ್ನ ದೀಪ ತಂದಿರುವೆ" ಎಂದಳು.

ನಾನು ನಿಂತು, ಅವಳ ಚಿಕ್ಕ ಜ್ಯೋತಿ ಅವೆಲ್ಲ ದೀಪಗಳಲ್ಲಿ ವ್ಯರ್ಥವಾಗಿ ಕಳೆದುಹೋಗುವುದನ್ನು ನೋಡಿದೆ. (ಅನು: **ಶ್ರೀಮತಿ ಗೀತಾ ಮುರಲಿ**)

## ಸ್ವಾಮಿ ಪತಿತರು

ರೂಪಾಯಿ ರೂಪಾಯಿಯನ್ನು ಜಗ್ಗುತ್ತದೆ ಎಂಬ ಮಾತನ್ನು ಒಬ್ಬ ಕೇಳಿದ್ದ. ಇದರ ಸತ್ಯತೆಯನ್ನು ಪರೀಕ್ಷಿಸಿಯೇಬಿಡಬೇಕೆಂದು ಆತ ನಿಶ್ಚಯಿಸಿದ. ಸರ್ಕಾರಿ ಖಜಾನೆಯಲ್ಲಿ ರೂಪಾಯಿಯ ರಾಶಿ ಬಿದ್ದಿತ್ತು. ಅದರ ಹತ್ತಿರ ನಿಂತುಕೊಂಡು, ಕೈಯಲ್ಲಿ ತನ್ನೊಂದು ರೂಪಾಯಿ ಹಿಡಿದುಕೊಂಡು, ಅದು ಆ ರಾಶಿಯೊಳಗಿನ ರೂಪಾಯಿಗಳನ್ನು ಜಗ್ಗುತ್ತಿದೆಯೇ ಎಂಬುದನ್ನು ನೋಡುತ್ತ ನಿಂತುಕೊಂಡ.

ಬಹಳ ಹೊತ್ತು ಕಳೆಯಿತು. ಬಹಳ ಪ್ರಯತ್ನ ಮಾಡಿದ. ಆದರೆ ಖಜಾನೆಯೊಳಗಿನ ರೂಪಾಯಿಗಳು ಅವನ ಕಡೆಗೆ ಬರಲಿಲ್ಲ. ಅವನ ರೂಪಾಯಿ ಮಾತ್ರ ಅಸಾವಧಾನತೆಯಿಂದ ಕೈಯಿಂದ ಜಾರಿ ರಾಶಿಯೊಳಗಿನ ರೂಪಾಯಿಗಳಲ್ಲಿ ಬಿದ್ದಿತು.

ಖಜಾನೆಯ ಅಧಿಕಾರಿಯ ಲಕ್ಷ್ಯ ಈತನ ಗಡಿಬಿಡಿಯ ಕಡೆಗೆ ಹರಿಯಿತು. ಅವನೊಬ್ಬ ಸಂಶಯಾಸ್ಪದ ವ್ಯಕ್ತಿಯೆಂದು ಬಗೆದು ಅವನನ್ನು ಪೋಲೀಸರ ವಶಕ್ಕೆ ಕೊಟ್ಟ. ವಿಚಾರಣೆಯಾಯಿತು. ಈತ ನಡೆದುದನ್ನು ಹೇಳಿದ.

ಅಧಿಕಾರಿ ನಕ್ಕು ನುಡಿದ: "ಅಯ್ಯಾ, ನೀನು ಹೇಳಿದ ಸಿದ್ಧಾಂತವೇನೋ ಸರಿಯಿದೆ. ಆದರೆ ಅದಕ್ಕೊಂದು ತಿದ್ದುಪಡಿಯೂ ಇದೆ. ಬಹಳಷ್ಟು ಇರುವ ವಸ್ತುಗಳು ಕಡಿಮೆ ಇರುವ ವಸ್ತುಗಳನ್ನು ತಮ್ಮ ಕಡೆಗೆ ಜಗ್ಗುವವು ಎಂಬುದನ್ನು ಮರೆಯಬಿರು. ಹೆಚ್ಚು ರೂಪಾಯಿಗಳು ನಿನ್ನೊಂದು ರೂಪಾಯಿಯನ್ನು ಜಗ್ಗಿಬಿಟ್ಟವು. ಈ ಜಗತ್ತಿನಲ್ಲಿ ಹೀಗೆಯೇ ಇದೆ. ಒಳ್ಳೆಯ ಶಕ್ತಿಗಳಿರಲಿ, ಕೆಟ್ಟ ಶಕ್ತಿಗಳಿರಲಿ— ಅವು ಪ್ರಬಲಿಸಿದಾಗ ಪ್ರತಿ ಪಕ್ಷಗಳು ಅವುಗಳ ಮುಂದೆ ಸೋತು ಬಹುಮತದ ಪ್ರವಾಹದಲ್ಲಿ ಹರಿದುಹೋಗುವವು. ಈ ಪ್ರವಾಹವನ್ನು ತಡೆಗಟ್ಟಿ ತನ್ನ ಸ್ಥಾನದಲ್ಲಿಯೆ ನೆಲೆ ನಿಲ್ಲುವವರು ನೂರಕ್ಕೊಬ್ಬರು."

—ವಿನೀತ ರಾಮಚಂದ್ರರಾಯ

# ಬೆಳ್ಳಿ ಕೆರ

ಮೂಲ: ಬಾಲಶೌರಿ ರೆಡ್ಡಿ
ಅನು: ಸುಶೀಲಾ ಕೃಷ್ಣಮೂರ್ತಿ

ನನ್ನ ಸ್ನೇಹಿತ ವಕೀಲ ಶಿವರಾಂ ಮನೆಗೆ ನಾನು ಹೋದಾಗ ಆಕಸ್ಮಾತ್ ಆ ದಿನ ಅತನ ಪುತ್ರನ ಹುಟ್ಟು ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ಊಟಕ್ಕೆ ಆಮಂತ್ರಿತರಾದ ವ್ಯಕ್ತಿಗಳಲ್ಲಿ ವೆಂಕಟೇಶ್ವರರಾವ್‌ನನ್ನು ನೋಡಿ ನನ್ನ ಮುಖ ಅರಳಿತು. ರಾವ್ ನನ್ನೆಡೆ ಒಂದೇಟಿಗೆ ಹಾರಿ ಬಂದು ನನ್ನನ್ನು ಆಲಂಗಿಸಿದರು. ಕುಶಲ ಪ್ರಶ್ನೆಗಳ ಸುರಿಮಳೆಯೇ ಆಯಿತು.

ಮಾರನೆ ದಿನ ಬೆಳಿಗ್ಗೆ ಮಿತ್ರನ ಆಮಂತ್ರಣ ಪಡೆದು ಉಪಹಾರಕ್ಕಾಗಿ ಅವರ ಮನೆಗೆ ಹೋದೆ. ಸರ್ವ ಪ್ರಥಮವಾಗಿ ವಿಶಾಲಕಾಯದ ಬಹುಮೂಲ್ಯ ಅಲಸೇಶನ್ ಸೋನಿ ತನ್ನ ಮಾಲೀಕನ ಅಭಿನ್ನ ಮಿತ್ರನೆಂದು ತನಗೆ ಗೊತ್ತಿದೆ ಎಂಬಂತೆ ನಮ್ಮನ್ನು ಸ್ವಾಗತಿಸಿದಳು.

ಬಚ್ಚಲು ಮನೆಯಿಂದ ತಲೆಯನ್ನು ಒರೆಸಿಕೊಳ್ಳುತ್ತಾ ವೆಂಕಟೇಶ್ವರರಾವ್ ಹಾಲಿಗೆ ಬಂದನು. ಫ್ಯಾನ್ ಹಾಕಿದನು. ವರ್ತಮಾನ ಪತ್ರಿಕೆ ಕೈಲಿ ಹಿಡಿದು, ಬಟ್ಟೆ ಬದಲಾಯಿಸಲು ಮಲಗುವ ಮನೆಗೆ ಹೋದ. ಪಿಕ್ಚರ ಶೂಟ್ ಮಾಡಲು ಈಗ ಸೆಟ್ ತಯಾರಾಗಿದೆಯೇನೊ ಎಂಬಂತೆ ಹಾಲ್ ಅಲಂಕೃತವಾಗಿತ್ತು. ನಾನು ಮನಸ್ಸಿನಲ್ಲೇ ನನ್ನ ಮಿತ್ರನ ಮಡದಿಯ ಅಲಂಕಾರಪ್ರಿಯತೆಯನ್ನು ಅಭಿನಂದಿಸಿದೆ. ಜೊತೆಗೆ ನನ್ನ ಮನೆಯವಳನ್ನು ಅವಳೊಂದಿಗೆ ತುಲನೆ ಮಾಡಿದೆ. ಗೋಡೆಗಳ ಮೇಲೆ ಸುಪ್ರಸಿದ್ಧ ಚಿತ್ರಕಾರರ ಪೇಂಟಿಂಗ್ಸ್ ಸುಶೋಭಿತವಾಗಿದ್ದುವು. ಪೂರ್ಣ ಹಾಲ್ ಅಚ್ಚುಕಟ್ಟಾಗಿಯೂ ಮನಮೋಹಕವಾಗಿಯೂ ಇತ್ತು. ನಾನು ಯೋಚಿಸತೊಡಗಿದೆ. ಹಾಸ್ಟೆಲ್ಲಿನಲ್ಲಿರುವಾಗ ವೆಂಕಟೇಶ್ವರರಾವ್ ಎಷ್ಟು ಬೇಜವಾಬ್ದಾರನಾಗಿರುತ್ತಿದ್ದ. ಈಗ ಇವನ ರುಚಿಯಲ್ಲಿ ಇಂತಹ ಭಾರಿಪರಿವರ್ತನೆ ಹೇಗಾಯಿತು? ಅವನು ಯಾವಾಗಲೂ ತನ್ನ ಸಾಮಾನುಗಳನ್ನೆಲ್ಲ ಅಸ್ತವ್ಯಸ್ತವಾಗಿ ಇಟ್ಟಿರುತ್ತಿದ್ದ. ಅವುಗಳನ್ನು ಸರಿಯಾಗಿ ಜೋಡಿಸುವ ಅಭ್ಯಾಸ ಅವನಿಗಿರಲಿಲ್ಲ. ನಾನು ಸ್ವತಃ ಅವನಿಗೆ ಎಷ್ಟೋ ಹೇಳುತ್ತಿದ್ದೆ. ಆದರೆ ಅವನ ಅಸ್ತವ್ಯಸ್ತತೆಯಲ್ಲಿ, ಯಾವ ಪರಿವರ್ತನೆಯೂ ಆಗದಿದ್ದುದನ್ನು ನೋಡಿ ಸೋತುಹೋಗಿದ್ದೆ. ಕೆಲವು ಸಲ ಹೇಳುತ್ತಿದ್ದೆ, "ಶೀನಿ. ನಿನ್ನ ಮನೆಯವಳೇ ನಿನ್ನ ಬದಲಾಯಿಸಬೇಕು!" ಎಂದು. ಇದ್ದಕ್ಕಿದ್ದಂತೆ ನನಗೆ ಅನ್ನಿಸಿತು. ವೆಂಕಟೇಶ್ವರರಾವ್‌ನಲ್ಲಿ ಯಾವ ಬದಲಾವಣೆಯೂ ಆಗದಿರಬಹುದು. ಇದೆಲ್ಲಾ ಅವನ ಹೆಂಡತಿ ರಮಾಳ ಕಲೆ ಇರಬಹುದು. ಓಹ್, ರಮಾ ಸೌಂದರ್ಯಾರಾಧಕಿ ಇರಬಹುದು!

"ಓ, ನಮಸ್ತೆ! ನೀವೆಲ್ಲೊ ರಸ್ತೆ ಮರೆತು ನಮ್ಮ ಮನೆಗೆ ಬಂದಂತಿದೆ." ಹೊರಬಂದ ರಮಾ ಒಂದೇ ಉಸಿರಿನಲ್ಲಿ ಹೇಳಿದಳು.

ನಾನು 'ಬ್ಲಿಟ್ಜ್'ನ್ನು ಟೀಪಾಯಿಯ ಮೇಲೆ ಇಡುತ್ತಾ ನೋಡಿದೆ. ಎದುರಿಗೆ ಕೈ ಮುಗಿದು ನಗುಮುಖದಿಂದ ನಿಂತಿದ್ದಾಳೆ ರಮಾ!

ನಾನು ಎದ್ದು ಅಭಿವಾದನದ ಮೂಲಕ ಪ್ರತ್ಯುತ್ತರಿಸಿದೆ. ಆಗ ರಮಾ ಕೇಳಿದಳು– "ನೀವು ಸುರೇಶನ ಮದುವೆಗೆ ಏಕೆ ಬರಲಿಲ್ಲ? ನಾವು ನಿಮ್ಮನ್ನು ಬಹಳ ನಿರೀಕ್ಷಿಸಿದ್ದೆವು."

"ಏನು? ಸುರೇಶನ ಮದುವೆ ಆಯಿತೆ? ನನಗೆ ಆಮಂತ್ರಣ ಎಲ್ಲಿತ್ತು ಬರೋದಿಕ್ಕೆ? ಇನ್‌ವಿಟೇಶನ್ ಕಳಿಸದೆ ದೋಷಾರೋಪಣೆ ಮಾಡ್ತಾ ಇದ್ದೀರಿ."

"ನೀವು ಸುಳ್ಳು ಹೇಳ್ತಾ ಇದ್ದೀರಿ. ನಾವು ನಿಮ್ಮ ಹೆಸರಿಗೆ ಮೊದಲೇ ಪೋಸ್ಟ್ ಮಾಡಿದ್ದೆವು."

"ಮಾಡಿರಬಹುದು. ನನಗೆ ಸಿಕ್ಕಿದ್ದರೆ ನಾನು ಬರದೆ ಇರುತ್ತಿದ್ದೆನೆ? ನಿಜ ಹೇಳ್ತಾ ಇದೀನಿ. ನನ್ನ ಹೆಸರಿಗೆ ಯಾವ ಆಹ್ವಾನಪತ್ರಿಕೆಯೂ ಬರಲಿಲ್ಲ." ತಪ್ಪು ನನ್ನದಲ್ಲ ಎನ್ನುವುದನ್ನು ಸಮರ್ಥಿಸಲು ಯತ್ನಿಸಿದೆ.

ಪ್ರಾಯಶಃ ರಮಾಳ ತರ್ಕದ ಮುಂದೆ ನಾನು ಸೋತುಹೋಗುತ್ತಿದ್ದೆ. ಅಷ್ಟರಲ್ಲಿ ವೆಂಕಟೇಶ್ವರ ರಾವ್ ಬಂದು ನನ್ನನ್ನು ರಕ್ಷಿಸಿದನು.

ರಮಾ ತಿಂಡಿಯ ಏರ್ಪಾಡಿಗಾಗಿ ಒಳಗೆ ಹೋದಳು. ಸ್ವಲ್ಪ ಹೊತ್ತಿನ ನಂತರ ಒಳಗಿನಿಂದ ಕರೆ ಬಂತು. ಊಟದ ಮನೆಯಲ್ಲಿ ಬೊಂಬೆಯಂಥ ಒಬ್ಬ ಸುಂದರವಾದ ಹುಡುಗಿ ತಟ್ಟೆಯಲ್ಲಿ ಮಿಠಾಯಿಯನ್ನು ಸಜ್ಜುಗೊಳಿಸುತ್ತಿದ್ದಳು. ವೆಂಕಟೇಶ್ವರ ರಾವ್ ಆಕೆಯ ಪರಿಚಯ ಮಾಡಿಸಿದ. "ಇವಳು ಸೀಮಾ... ನನ್ನ ಸೊಸೆ! ಎಂ. ಎ. ಪ್ರಥಮಶ್ರೇಣಿಯಲ್ಲಿ ತೇರ್ಗಡೆಯಾಗಿದ್ದಾಳೆ. ಸ್ವರ್ಣ ಪದಕ ಸಹ ಸಿಕ್ಕಿದೆ." ನಂತರ ರಾವ್ ತನ್ನ ಸೊಸೆಗೆ ಹೇಳಿದ, "ಮಗು, ಚಿಕ್ಕಪ್ಪನಿಗೆ ಸ್ವಲ್ಪ ನಿನ್ನ ಪದಕ ತೋರಿಸು."

ಸೀಮಾಳಿಗೆ ಬಹುಶಃ ಪದಕ ತೋರಿಸುವುದು ಇಷ್ಟವಿರಲಿಲ್ಲ. ಅವಳು ತಲೆ ತಗ್ಗಿಸಿ ಟೀ ಕಪ್‌ಗಳನ್ನು ಮೇಜಿನ ಮೇಲೆ ಇಡುತ್ತಿದ್ದಳು. ರಮಾ ಓಡಿ ಹೋಗಿ ಬೀರುವಿನಿಂದ ಪದಕ ತಂದು ನನ್ನ ಕೈಲಿ ಇಟ್ಟಳು.

"ನಮ್ಮ ಮನೆತನದಲ್ಲಿ ಇಲ್ಲಿಯವರೆಗೂ ಯಾರೂ ಸ್ವರ್ಣಪದಕವನ್ನು ಪಡೆದಿರಲಿಲ್ಲ. ನಮ್ಮ ಸೀಮಾಳ ಮೇಲೆ ನಮಗೆ ಹೆಮ್ಮೆ. ಇವಳು ಹಗಲೂ ರಾತ್ರಿ ಓದುತ್ತಾಳೆ. ಪೀಎಚ್. ಡಿ. ನೂ ಮಾಡ್ತಾ ಇದ್ದಾಳೆ. ಡಿ. ಲಿಟ್. ಮಾಡ್ತೀನಿ ಅಂತಾಳೆ. ಹಗಲೂ ರಾತ್ರಿ ಓದುವುದರಿಂದ ಅವಳ ಆರೋಗ್ಯ ಎಲ್ಲಿ ಕೆಡುತ್ತೊ ಎಂದು ನನಗೆ ಹೆದರಿಕೆ. ಸುಮ್ಮನೆ ಆರಾಮವಾಗಿರು ಅಂತ ನಾನು ಎಷ್ಟೋ ಹೇಳುತ್ತೇನೆ. ಆದರೆ ಆಕೆ ಕೇಳುವುದೇ ಇಲ್ಲ. ಅಡಿಗೆ ಮಾಡ್ತಾಳೆ. ಬಡಿಸುತ್ತಾಳೆ. ಮಾವನ ಸೇವೆ ಮಾಡ್ತಾಳೆ. ಜೊತೆಗೆ ಕಾಲೇಜಿಗೂ ಹೋಗುತ್ತಾಳೆ."

"ಹಾಗಿದ್ದ ಮೇಲೆ ನೀವು ಏಕೆ ಒಬ್ಬ ಅಡಿಗೆಯವನನ್ನು ಇಟ್ಟುಕೊಳ್ಳಬಾರದು? ದುಡಿಯುವ ಸೊಸೆಯ ಹತ್ತಿರ ಕೆಲಸ ಮಾಡಿಸುವುದು ಸರಿಯಲ್ಲ. ಜನ ಏನಂತಾರೆ?"

"ನಾನೂ ಅದೇ ಯೋಚನೆ ಮಾಡ್ತೀನಿ. ಆದರೆ ನನಗೆ ನನ್ನ ಕೈ ಅಡಿಗೇನೆ ರುಚಿ. ಕೆಲಸ ಏನು ಮಹಾ! ನಾಲ್ಕು ಜನ ಇದೇವೆ. ನಮಗೂ ಸಮಯ ಕಳೆಯಬೇಕಲ್ಲ. ಕೆಲಸ ಮಾಡುವುದರಿಂದ ಆರೋಗ್ಯನೂ ಚೆನ್ನಾಗಿರುತ್ತೆ." ಎಂದಳು ರಮಾ.

"ರಮಾ, ಸುಳ್ಳು ಹೇಳುವುದಕ್ಕೂ ಒಂದು ಮಿತಿ ಇದೆ. ಇವನೇನು ಹೊರಗಿನವನಲ್ಲ. ನೋಡಪ್ಪ, ನಿಜವಾದ ಮಾತು ಏನೆಂದರೆ ರಮಾ ಅಡುಗೆಯವನಿಗಾಗಿ ಖರ್ಚು ಮಾಡುವುದು ದಂಡ ಎನ್ನುತ್ತಾಳೆ. ನಾನು ಒಂದಿಬ್ಬರು ಆಳುಗಳನ್ನು ಇಟ್ಟೆ. ಆದರೆ ಒಂದಲ್ಲ ಒಂದು ನೆಪದಿಂದ ಅವರನ್ನೆಲ್ಲಾ ಇವಳು ಓಡಿಸಿಬಿಟ್ಟಳು."

"ನೀವು ಎಲ್ಲಾ ತಪ್ಪನ್ನು ನನ್ನ ತಲೆ ಮೇಲೆ ಹಾಕ್ತೀರಾ? ನೀವೇ ಒಂದು ದಿನ ಆಳು ಯಾವ ಕೆಲಸಕ್ಕೂ ಪ್ರಯೋಜನ ಇಲ್ಲಾ ಅಂತ ಹೇಳಿದಿರಿ. ಅದಕ್ಕೇ ನಾನು ಅವರನ್ನು ಓಡಿಸಿದೆ. ಇಲ್ಲದಿದ್ದರೆ ನನ್ನದೇನು ಹೋಗ್ತಾ ಇತ್ತು? ದುಡಿಯೋರು ನೀವು. ಖರ್ಚು ಮಾಡೋರು ನೀವು. ನಾನು ಆರಾಮವಾಗಿ ಕೂತಿರುತ್ತೇನೆ. ಕೈ ಸುಟ್ಟುಕೊಳ್ಳೋದಿಕ್ಕೆ ನನಗಿಲ್ಲ ಗ್ರಹಚಾರ!" ರಮಾ ಸಿಡಿದೆದ್ದಳು.

ನಾನು ಮಧ್ಯಸ್ಥಿಕೆಯಾಗಿ ಸಮಾಧಾನ ಮಾಡಿದೆ. "ತಮ್ಮ ಕೆಲಸ ತಾವು ಮಾಡಿಕೊಳ್ಳುವುದರಲ್ಲಿ ತಪ್ಪೇನು? ರಮಾಗೆ ಸಮಯ ಕಳೆಯುತ್ತೆ. ನಿಮಗೂ ಒಳ್ಳೆಯ ಊಟ ಸಿಗುತ್ತೆ. ಅವರೇ ಸ್ವತಃ ಅಡಿಗೆ ಮಾಡಲು ತಯಾರಿರುವಾಗ ನೀವೇಕೆ ತಡೆಯುತ್ತೀರಿ?"

"ಅವಳೇ ಸ್ವತಃ ಮಾಡಿದ್ದಿದ್ದರೆ ನನ್ನದೇನೂ ಅಡ್ಡಿ ಇರ್ತಾ ಇರಲಿಲ್ಲ. ಆದರೆ ಪಾಪ! ಆ ಸೊಸೆಯ ಹತ್ತಿರ ದಿನವೆಲ್ಲಾ ಕೆಲಸ ಮಾಡಿಸ್ತಾಳೆ. ಅವಳಿಗೆ

ಓದುವುದಕ್ಕೆ ಪುರುಸೊತ್ತು ಸಿಗುವುದಿಲ್ಲ. ಅವಳು ತಿಂಗಳಿಗೆ ೬೦೦ ರೂಪಾಯಿ ಸಂಬಳ ತರುವಾಗ ಅವರಲ್ಲಿ ೧೦೦ ರೂಪಾಯಿ ಅಡಿಗೆಯವರಿಗಾಗಿ ಕೊಟ್ಟರೆ ನಷ್ಟವೇನು ? ಒಂದು ವೇಳೆ ಓದದಿದ್ದ ಸೊಸೆ ಸಿಕ್ಕಿದ್ದರೆ ಏನಾಗುತ್ತಿತ್ತು? ನಮ್ಮ ಅಣ್ಣನ ಮನೆಯ ಪರಿಸ್ಥಿತಿ ಗೊತ್ತೇನು? ಐವತ್ತು ಸಾವಿರ ವರದಕ್ಷಿಣೆ ತೆಗೆದುಕೊಂಡು ಎಸ್.ಎಸ್.ಎಲ್.ಸಿ. ಆಗಿರುವ ಹುಡುಗಿಯನ್ನು ತಂದರು. ಅವಳು ರಾಣಿ ಹಾಗೆ ಕುಳಿತಿರುತ್ತಾಳೆ. ಬಡಿಸುವ ಕೆಲಸ ಸಹ ಮಾಡುವುದಿಲ್ಲ. ಅವಳಿಗೆ ಯಾರಾದರೂ ಚಿಕ್ಕ-ಪುಟ್ಟ ಕೆಲಸ ಹೇಳಿದರೆ 'ನಮ್ಮ ಅಪ್ಪ ನಿಮ್ಮ ಮನೆಯಲ್ಲಿ ಕೆಲಸ ಮಾಡೋದಕ್ಕೋಸ್ಕರ ೫೦ ಸಾವಿರ ಕೊಡಲಿಲ್ಲ! ಆ ಹಣವನ್ನ ಬ್ಯಾಂಕ್‌ನಲ್ಲಿಡಿ. ಅದರಿಂದ ಬರೋ ಬಡ್ಡಿಯಲ್ಲಿ ಆಳು-ಕಾಳುಗಳನ್ನು ಇಡಿ' ಅಂತಾಳೆ. ಅಂತೂ ನನ್ನ ಸೊಸೆ ಅಂಥವಳಲ್ಲ. ಇಂತಹ ಸೊಸೆ ಸಿಗುವುದು ನಮ್ಮ ಅದೃಷ್ಟ ಅನ್ನು."

ತನ್ನ ಗಂಡ ಸೊಸೆಯನ್ನು ಹೊಗಳುತ್ತಿರುವುದನ್ನು ನೋಡಿ ರಮಾಳಿಗೆ ಸಹಿಸಲಾಗಲಿಲ್ಲ. ಅವಳು ಸಿಟ್ಟಿನಿಂದ ಹೇಳಿದಳು. "ನಾವು ಕೆಲಸ ಮಾಡೋದಕ್ಕೋಸ್ಕರ ಹುಟ್ಟಿದ್ದೇವೆ ಅನ್ನುವೆ? ನಮ್ಮ ತಂದೆ-ತಾತ. ಜಮೀನ್ದಾರರಾಗಿದ್ದರು. ನನ್ನ ತವರುಮನೆಯಲ್ಲಿ ಆಳು-ಕಾಳು. ಗಾಡಿ-ಪಾಡಿ ಎಲ್ಲಾ ಇದ್ದುವು. ಆದರೆ ನಾನಿಲ್ಲಿ ಏನು ಅನುಭವಿಸುತ್ತ ಇದ್ದೀನಿ?"

ವಾದ ಬೆಳೆಯುತ್ತಿರುವುದನ್ನು ನೋಡಿ ನಾನು ವೆಂಕಟೇಶ್ವರರಾವ್‌ನೊಂದಿಗೆ ರೂಮಿಗೆ ಹೋದೆ.

ವೆಂಕಟೇಶ್ವರರಾವ್ ಸಿಗರೇಟ್ ಕೇಸ್ ಮುಂದಿಡುತ್ತಾ ಹೇಳಿದ. "ನೀನು ಸಿಗರೇಟ್ ಬಿಟ್ಟಿರುವುದು ನನಗೆ ಗೊತ್ತು. ಆದರೆ ನನ್ನ ಆಸೆ. ನೀನು ಒಂದು ಸಿಗರೇಟನ್ನಾದರೂ ಸೇದು. ಇಲ್ಲ ಅನ್ನಬೇಡ. ಇಲ್ಲದಿದ್ದರೆ ನನಗೆ ತುಂಬ ಬೇಸರವಾಗುತ್ತೆ."

ನನಗೆ ರಾವ್‌ನನ್ನು ಆ ಸ್ಥಿತಿಯಲ್ಲಿ ಬೇಸರಪಡಿಸಲು ಇಷ್ಟವಿರಲಿಲ್ಲ. ಸಿಗರೇಟ್ ಹತ್ತಿಸಿ ಯೋಚಿಸ ತೊಡಗಿದೆ, 'ಇದ್ದಕ್ಕಿದ್ದಂತೆ ರಾವ್ ಮನೆಯಲ್ಲಿ ಏಕೆ ಕಲಹ ಪ್ರಾರಂಭವಾಯಿತು ?'

ರಾವ್ ಆ್ಯಶ್‌ಟ್ರೇ ತಂದು ಟೀಪಾಯಿ ಮೇಲಿಟ್ಟರು. ನನ್ನ ಉತ್ಸುಕತೆ ಕೆರಳಿತು. ಅದು ಬೆಳ್ಳಿಯ ಆ್ಯಶ್‌ಟ್ರೇ. ಮೊಚ್ಚೆಯ (ಕಿರ) ಆಕಾರದಲ್ಲಿ ಮಾಡಿತ್ತು. ಈ ತರಹದ ಆ್ಯಶ್‌ಟ್ರೇಯನ್ನು ನಾನು ಇದೇ ಮೊದಲ ಬಾರಿ ನೋಡಿದ್ದು. ನಾನು ರಾವ್‌ನನ್ನು ಕೇಳಿದೆ-

"ಈ ಆ್ಯಶ್‌ಟ್ರೇಯನ್ನು ನೀನು ಎಲ್ಲಿ ಕೊಂಡೆ?"

ರಾವ್ ದಾರ್ಶನಿಕನಂತೆ ಗಂಭೀರವಾದ. ಕ್ಷೀಣ ನಗೆ ಅವರ ಮುಖದಲ್ಲಿ ಲಾಸ್ಯವಾಡಿತು.

"ನಿನ್ನ ಹತ್ತಿರ ನಾನೇಕೆ ಬಚ್ಚಿಡಲಿ? ಈ ಆ್ಯಶ್‌ಟ್ರೇ ನನ್ನ ಜೊಳ್ಳು ಆದರ್ಶದ ಉಪಹಾಸ್ಯ ಮಾಡುವ ಅವಿಸ್ಮರಣೀಯ ಚಿಹ್ನೆ. ನಾನು ಮರೆತೂ ವರದಕ್ಷಿಣೆ ತೆಗೆದುಕೊಳ್ಳುವುದಿಲ್ಲ ಎಂದು ಕಾಲೇಜಿನಲ್ಲಿ ಶಪಥ ಮಾಡಿದ್ದು. ನಾನು ನನ್ನ ಮದುವೆಯ ಸಮಯದಲ್ಲಿ ಅದನ್ನು ಪಾಲನೆ ಮಾಡಿದ್ದು ನಿನಗೆ ಗೊತ್ತಿದೆ. ಆದರೆ ಏನು ಹೇಳಲಿ? ನನ್ನ ಮಗ ಸುರೇಶನ ಮದುವೆ ಪ್ರಸ್ತಾಪ ಬಂದಾಗ ನಾನು ವರದಕ್ಷಿಣೆ ಇಲ್ಲದೆ ಒಬ್ಬ ಸ್ನೇಹಿತನ ಮಗಳ ಸಂಬಂಧವನ್ನು ನಿಶ್ಚಯ ಮಾಡಿದೆ. ನನ್ನ ಶ್ರೀಮತಿಗೆ ಆ ಸಂಬಂಧ ಇಷ್ಟವಾಗಲಿಲ್ಲ. ಒಳ್ಳೆ ಮನೆತನದ ಅನೇಕ ಕನ್ಯಾಪಿತೃಗಳು ನಮ್ಮ ಮನೆಗೆ ಅಲೆದರು. ಆದರೆ ದೇವರಾಣೆ ಆ ಭಕ್ತ



"ವಾಂತಿ ನಿಲ್ಲೋಕೆ ನೀವು ಕೊಟ್ಟಿರೋ ಈ ಮಾತ್ರೆ ತಗೋತೀನಿ...ಮಾತ್ರೆ ನುಂಗೋಕೆ ವಾಂತಿ ಯಾದ್ರೆ... ಇನ್ನ್ಯಾವುದಾದ್ರೂ ಮಾತ್ರೆ ಕೊಡ್ತೀರಾ ಸಾ..."

ದಕ್ಷಿಣೆಗೆ ಪ್ರಸನ್ನಳಾಗಲಿಲ್ಲ. ಕೊನೆಗೆ ನಾನು ಈ ಸಂಬಂಧವನ್ನು ನಿಶ್ಚಯಿಸಿದೆ. ರಮಾ ಸೀಮಾಳನ್ನು ನೋಡಿದಳು ಒಪ್ಪಿದಳು. ಲಗ್ನ ನಿಶ್ಚಯವಾಯಿತು. ಆಹ್ವಾನ ಪತ್ರಿಕೆಗಳೂ ಮುದ್ರಿತವಾಯಿತು.

"ಮದುವೆಗೆ ಕೇವಲ ಹದಿನೈದು ದಿನಗಳಿದ್ದುವು. ರಮಾ ಯೋಚಿಸುತ್ತಿದ್ದಳು. ಸೀಮಾಳ ತಂದೆ ಸಿವಿಲ್ ಸಪ್ಲೈ ಆಫೀಸರ್. ಅವರೂ ಕೈಯಿಂದ ಸಂಪಾದನೆ ಮಾಡಿರಬಹುದು. ಇವರು ಕೇಳದೆ ಸಾವಿರಾರು ರೂಪಾಯಿಗಳು ಸಿಗಬಹುದು. ಕೊನೆಗೆ ಅದು ಹೇಗೋ. ಸೀಮಾಳ ತಂದೆ ಗಣ್ಯ ಮನುಷ್ಯ. ಪ್ರತಿಷ್ಠಿತ ವ್ಯಕ್ತಿ. ಹಾಗೇ ಪ್ರಾಮಾಣಿಕ ಮನುಷ್ಯ ಎನ್ನುವುದು ಅವಳ ಕಿವಿಗೆ ಬಿತ್ತು. ಅವರು ಯಾವಾಗಲೂ ಲಂಚ ತೆಗೆದುಕೊಂಡಿಲ್ಲ. ಅದ್ದರಿಂದ ಅವರು ಮದುವೆಯನ್ನು ವಿಜೃಂಭಣೆಯಿಂದ ಮಾಡುತ್ತಾರೆ ಹೊರತು ಒಂದು ಕಾಸೂ ವರದಕ್ಷಿಣೆ ರೂಪದಲ್ಲಿ ಕೊಡುವುದಿಲ್ಲ. ಸುಂದರ, ಸುಶೀಲ ಮತ್ತು ಯೋಗ್ಯ ಕನ್ಯೆಯನ್ನು ಕೊಡುವಾಗ ದಕ್ಷಿಣೆ ಏಕೆ ಕೊಡಬೇಕು?

"ನಾನು ಸೀಮಾಳ ತಂದೆಯನ್ನು ವರದಕ್ಷಿಣೆ ಕೇಳಿರಲಿಲ್ಲ. ಆದರೆ ನನ್ನ ಶ್ರೀಮತಿ 'ಸೀಮಾಳ ತಂದೆ ಹತ್ತಿರ ವರದಕ್ಷಿಣೆ ಕೇಳಿ' ಎಂದು ನನ್ನನ್ನು ಬಲವಂತ ಮಾಡುವುದಕ್ಕೆ ಶುರುಮಾಡಿದಳು.

"ಕೊನೆಗೆ ನಾನು ವಿವಶನಾದೆ. ಸಂಕೋಚದಿಂದ ಸೀಮಾಳ ತಂದೆಯ ಕಿವಿಯ ಮೇಲೆ ಈ ವಿಷಯ ಹಾಕಿದೆ. ನಾನು ಇಷ್ಟೇ ಹೇಳಿದೆ. ನೋಡಿ. ಎಷ್ಟೋ ಜನ ಲಕ್ಷಾಂತರ ರೂಪಾಯಿ ವರದಕ್ಷಿಣೆ ಆಸೆ ತೋರಿಸುತ್ತಾ ನನ್ನ ಮನೆಗೆ ಬಂದರು. ಆದರೆ ನಾನು ಆ ಸಂಬಂಧವನ್ನೆಲ್ಲಾ ನಿರಾಕರಿಸಿದೆ. ನಾನು ಕೇವಲ ಯೋಗ್ಯ, ಸುಂದರ ಮತ್ತು ಸುಗುಣೆಯಾದ ಹುಡುಗಿಗಾಗಿ ನೋಡುತ್ತಿದ್ದೆ. ನನ್ನ ಶ್ರೀಮತಿಯ ಯೋಚನೆಯೇ ಬೇರೆ. ಅಂತೂ ನಾನು ಹೇಳುವುದು ಏನೆಂದರೆ ನಮ್ಮಿಬ್ಬರ ಪರಿವಾರದ ಪ್ರತಿಷ್ಠೆಗೆ ತಕ್ಕಂತೆ ಉಚಿತವಾದಷ್ಟು ಹಣವನ್ನಾದರೂ ಕೊಡಲೇಬೇಕು. ಇಷ್ಟು ಮಾತನ್ನು ಹೇಳಿ ನಾನು ಮನೆಗೆ ಬಂದೆ. ಅವರು ಒಳ್ಳೇ ಮನುಷ್ಯರು ನನ್ನ ಮೇಲೆ ಕೋಪ ಮಾಡಿಕೊಳ್ಳಲಿಲ್ಲ.

"ನಾನು ಮನೆಗೆ ಬಂದು ರಮಾಗೆ ಹೇಳಿದೆ. ಸರಿಯಾದ ರಕಮ್ ವರದಕ್ಷಿಣೆಗೆ ಸಿಗುತ್ತೆ, ನೀನೇನೂ ಯೋಚನೆ ಮಾಡಬೇಡ. ಆದರೆ ಮದುವೆ ದಿನದವರೆಗೂ ಅವಳು ನನ್ನನ್ನು 'ಐವತ್ತು ಸಾವಿರ ಕೊಟ್ಟರೆ ನಿಮ್ಮ ಮಗನನ್ನು ಮದುವೆಯಾಗುವುದು ಎಂದು ಏಕೆ ಹೇಳಲಿಲ್ಲ' ಅಂತ ನನ್ನ ಬೈಯುತ್ತಲೇ ಇದ್ದಳು.

"ಒಂದು ವಾರದ ಮೇಲೆ ಸೀಮಾಳ ತಂದೆ ರೈಸ್ ಮಿಲ್ ಅಸೋಸಿಯೇಷನ್ನಿನ ಸದಸ್ಯರುಗಳನ್ನೆಲ್ಲಾ ಕರೆದಿದ್ದರೆಂದೂ ಅವರು ಹುಡುಗಿಗೆ ಒಂದು ದೊಡ್ಡ ಬೆಳ್ಳಿ ಪಾತ್ರೆಯನ್ನು ಪ್ರೆಸೆಂಟ್ ಮಾಡಿದರೆಂದೂ ತಿಳಿಯಿತು. ಅದೇ ಪಾತ್ರೆ ನಮಗೆ ವರದಕ್ಷಿಣೆ ರೂಪದಲ್ಲಿ ಸಿಕ್ಕಿತು. ನನ್ನ ಶ್ರೀಮತಿ ಮದುವೆ ಮುಗಿದ ಮೇಲೆ ಆ ಪಾತ್ರೆಯನ್ನು ರೂಮಿಗೆ ತೆಗೆದುಕೊಂಡು ಹೋಗಿ ಸುರಕ್ಷಿತವಾಗಿ ಇಟ್ಟಳು. ನನ್ನನ್ನು ಗುಟ್ಟಾಗಿ ಕರೆದು ಪಾತ್ರೆಯ ಮುಚ್ಚಳವನ್ನು ತೆಗೆದಳು. ಅವಳ ಕಣ್ಣುಗಳು ವಿಸ್ಮಯದಿಂದ ಹೊಳೆದುವು. ನೋಟಿನ ಕಂತೆಗಳಿಂದ ಆ ಪಾತ್ರೆ ತುಂಬಿತ್ತು.

"ರಮಾ ಎಲ್ಲಾ ಕಟ್ಟನ್ನೂ ನೆಲದ ಮೇಲೆ ಸುರಿದಳು. ಅದರಲ್ಲಿ ಒಟ್ಟು ಅರವತ್ತು ಸಾವಿರದ ನೂರ ಹದಿನಾರು ರೂಪಾಯಿಗಳಿದ್ದುವು. ರಮಾ ಸೀಮಾಳ ತಂದೆಯ ಔದಾರ್ಯವನ್ನು ಪ್ರಶಂಸೆ ಮಾಡುತ್ತಿದ್ದಳು. ಎಲ್ಲಾ ಹೊಸ ಹೊಸ ನೋಟುಗಳು, ನನಗೆ ಇವುಗಳೆಲ್ಲಾ...ಖೋಟಾ ನೋಟುಗಳಾಗಿದ್ದರೆ? ಎಂದು ಶಂಕೆ ಆಯಿತು?

"ರಮಾ ನೋಟಿನ ಕಟ್ಟುಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ಇಟ್ಟಳು. ಕೊನೆಗೆ ನಾನು ಆ ಪಾತ್ರೆಗೆ ಕೈ ಹಾಕಿದೆ. ಕೈಗೆ ಏನೊ ಒಂದು ಪದಾರ್ಥ ಸಿಕ್ಕಿತು... ಅದು ಬೆಳ್ಳಿಯ ಕೆರ! ನನ್ನ ಬೀಗ ಆ ಚಪ್ಪಲಿಯಿಂದ ನನ್ನ ತಲೆಯ ಮೇಲೆ ಅಲ್ಲ. ಹೃದಯದ ಮೇಲೆ ಹೊಡೆದಿದ್ದ!" ✡



# ಬೋರಿಸ್ ಬೋರಾ: ಹಿಡಿದವರಿಲ್ಲ !

'ಇಂಡಿಯನ್ ಚೈಲ್ಡ್'

ತನ್ನ ಅದ್ಭುತ ಕೈಚಳಕದಿಂದ ಕಿಸೆ ಕತ್ತರಿಸುವ ವಿದ್ಯೆಯಲ್ಲಿ ಪಾರಂಗತನಾದವನೊಬ್ಬನಿದ್ದಾನೆ. ಈತನನ್ನು ಪೋಲೀಸರೂ ಹಿಡಿಯುವುದಿಲ್ಲ, ನ್ಯಾಯಾಲಯಗಳೂ ಶಿಕ್ಷೆ ವಿಧಿಸುವದಿಲ್ಲ!

ಈ ಕಿಸೆಗಳ್ಳ, ಜುಜುಬಿ ಕಳ್ಳನಲ್ಲ. ಈತ ರಾಜಮಹಾರಾಜರ, ಪೋಲೀಸ್ ಅಧಿಕಾರಿಗಳ ಜೇಬುಗಳನ್ನು ಕತ್ತರಿಸುವವನೇ ಹೊರತು ಬೆಳಗಿನಿಂದ ಸಂಜೆಯವರೆಗೆ ದುಡಿದು ಸಂಬಳ ಸಾಲದ್ದಕ್ಕೆ ಹಣವನ್ನು ಎರವಲು ಪಡೆದು ಮನೆಯ ಹಾದಿ ಹಿಡಿವವರ ಕಿಸೆ ಕತ್ತರಿಸುವುದಿಲ್ಲ.

ಇವನ ಹೆಸರು ಬೋರಿಸ್ ಬೋರಾ. ಈ ಉದ್ಯೋಗವನ್ನಾತ ಹೊಟ್ಟೆ ತುಂಬುವ ಸಾಧನವೆಂದು ಮಾಡುವುದಿಲ್ಲ. ಬದಲು ಇದನ್ನೊಂದು ಕುಶಲ ಕಲೆಯಾಗಿ ತೋರಿಸುತ್ತಾನೆ. ಇಂತಹ ಪ್ರದರ್ಶನದಿಂದ ಸಾಕಷ್ಟು ಹಣ ಅವನಿಗೆ ಬರುವುದರಿಂದ ಕದ್ದ ವಸ್ತುಗಳನ್ನು ಅವುಗಳ ಮಾಲಕರಿಗೇ ಹಿಂದಿರುಗಿಸುತ್ತಾನೆ. ಇವನನ್ನು ಅವರು ಶಿಕ್ಷಿಸುವದಿರಲಿ, ಬೇಡವೆಂದರೂ ಆತನ ಕೈಚಳಕಕ್ಕೆ ಮನ್ನಣೆಯಿತ್ತು ಅವನನ್ನು ಸತ್ಕರಿಸುತ್ತಾರೆ.

ಒಬ್ಬ ಪತ್ರಿಕಾ ಪ್ರತಿನಿಧಿ ೧೯೩೬ ರಲ್ಲಿ ಈ ಬೋರಿಸ್ ಬೋರಾನ ಸಂದರ್ಶನಕ್ಕಾಗಿ ಬಂದ. ಬೋರಾ ನಗುತ್ತ ಅವನನ್ನು ಸ್ವಾಗತಿಸಿದ. ಮಾತನಾಡುತ್ತ ನಿಂತು ಇನ್ನೂ ಬಹಳ ಹೊತ್ತು ಕಳೆದಿರಲಿಲ್ಲ. ಅಷ್ಟರಲ್ಲಿ ಪತ್ರಿಕಾಪ್ರತಿನಿಧಿಯ ಪ್ಯಾಂಟು ಸಡಿಲಾಗಿ ಕೆಳಗಿಳಿಯಹತ್ತಿತು. ತನ್ನ ಪ್ಯಾಂಟು ಹೀಗೇಕೆ ಸಡಿಸಲಾಗುತ್ತಿದೆ ಎಂದು ಆ ಪ್ರತಿನಿಧಿ ತನ್ನ ಒಂದು ಕೈಯಿಂದ ಪ್ಯಾಂಟನ್ನು ಹಿಡಿದುಕೊಂಡ. ಅದಕ್ಕೆ ಕಾರಣ ಕೂಡಲೇ ಹೊಳೆಯಿತು. ಬೋರಾ ಅವನ ನಡುಪಟ್ಟಿಯನ್ನು ನಗುತ್ತಾ ಹಿಂದಿರುಗಿಸಿದಾಗ ಪ್ರತಿನಿಧಿ ಪೆಚ್ಚಾದ!

ಇನ್ನೊಮ್ಮೆ ಮತ್ತೊಬ್ಬ ಪತ್ರಿಕಾ ಪ್ರತಿನಿಧಿ ಸಂದರ್ಶನಕ್ಕೆ ಬಂದ. ಬೋರಾ ಹಾಗೂ ಪ್ರತಿನಿಧಿ ಎಷ್ಟೋ ಹೊತ್ತಿನವರೆಗೆ ಮಾತನಾಡಿದರು. ಬಳಿಕ ಪ್ರತಿನಿಧಿ ಬರೆದುಕೊಳ್ಳಲು ಪೆನ್ನು ಕಾಗದಗಳನ್ನು ತೆಗೆದ. ತನ್ನ ಎಡಗೈ ಕೈಗಡಿಯಾರ ಕಾಣೆಯಾಗಿದ್ದನ್ನು ನೋಡಿ ತಡಕಾಡಿದ. "ಏನೋ, ನಿಮ್ಮ ಗಡಿಯಾರವೇ? ಬಲಗೈ ನೋಡಿ," ಎಂದ ಬೋರಾ. ಮಾತಾಡುತ್ತಿದ್ದಾಗ ಆತನಿಗೇ ಗೊತ್ತಾಗದಂತೆ ಬೋರಾ ಗಡಿಯಾರ ಕಳಚಿ ಬಲಗೈಗೆ ಕಟ್ಟಿದ್ದು ಆಗ ಆ ಪತ್ರಿಕಾ ಪ್ರತಿನಿಧಿಯ ಗಮನಕ್ಕೆ ಬಂತು.

ಸ್ಕಾಟ್ಲೆಂಡ್ ಯಾರ್ಡಿನ ಗೌಪ್ಯಗಳನ್ನು ಹೊರಗೆ ಹಾಕುವುದರಲ್ಲಿ ಖ್ಯಾತನಾದ ಪತ್ರಿಕಾಕರ್ತನೊಬ್ಬ ಒಮ್ಮೆ ಬೋರಾನ ಸಂದರ್ಶನಕ್ಕೆ ಬಂದ. ಬರೆದುಕೊಳ್ಳಲು ಪೆನ್ ತೆಗೆದುಕೊಳ್ಳಲು ಜೇಬಿಗೆ ಕೈಹಾಕಿದರೆ ಅದು ಮಂಗಮಾಯವಾಗಿತ್ತು. "ನಾನು ಎಲ್ಲರಂತೆ ಅಲ್ಲ, ನೀವೇ ತೆಗೆದುಕೊಂಡಿದ್ದೀರಿ, ಕೊಡಿ ನನ್ನ ಪೆನ್ನನ್ನು," ಎಂದನಾತ. "ಹಾಗಾದರೆ ಒಂದು ಸಿಗರೇಟು ಕೊಡಿ. ಅಂದರೆ ಖಂಡಿತ ಕೊಡುತ್ತೇನೆ," ಎಂದ ಬೋರಾ. ಪತ್ರಕರ್ತ ಸಿಗರೇಟು

ಗಾಗಿ ಕಿಸೆಯನ್ನು ತಡಕಾಡಿದ. ಸಿಗರೇಟಿನ ಡಬ್ಬಿಯು ಮಾಯವಾಗಿತ್ತು. ಆಗ ಬೋರಾ ನಗುತ್ತಾ ಪೆನ್ನನ್ನೂ ಸಿಗರೇಟು ಡಬ್ಬಿಯನ್ನೂ ಕೊಟ್ಟ. ಇನ್ನೊಂದು ಪ್ರಸಂಗ. ಸಂದರ್ಶಕನೊಬ್ಬ ಟಿಪ್ಪಣಿ ಬರೆದುಕೊಳ್ಳುತ್ತಿದ್ದ. ಬರೆಯುತ್ತಿದ್ದಂತೆ ಕಣ್ಣು ಮಂಜಾಯಿತು. ಕೊನೆಗೆ ತಾನು ಬರೆದದ್ದೇ ಕಾಣದಾಯಿತು. ಕನ್ನಡಕವನ್ನು ಒರೆಸಬೇಕೆಂದು ಕನ್ನಡಕಕ್ಕೆ ಕೈ ಹಾಕಲು ನೋಡಿದರೆ ಕನ್ನಡಕವೇ ಮಾಯವಾಗಿತ್ತು. ಬೋರಾ ಅದನ್ನು ಹಿಂದಿರುಗಿಸಿದಾಗ ಪ್ರತಿನಿಧಿ ಆಶ್ಚರ್ಯದಿಂದ ತಬ್ಬಿಬ್ಬಾದ.

೧೯೪೮ರಲ್ಲಿ ಯುಗೋಸ್ಲಾವಿಯದಲ್ಲಿ ಅಂತಾರಾಷ್ಟ್ರೀಯ ಪೋಲೀಸ ಅಧಿಕಾರಿಗಳ ಸಭೆ ಸೇರಿತ್ತು. ಬೋರಾನ ಕೈಚಳಕದ ಪರೀಕ್ಷೆಗಾಗಿ ಅವನು ಹೇಗೆ ತನ್ನ ಕಾರ್ಯಸಾಧಿಸುತ್ತಾನೆಂದು ತಿಳಿಯಲು ಬೋರಾನಿಗೂ ಆಮಂತ್ರಣ ಹೋಗಿತ್ತು. ಮೂರು ದಿನ ಅನೇಕ ವಿಷಯಗಳ ಬಗ್ಗೆ ಚರ್ಚೆ ನಡೆಯಿತು. ಆದರೆ ನಾಲ್ಕನೆಯ ದಿನ ಬೋರಾ ಬರುವುದು ತಡವಾಯಿತು. ಬೋರಾ ದೊಡ್ಡ ಚೀಲವನ್ನು ಹೊತ್ತುಕೊಂಡು ಬಂದ. ಅಧಿಕಾರಿಗಳು ಕುತೂಹಲದಿಂದ ಅದರಲ್ಲೇನಿದೆ ? ಎಂದು ಕೇಳಿದರು. ಕೂಡಲೇ ಮೂರು ದಿನಗಳಲ್ಲಿ ತನ್ನಿಂದ ಅಪಹರಿಸಲ್ಪಟ್ಟ ಸಾಮಾನುಗಳೆಲ್ಲವನ್ನೂ ಅವರವರಿಗೇ ಹಿಂದಿರುಗಿಸಿದಾಗ ತಮ್ಮ ಸಾಮಾನುಗಳು ಕಳೆದು ಹೋಗಿರಬೇಕೆಂದು ತಿಳಿದುಕೊಂಡಿದ್ದ ಅಧಿಕಾರಿಗಳಿಗೆ ಮಂಕು ಕವಿದಂತಾಗಿತ್ತು.

೧೯೪೭ರಲ್ಲೊಮ್ಮೆ ಜರ್ಮನಿಯಲ್ಲಿ ಮಿತ್ರರಾಷ್ಟ್ರಗಳ ಸೈನ್ಯಗಳಿಗೆ ಸೇರಿದ ಸೈನ್ಯಾಧಿಕಾರಿಗಳ ಒಂದು ಸಂತೋಷಕೂಟ ನಡೆಯಿತು. ಆಹ್ವಾನದ ಮೇರೆಗೆ ಬೋರಾ ಅಲ್ಲಿಯೂ ಭೇಟಿಯಿತ್ತ. ಆತ. ಸ್ವಾಭಾವಿಕವಾಗಿ ಎಲ್ಲರೊಂದಿಗೆ ಅಲ್ಪೋಪಹಾರಕ್ಕೆ ಅಲ್ಲಿ ಕುಳಿತಿದ್ದ. ರಶಿಯಾದ ಮಾರ್ಶಲ್ ಝುಕೋವರೂ ಹಾಜರಿದ್ದರು. ಸಂತೋಷಕೂಟದ ಕೊನೆಯಲ್ಲಿ ಸೈನ್ಯಾಧಿಕಾರಿಗಳು ಕರವಸ್ತ್ರಕ್ಕಾಗಿ ಕೈಹಾಕಿದರೆ ಜೇಬು ಬರಿದೋ ಬರಿದು. ಬೋರಾ ನಗುತ್ತ, "ಮಾರ್ಶಲ್ ಝುಕೋವ್, ನಿಮ್ಮ ಕರವಸ್ತ್ರವಾದರೂ ಇದೆಯೋ ಇಲ್ಲವೋ ನೋಡಿಕೊಳ್ಳಿ," ಎಂದ. ಝುಕೋವರು ಕಿಸೆಗೆ ಕೈಹಾಕಿದರೆ ಅದು ಕರವಸ್ತ್ರಗಳಿಂದ ತುಂಬಿಹೋಗಿತ್ತು. ತುಂಬಾ ಸಂಕೋಚವೆನಿಸಿದರೂ ಇದು ಬೋರಾನ ಆಟವೆಂದು ಸುಲಭವಾಗಿಯೇ ಅರಿತು ಎಲ್ಲವನ್ನೂ ಅವರವರಿಗೆ ಹಿಂದಿರುಗಿಸಿ ಬೋರೀಸ್ ಬೋರಾನನ್ನು ಹೊಗಳಿದರಂತೆ.

ಈತನಿಗೆ ಮಹಾ ಮಹಾ ಅಧಿಕಾರಿಗಳ ಸ್ನೇಹವಿದೆ! ಕೈಚಳಕ ಪ್ರದರ್ಶನದಿಂದಾತ ಲಕ್ಷಾಂತರ ರೂಪಾಯಿಗಳನ್ನು ಗಳಿಸಿದ್ದಾನೆ. ಬೋರಾ ಹುಟ್ಟಿದ್ದು ಯುಗೋಸ್ಲಾವಿಯದಲ್ಲಿ. ಬೆಳೆದದ್ದು ಆಸ್ಟ್ರೇಲಿಯಾದಲ್ಲಿ. ಹನ್ನೆರಡು ವರ್ಷದವನಿರುವಾಗಿನಿಂದ ಈ ವಿದ್ಯೆಯನ್ನು ಬೆಳೆಸಿಕೊಂಡು ಬಂದ ಈತ, ಈ ವಿದ್ಯೆ ತನ್ನೊಂದಿಗೆ ಅಳಿಯದಿರಲೆಂದು ತನ್ನ ಮಗನಿಗೂ ಕಲಿಸಿದ್ದಾನೆ. ಮಗನ ಬಗೆಗೆ ಈತನಿಗಿರುವ ಒಂದೇ ಒಂದು ಅತೃಪ್ತಿಯೆಂದರೆ ಆತ ತನ್ನಂತೆಯೇ ಕಿಸೆಗಳ್ಳತನವನ್ನು ಕಲಿತರೂ ಸಂಗೀತದಲ್ಲಿ ವಿಷಯದಲ್ಲಿ ಓರಂಗ ಜೇಬನಿಗಿಂತ ಒಂದು ಗುಂಜಿ ಹೆಚ್ಚಿನವನೆಂದು. ಏಕೆಂದರೆ ಬೋರೀಸ್ ಬೋರಾ ಸಂಗೀತ ತಜ್ಞ. ಮಗನಿಗೋ ಸಂಗೀತದ ಗಂಧ ಗಾಳಿಯೂ ಇಲ್ಲ. ಆದರೇನು ? ಕೈಚಳಕದ ವಿದ್ಯೆಯಾದರೂ ಇದೆಯಲ್ಲ !

✡

[ ಆಧಾರ ]



▫ ಕಳೆದು ಹೋದ ಸುದಿನಗಳನ್ನು ದುರ್ದಿನಗಳಲ್ಲಿ ನೆನಪು ಮಾಡಿಕೊಳ್ಳುವುದರಿಂದ ಮನಸ್ಸು ಮತ್ತಷ್ಟು ಖಿನ್ನವಾಗುತ್ತದೆ.

— ದಾಂತೆ

# ಲಿನ್ ಫೆಂಗ್ ಮೆಯಿನ್

**ಟಿ. ಎಂ. ಸುಬ್ಬರಾಯ**

ಲಿನ್ ಫಿಂಗ್ ಮೆಯಿನ್ ಚೀನಾ ದೇಶದ ಖ್ಯಾತ ಕಲಾವಿದ. ಆತನ ಕಲಾಕೃತಿಗಳ ಆರಾಧಕರು ಸ್ವದೇಶ ಹಾಗೂ ವಿದೇಶಗಳಲ್ಲಿ ಎಲ್ಲೆಡೆ ಇದ್ದಾರೆ. ಜಗತ್ತಿನ ಅಗ್ರಮಾನ್ಯ ಕಲಾ ವಿಮರ್ಶಕರು ಮೆಯಿನ್‌ನ ಕೃತಿಗಳನ್ನು ಮುಕ್ತ ಕಂಠದಿಂದ ಪ್ರಶಂಸಿಸಿದ್ದಾರೆ.

ಲಿನ್ ಫಿಂಗ್ ಮೆಯಿನ್ ಹುಟ್ಟಿದ್ದು ೧೯೦೦ರಲ್ಲಿ. ಫ್ರಾನ್ಸ್ ಮತ್ತು ಜರ್ಮನಿಗಳಲ್ಲಿ ಆತನ ಶಿಕ್ಷಣ ನಡೆಯಿತು. ಶಿಕ್ಷಣದ ನಂತರ ೧೯೨೫ರಲ್ಲಿ ಚೀನಾಕ್ಕೆ ಮರಳಿದ ಮೆಯಿನ್ ಪೈಪಿಂಗ್ (ಪೀಕಿಂಗ್) ಕಲಾಶಾಲೆಯ ಪ್ರಿನ್ಸಿಪಾಲನಾಗಿ ನೇಮಕಗೊಂಡ. ಕಿರಿಯ ಕಲಾವಿದನಿಗೆ ದೊರೆತ ಹಿರಿಯ ಪುರಸ್ಕಾರವೆಂದು ಚೀನಾದ ಪತ್ರಿಕೆಗಳು ಈ ಕುರಿತು ಬರೆದವು. ಮತ್ತೆ ಕೆಲವೇ ವರುಷಗಳಲ್ಲಿ ಆತ ಹ್ಯಾಂಗ್‌ಚೋ ಕಲಾ ವಿದ್ಯಾಲಯದ ಪ್ರಿನ್ಸಿಪಾಲನಾಗಿ ನೇಮಿಸಲ್ಪಟ್ಟ. ೧೯೪೯ರಲ್ಲಿ ಚೀನಾದಲ್ಲಿ ಜನತಾ ಗಣರಾಜ್ಯ ಸ್ಥಾಪನೆಗೊಂಡಾಗ ತನ್ನ ಆಡಳಿತ ಹುದ್ದೆಗೆ ರಾಜೀನಾಮೆ ನೀಡಿದ ಮೆಯಿನ್ ಚಿತ್ರರಚನೆಯಲ್ಲಿ ತನ್ನ [illegible] ಕರಿಸಿದ. ಅದೇ ವರುಷ ಆತ ಚೀನಾ ಕಲಾವಿದರ ಸಂಘದ ಶಾಂಘೈ ಶಾಖೆಯ ಉಪಾಧ್ಯಕ್ಷನಾಗಿ ಆಯ್ಕೆಗೊಂಡ.

ಚೀನಾದ ಸಾಂಪ್ರದಾಯಿಕ ಕಲೆಯನ್ನೂ ಪಾಶ್ಚಾತ್ಯ ನವ್ಯ ಮಾದರಿಯ ರಚನೆಯ ವಿಧಾನವನ್ನೂ ಅಳವಡಿಸಿಕೊಂಡು ಹೊರಹೊಮ್ಮಿದ ಕಲೆ ಲಿನ್ ಫಿಂಗ್ ಮೆಯಿನ್‌ನದು. ವಿದೇಶದಲ್ಲಿದ್ದಾಗ ಮತ್ತು ಸ್ವದೇಶಕ್ಕೆ ಮರಳಿದ ಮೊದಲ ದಿನಗಳಲ್ಲಿ ಆತ ತೈಲವರ್ಣದಲ್ಲಿ ಜಮೀನ್ದಾರೀ ವಿರೋಧೀ ಸಂಗತಿಗಳ ಬಗೆಗೆ ಚಿತ್ರ ರಚಿಸಿದ.

ತನ್ನ ದೇಶದ ಸಾಂಪ್ರದಾಯಿಕ ಹಾಗೂ ಜಾನಪದ ಕಲೆಗಳನ್ನು ಆಳವಾಗಿ ಅಭ್ಯಸಿಸಿದ ಆತ ರಾಜಮನೆತನಗಳ ಬಗ್ಗೆ ಹಲವು ಕಲಾಕೃತಿಗಳನ್ನು ರಚಿಸಿದ. ಕ್ರಿಸ್ತಶಕ ೫೮೧–೯೦೭ರ ನಡುವೆ ಆಳಿದ ರಾಜಮನೆತನಗಳಾದ ಸೂಯಿ ಮತ್ತು ಟಾಂಗ್ ವಂಶಗಳಲ್ಲಿಯ ಪ್ರಸಿದ್ಧರ ಚಿತ್ರಗಳನ್ನೂ ನಿಸರ್ಗದ ಚಿತ್ರಗಳನ್ನೂ ರಚಿಸಿದ. ಹ್ಯಾನ್ ವಂಶದ ವರ ಶಿಲ್ಪಕೃತಿ ತಯಾರಿಸಿದ. ಪಿಂಗಾಣಿ ಪಾತ್ರೆಗಳ ಮೇಲೆ ಸಂಗ್ ವಂಶದ ಚಿತ್ರ ಬರೆದ. ಆತ ರಚಿಸಿದ

ನೆರಳು ಬೆಳಕಿನ ಚಿತ್ರಗಳು ಕಲಾಮಾಧ್ಯಮದಲ್ಲಿ ಆತ ಸಾಧಿಸಿದ ಸಿದ್ಧಿಯನ್ನು ತೋರಿಸುತ್ತವೆ.

ಸಾಂಪ್ರದಾಯಿಕ ಶೈಲಿಯನ್ನು ಕುರಿತಂತೆ ಒಲವನ್ನು ಮೆಯಿನ್ ತಳೆದಿದ್ದರೂ ಕಲಾನಿರ್ಮಿತಿಗೆ ತಡೆಯೊಡ್ಡುವ ಅಭಿವ್ಯಕ್ತಿಗೆ ಆತಂಕವಾಗುವ ಕೆಲವು ಸಾಂಪ್ರದಾಯಿಕ ನಿಯಮಗಳನ್ನು ವಿರೋಧಿಸುವಲ್ಲಿ ಆತ ಹಿಂದೆ ಬೀಳಲಿಲ್ಲ. "ರಾಷ್ಟ್ರೀಯ ಸಂಪ್ರದಾಯವನ್ನು ಕಲಾವಿದ ತನ್ನ ಕಲಾಕೃತಿ ರಚನೆಗೆ ತಳಹದಿಯಾಗಿ ಇರಿಸಿಕೊಳ್ಳಬೇಕು. ಅದರ ಜೊತೆಗೆ ಒಳ್ಳೆಯದಾಗಿ ತೋರುವ ವಿದೇಶೀ ಸಂಸ್ಕೃತಿಯ ವಿಚಾರವನ್ನೂ ಕೃತಿಯಲ್ಲಿ ಬಳಸಿಕೊಳ್ಳಲು ಹಿಂಜರಿಯಕೂಡದು" ಎಂಬುದು ಮೆಯಿನ್‌ನ ವಾದ. 'ಹಾರಾಟದಲ್ಲಿ ಕಾಡುಬಾತುಕೋಳಿಗಳು' ಎನ್ನುವ ಆತನ ಚಿತ್ರ ಕಪ್ಪು ಮಸಿಯಲ್ಲಿ ಚಿತ್ರಣಗೊಂಡಿದ್ದರೂ ಅದರಲ್ಲಿ ಮೂಡಿಬಂದ ಗೆರೆಗಳು ಸತ್ವಯುತವಾದವು. ಮನೆಗೆ ಮರಳುತ್ತಿರುವ ಬಾತುಕೋಳಿಗಳು ಆಗಸದಲ್ಲಿ ಕಪ್ಪು ಮೋಡಗಳನ್ನೇ ಹೋಲುವಂತಿವೆ ಎಂಬುದು



**ಹಾರಾಟದಲ್ಲಿ ಕಾಡು ಬಾತುಕೋಳಿಗಳು**

ಗಾನಾವನ ಅಂಶ.

ಮೆಯಿನ್‌ನ ಚಿತ್ರಗಳು ಮುಖ್ಯವಾಗಿ ಸತ್ಯ ಮತ್ತು ಕಲ್ಪನೆಯನ್ನು ಒಂದಾಗಿಸುವ ಯತ್ನ ಮಾಡುವುದೆಂಬುದನ್ನು ವಿಮರ್ಶಕರು ಎತ್ತಿ ತೋರಿಸಿದ್ದಾರೆ. ಆರಂಭದಲ್ಲಿ ಮೆಯಿನ್ ಸಾಮಾನ್ಯ ವರ್ಣಲೇಪನ ಮಾಡುತ್ತಿದ್ದ. ಮೃದು ಬ್ರಶ್ ವರ್ಕ್‌ಗಳಲ್ಲಿ ಆತ ತೃಪ್ತಿಪಡುತ್ತಿದ್ದ. ಕ್ರಮೇಣ ಆತನ ರಚನಾ ವಿಧಾನ ಬದಲಾಯಿತು. ಮಿಶ್ರವರ್ಣ ನೆರಳು ಬೆಳಕು ವೈವಿಧ್ಯಗಳು ಆತನ ಕೃತಿಯಲ್ಲಿ ಮಿಂಚಲಾರಂಭಿಸಿದವು. ಇದು ಮೆಯಿನ್ ವಿಧಾನ ಎಂಬುದಾಗಿ ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಗುವಂತೆ ಆತ ಒಂದು ತನ್ನದೇ ಆದ ಹೊಸ ಮಾರ್ಗ ಹಿಡಿದು ಹೊರಟ.

ಲಿನ್ ಫೆಂಗ್ ಮೆಯಿನ್ ವ್ಯಕ್ತಿಶಃ ಸರಳ, ಪ್ರಾಮಾಣಿಕ. ಸಂಗೀತ ಸಾಹಿತ್ಯ ಎರಡನ್ನೂ ಅಭ್ಯಾಸಮಾಡಿದ್ದ. ಅವುಗಳ ಬಗ್ಗೆ ಆಸಕ್ತಿ ಉಳಿ



ಇನ್ನೊ ಜೀವಂತ ಕಲಾಕೃತಿ

**ಎಲೆಗಳ ನಡುವೆ ಕಪ್ಪು ಹಕ್ಕಿ**

ಸಿಕೊಂಡಿದ್ದ. ಪರ್ವತ ಸನಿಹದ ಹಳ್ಳಿಗಾಡಿನಲ್ಲಿ ಆತ ನೆಲೆಸಿದ್ದುದರ ಪರಿಣಾಮವಾಗಿ ನಿಸರ್ಗದಿಂದ ಬಹಳಷ್ಟು ಪ್ರಭಾವಿತನಾಗಿದ್ದ. ಪ್ರವಾಸವೆಂದರೆ ಮೆಯಿನ್‌ನಿಗೆ ಖುಷಿ.

ಇಂದು ಚೀನಾದ ಯುವಕಲಾವಿದರಿಗೆ ಸ್ಫೂರ್ತಿಯ ಸೆಲೆಯಾಗಿ ಎಂಬತ್ತೊಂದರ ತುಂಬು ಬಾಳ್ವೆ ನಡೆಸುತ್ತಿದ್ದಾನೆ ಲಿನ್ ಫೆಂಗ್ ಮೆಯಿನ್. ✡






ತೆಗೆದುಕೊಳ್ಳಿರಿ

**ಗ್ಲುಕೋನ್-ಡಿ** ⓣ

ನಿಮ್ಮ
ವಿಶ್ವಾಸದಾತ್ರ
ಗ್ಲುಕೋಸ್-ಡಿಯ
ಹೊಸ ಹೆಸರು.

# ದಕ್ಷಿಣ ಕನ್ನಡದ ಜೈನ ಸಂಪತ್ತು

**ವೈ. ಉಮಾನಾಥ ಶೆಣೈ**

ವಿಶಾಲ ಪಡುಗಡಲಿಂದ ಬೀಸುವ ತಂಗಾಳಿಗೆ ಮೈಯೊಡ್ಡಿ ನಿಂತು ಸಸ್ಯಶ್ಯಾಮಲದಿಂದ ಕಂಗೊಳಿಸುವ ಕರಾವಳಿಯ ಕನ್ನಡನಾಡಾದ ದಕ್ಷಿಣ ಕನ್ನಡ ಜಿಲ್ಲೆಯು ಇತಿಹಾಸ ಪ್ರಸಿದ್ಧವಾದುದು. ಅಹಿಂಸಾಪರರೂ ಶಾಂತಿಪ್ರಿಯರೂ ಧರ್ಮನಿಷ್ಠರೂ ಆದ ಜೈನ ಅರಸರು ಈ ಜಿಲ್ಲೆಯನ್ನು ಹಲವಾರು ಶತಮಾನಗಳ ಕಾಲ ಆಳುತ್ತಿದ್ದುದರಿಂದ ಇಲ್ಲಿಯ ಇತಿಹಾಸವು ರಾಜ್ಯವಿಸ್ತರಣೆ ಮತ್ತು ಕದನಗಳಿಂದಲೇ ತುಂಬಿರದೆ ಅದೊಂದು ಸಾಂಸ್ಕೃತಿಕ ಮಹೋನ್ನತ ಸಾಧನೆಗಳ ಸುಂದರ ಕಥೆಯಾಗಿದೆ. ಇಂದಿಗೂ ಅಳಿದು ಉಳಿದಿರುವ ಇಲ್ಲಿಯ ಗುಡಿಗಳು, ಬಸದಿಗಳು, ಮಠಗಳು, ಮಾನಸ್ತಂಭಗಳು, ಬೃಹತ್ ಏಕಶಿಲಾ ಗೊಮ್ಮಟ ವಿಗ್ರಹಗಳು ಇಲ್ಲಿನ ಗತವೈಭವವನ್ನು ಸಾರುವುದರೊಂದಿಗೆ ಇತಿಹಾಸಕಾರರನ್ನೂ ಸಂದರ್ಶಕರನ್ನೂ ಕೈ ನೀಡಿ ಕರೆಯುತ್ತವೆ.

ಕ್ರಿಸ್ತಪೂರ್ವ ೩ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಭದ್ರವಾಗಿ ತಳವೂರಿದ ಜೈನ ಧರ್ಮವು ಕೆಲವೇ ಶತಮಾನಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೂ ಹರಡಿ ಕ್ರಮೇಣ ಒಂದು ಸಾಮಾಜಿಕ ಶಕ್ತಿಯಾಗಿ ರಾಜಕೀಯ ಅಧಿಕಾರವನ್ನೂ ಪಡೆದುಕೊಂಡಿತು. ಕ್ರಿ. ಶ. ೧೦ ನೆಯ ಶತಮಾನದ ನಂತರ ಕೆಲವು ಜೈನ ರಾಜಮನೆತನಗಳು ರಾಜ್ಯಾಡಳಿತವನ್ನು ಪ್ರಾರಂಭಿಸಿ ಹೊಯ್ಸಳ ಮತ್ತು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ಪಡೆದುವು. ಮೂಡುಬಿದ್ರೆಯ ಚೌಟರು, ಕಾರ್ಕಳದ ಭೈರರು, ಬಂಗಾಡಿಯ ಬಂಗರು, ವೇಣೂರಿನ ಅಜಿಲರು, ಮುಲ್ಕಿಯ ಸಾವಂತರು; ಸುರಾಲಿನ ತೋಳಹರು ಮತ್ತು ಹೊಸಂಗಡಿಯ ಚೆನ್ನಾಣಗಳು – ಇವು ದಕ್ಷಿಣ ಕನ್ನಡ ಜಿಲ್ಲೆಯನ್ನು ಆಳಿದ ಪ್ರಸಿದ್ಧ ರಾಜಮನೆತನಗಳು. ಕೆಳದಿಯ ನಾಯಕರು ಮತ್ತು ಟಿಪ್ಪು ಸುಲ್ತಾನರ ಆಕ್ರಮಣಗಳಿಂದಾಗಿ ಬಹಳ ಕಷ್ಟ-ನಷ್ಟಗಳಿಗೆ ಒಳಗಾದರೂ ಈ ಜೈನ ಅರಸರು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿರುವರು. ಇವರ ಯಥೋಚಿತ ಅಧ್ಯಯನವು ಒಂದು ಮಹಾ ಪ್ರಬಂಧ ರಚನೆಗೆ ಸಹಾಯಕವಾಗಬಲ್ಲದು.

ಪರಮತ ಸಹಿಷ್ಣುಗಳಾದ ಜೈನರು ರಾಜಕೀಯ ಅಧಿಕಾರ ಹೊಂದಿದ್ದರೂ ಅನ್ಯ ಧರ್ಮೀಯರ ಮೇಲೆ ತಮ್ಮ ಧರ್ಮವನ್ನು ಹೇರಿಸಿದ್ದಾಗಲಿ ಹಿಂಸಾತ್ಮಕ ರೀತಿಯಲ್ಲಿ ಸ್ವಮತ ಪ್ರಚಾರ ಮಾಡಿದುದಾಗಲಿ ಈ ನಾಡಿನ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಇತರ ಧರ್ಮಗಳ ಆದರ್ಶದಿಂದ ಪ್ರಭಾವಿತರಾಗಿ ಅವರೊಂದಿಗೆ ಬೆರೆತು ರಾಜ್ಯಭಾರ ಮಾಡುತ್ತಿದ್ದರು. ಅಲ್ಲದೆ ಈ ಜೈನ ಅರಸರುಗಳು ಹಿಂದೂ ದೇವತೆಗಳನ್ನೇ ತಮ್ಮ ರಾಜ್ಯ ದೇವತೆಗಳನ್ನಾಗಿ ಅಂಗೀಕರಿಸಿದ್ದರು. ಉದಾಹರಣೆಗೆ ಬಂಗರಿಗೆ ಸೋಮನಾಥನೂ ಅಜಿಲರಿಗೆ ಮಹಾಲಿಂಗೇಶ್ವರನೂ ಮೂಲ್ಕಿಯ ಸಾವಂತರಿಗೆ ಆದಿ ಜನಾರ್ದನನೂ, ಹೊಸಂಗಡಿಯ ಚೆನ್ನಾಣಿಗಳಿಗೆ ವೇಣುಗೋಪಾಲಕೃಷ್ಣನೂ ರಾಜ್ಯ ದೇವತೆಗಳಾಗಿದ್ದರು. ಆ ಕಾಲದ ಜೈನೇತರ ಅರಸರಾಗಿದ್ದ ಮಂಗಳೂರಿನ ಆಲೂಪರಿಗೂ ವಿಟ್ಲದ ಹೆಗ್ಗಡೆಗಳಿಗೂ ಇವರು ಸ್ನೇಹಿತರಾಗಿದ್ದರು. ಈ ಕಾಲದಲ್ಲಿ ಜೈನ ಹಾಗೂ ಅನ್ಯಮತೀಯರ ಜೀವನವು ಸಾಮರಸ್ಯದಿಂದಲೂ ಸಹಕಾರ ಸೌಹಾರ್ದಗಳಿಂದಲೂ ಕೂಡಿತ್ತು.

ಇಲ್ಲಿಯ ಹಲವಾರು ಜೈನ ವ್ಯಾಪಾರಿಗಳು (ಶ್ರೇಷ್ಠಿಗಳು– 'ಹಲ್ಲರು') ವಿದೇಶ ವ್ಯಾಪಾರದ ಮೂಲಕ ಅಗತ್ಯದ ಹಾಗೂ ಅಮೂಲ್ಯವಾದ ವಸ್ತುಗಳನ್ನು ಸ್ವದೇಶಕ್ಕೆ ಒದಗಿಸಿ ಕೊಡುತ್ತಿದ್ದುದಲ್ಲದೆ ಇಲ್ಲಿಯ ಸಂಸ್ಕೃತಿಯನ್ನು ಅಲ್ಲಿ ಹರಡುತ್ತಿದ್ದರು. ವ್ಯಾಪಾರ, ಕೃಷಿ, ನಿತ್ಯೋಪಯೋಗಿ ವಸ್ತುಗಳ ಉತ್ಪಾದನೆ, ಧಾರ್ಮಿಕ ಕಾರ್ಯಕ್ರಮಗಳ ನಿರ್ವಹಣೆ, ಗುಡಿ ಗೋಪುರಗಳ ನಿರ್ಮಾಣ ಇತ್ಯಾದಿ ಉದ್ಯೋಗಗಳನ್ನು ಅನುಸರಿಸುತ್ತಿದ್ದು ನಾಡಿನ ಆರ್ಥಿಕ ಬೆಳವಣಿಗೆಗೆ ಕಾರಣರಾಗಿದ್ದರು.

ಸಾಹಿತ್ಯ ಕ್ಷೇತ್ರಕ್ಕೆ ಜೈನರ ಕೊಡುಗೆ ಅಪಾರವಾದುದು. ಜೈನ ವೇದಗಳಾದ ಧವಳಾ ಗ್ರಂಥಗಳು ಇಲ್ಲಿಯೇ ದೊರಕಿದವುಗಳು. "ಭರತೇಶ ವೈಭವ"ವನ್ನು ಸಾಂಗತ್ಯದಲ್ಲಿ ರಚಿಸಿದ ರತ್ನಾಕರವರ್ಣಿಯು ಇಲ್ಲಿಯ ಒಬ್ಬ ಮಹಾನ್ ಜೈನ ಕವಿ. ಇನ್ನೊಂದು ಸಾಂಗತ್ಯ ಕೃತಿಯಾದ "ರಾಮ ಕಥಾ ಚರಿತ್ರೆ"ಯ ಕರ್ತೃಗಳಾದ ಚಂದ್ರಶೇಖರನೂ ಪದ್ಮನಾಭನೂ ಇಲ್ಲಿಯವರೆ. ಈ ಜಿಲ್ಲೆಯ ಇತರ ಪ್ರಸಿದ್ಧ ಜೈನ ಕವಿಗಳೆಂದರೆ ಕಲ್ಯಾಣಕೀರ್ತಿ, ವೇಣೂರ ಚಂದ್ರಮ, ನಾಗಚಂದ್ರ, ಲಲಿತಕೀರ್ತಿ, ಬಾಹುಬಲಿ, ಆದಿಯಪ್ಪ, ವಿಜಯಣ್ಣ ಮುಂತಾದವರು. "ಶಬ್ದಾನುಶಾಸನ"ದ ಕರ್ತೃವಾದ ಭಟ್ಟಾಕಳಂಕದೇವನೂ, "ಕಬ್ಬಿಗರ ಕಾವ"ದ ಕರ್ತೃವಾದ ಆಂಡಯ್ಯನೂ ಈ ಜಿಲ್ಲೆಯವರೆಂದು ಹಲವು ವಿಮರ್ಶಕರ ಅಭಿಪ್ರಾಯ.

ಸಾಹಿತ್ಯ ಸೃಷ್ಟಿಯ ಈ ಭವ್ಯ ಪರಂಪರೆ ಇಂದಿಗೂ ಮುಂದುವರಿಯುತ್ತದೆ. ದಿ. ನೇಮಿಸಾಗರವರ್ಣಿ, ದಿ. ಡಿ. ಮಂಜಯ್ಯ ಹೆಗ್ಗಡೆ, ದಿ. ಲೋಕನಾಥ ಶಾಸ್ತ್ರಿ, ದಿ. ಭುಜಬಲಿ ಶಾಸ್ತ್ರಿ, ಶ್ರೀ ದೇವಕುಮಾರ ಜೈನ, ಶ್ರೀ ಬಿ. ಶಾಂತರಾಜ ಶಾಸ್ತ್ರಿ, ಶ್ರೀ ಚಂದ್ರರಾಜ ಜೈನ ಮುಂತಾದವರ ಸಾಹಿತ್ಯ ಸೇವೆ ಅಮೋಘವಾದುದು.

## ಜೈನ ಗುರುಪೀಠಗಳು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೈನ ಧರ್ಮವು ಪ್ರವರ್ಧಮಾನಕ್ಕೆ ಬರಲು ಇಲ್ಲಿಯ ಜೈನ ಮಠಗಳು ಪ್ರಮುಖ ಪಾತ್ರ ವಹಿಸಿದ್ದವು. ಇಲ್ಲಿ ಮೂರು ಪರಂಪರೆಯ ನಾಲ್ಕು ಮಠಗಳಿವೆ. ಶ್ರವಣಬೆಳಗೊಳದಲ್ಲಿರುವಂತೆಯೇ ಮೂಡುಬಿದ್ರೆಯಲ್ಲಿಯೂ ಚಾರುಕೀರ್ತಿ ಭಟ್ಟಾರಕ ಪರಂಪರೆಯ ಮಠವಿದೆ. ಇದು ೧೨೨೦ ರಲ್ಲಿ ಸ್ಥಾಪಿಸಲ್ಪಟ್ಟಿತು. ೧೯೭೫ ರಲ್ಲಿ ಪೀಠಾರೂಢರಾಗಿರುವ ಈಗಿನ ಭಟ್ಟಾರಕ ಶ್ರೀಮದಭಿನವ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಗಳು ಮಹಾವಿದ್ಯಾವಂತರಾಗಿದ್ದಾರೆ. ನಲ್ಲೂರಿನಲ್ಲಿ ಇದೇ ಪರಂಪರೆಯ ಇನ್ನೊಂದು ಮಠವಿದ್ದು ಇದೇ ಪೀಠದಿಂದ ನಡೆಸಲ್ಪಡುತ್ತಿದೆ. ಎರಡನೆಯದಾಗಿ ಕಾರ್ಕಳದಲ್ಲಿ ಲಲಿತಕೀರ್ತಿ ಪರಂಪರೆಯ ಮಠವಿದೆ. ಇದು ೧೫ನೇ ಶತಮಾನದ ಪ್ರಾರಂಭದಲ್ಲಿ ಸ್ಥಾಪಿಸಲ್ಪಟ್ಟಿತು ಎಂದು ತಿಳಿದುಬರುತ್ತದೆ. ಪ್ರಸ್ತುತ ಸ್ವಾಮಿಗಳಾಗಿರುವ ಶ್ರೀ ಲಲಿತಕೀರ್ತಿ ಭಟ್ಟಾರಕರು ಧಾರ್ಮಿಕ ಜಾಗೃತಿ ಉಂಟುಮಾಡುತ್ತ ಜೈನ ಸಮಾಜಕ್ಕೆ ವಿಶೇಷ ಸೇವೆ ಸಲ್ಲಿಸುತ್ತಿದ್ದಾರೆ. ಮೂರನೆಯದಾಗಿ, ವರಾಂಗದಲ್ಲಿ ಹೊಂಬುಜದಲ್ಲಿರುವ ದೇವೇಂದ್ರಕೀರ್ತಿ ಪರಂಪರೆಯ ಮಠದ

ಶಾಖೆಯಿದೆ.

ಈ ಮೂರು ಪೀಠಾಧಿಪತಿಗಳಲ್ಲದೆ ಶ್ರವಣ ಬೆಳಗೊಳದಲ್ಲಿರುವ ಚಾರುಕೀರ್ತಿ ಭಟ್ಟಾರಕರೂ ದಕ್ಷಿಣ ಕನ್ನಡ ಜಿಲ್ಲೆಯ ಜೈನ ಸಮಾಜದ ಆಧ್ಯಾತ್ಮಿಕ ರತ್ನಗಳು.

ಇಲ್ಲಿಯ ಜನಜೀವನದ ಮೇಲಾದ ಜೈನರ ಪ್ರಭಾವವು ಗಣನೀಯವಾದದು. ಅಹಿಂಸೆ, ಸಸ್ಯಾಹಾರ, ನೈರ್ಮಲ್ಯ, ಸಂಯಮ, ಆಧ್ಯಾತ್ಮಿಕತೆ ಇತ್ಯಾದಿಗಳು ಜನಜೀವನದಲ್ಲಿ ಹೆಚ್ಚು ರೂಢಿಗೆ ಬರಲು ಜೈನರೇ ಬಹಳಷ್ಟು ಕಾರಣರು. ಅಳಿಯ ಸಂತಾನ ಪದ್ಧತಿಯು ಜೈನರಲ್ಲಿ ಪ್ರಾರಂಭವಾಗಿ ಈಗಲೂ ಹಲವು ಸಮಾಜಗಳಲ್ಲಿ ಪ್ರತಿ ಹಿಂದೆ. ಶಿಲ್ಪಕಲೆಯಲ್ಲಿ ಇವರು ಹೊಸದೊಂದು ಮಾದರಿಯನ್ನೇ ಹಾಕಿಕೊಟ್ಟರು ಎಂದರೂ ತಪ್ಪಿಲ್ಲ. ಈ ಜಿಲ್ಲೆಯಲ್ಲಿ ಇವರು ಮಾಡಿದ ಸಾಧನೆಗಳ ಸಿಂಹಾವಲೋಕನಕ್ಕಾಗಿ ಕೆಲವು ಪ್ರಮುಖ ಜೈನ ಕೇಂದ್ರಗಳನ್ನು ಪರಿಶೀಲಿಸುವುದು ಉಚಿತ.

## ಮೂಡಬಿದ್ರೆ

ಮೂಡಬಿದ್ರೆಯು ದಕ್ಷಿಣ ಕನ್ನಡ ಜಿಲ್ಲೆಯ ಒಂದು ಪ್ರಮುಖ ಜೈನ ಕೇಂದ್ರ. ಇದನ್ನು ಜೈನ ಕಾಶಿ ಎಂದೂ ಕರೆಯಲಾಗಿದೆ. ಇಲ್ಲಿ ಚಾರುಕೀರ್ತಿ ಭಟ್ಟಾರಕ ಪರಂಪರೆಯ ಮಠವಿದೆ. ಐತಿಹಾಸಿಕ ಪ್ರಸಿದ್ಧವಾದ ಸಾವಿರ ಕಂಬದ ಬಸದಿ (ತ್ರಿಭುವನ ತಿಲಕ ಚೂಡಾಮಣಿ) ಇರುವುದು ಇಲ್ಲಿಯೇ. ಜೈನ ವೇದವೆಂದು ಪ್ರಸಿದ್ಧಿ ಹೊಂದಿದ ಧವಳಾ (ಧವಳಾ, ಜಯ ಧವಳಾ, ಮಹಾ ಧವಳಾ) ಗ್ರಂಥಗಳಿಂದಾಗಿಯೂ ಅಮೂಲ್ಯ ನವರತ್ನ ಖಚಿತವಾದ ಪವಿತ್ರ ಜಿನಬಿಂಬಗಳಿಂದಾಗಿಯೂ ಜೈನ ಧರ್ಮದ ಗತ ವೈಭವವನ್ನು ಸಾರಿ ಹೇಳುವ ಹದಿನೆಂಟು ಬಸದಿಗಳಿಂದಾಗಿಯೂ ಈ ಕ್ಷೇತ್ರವು ಸಂದರ್ಶನೀಯವಾಗಿದೆ. ಚೌಟ ಅರಸರು ಇಲ್ಲಿಂದಲೇ ರಾಜ್ಯಭಾರ ಮಾಡುತ್ತಿದ್ದುದರಿಂದಲೂ ಈಗಲೂ ಇಲ್ಲಿರುವ ಅವರ ಅರಮನೆಯಿಂದಾಗಿಯೂ ಇದೊಂದು ಐತಿಹಾಸಿಕ ಸ್ಥಳವೂ ಆಗಿದೆ. ಕನ್ನಡದ ಮಹಾಕವಿ ರತ್ನಾಕರವರ್ಣಿಯು ಇದೇ ಊರಿನವನು. ಶ್ರೀ ವೀರವಾಣಿ ವಿಲಾಸ ಜೈನ ಸಿದ್ಧಾಂತ ಭವನ ಎಂಬ ಅಮೂಲ್ಯ ಗ್ರಂಥ ಸಂಗ್ರಹವೂ "ಶ್ರೀ ರಮಾರಾಣಿ ಜೈನ ಶೋಧ ಸಂಸ್ಥಾನ" ಎಂಬ ಸಂಶೋಧನಾ ಕೇಂದ್ರವೂ ಇಲ್ಲಿನ ಇತರ ಆಕರ್ಷಣೆಗಳಾಗಿವೆ. ಇಲ್ಲಿಯ ಜೈನ ವಿದ್ಯಾವರ್ಧಕ ಸಂಘವು ಹಲವು ವಿದ್ಯಾಸಂಸ್ಥೆಗಳನ್ನು ನಡೆಸಿಕೊಂಡು ಬರುತ್ತಿದ್ದು ಇತ್ತೀಚೆಗೆ ಶ್ರೀ ಧವಳಾ ಕಾಲೇಜನ್ನೂ ಸ್ಥಾಪಿಸಿದೆ.

## ಕಾರ್ಕಳ

ಕಾರ್ಕಳವು ಶ್ರೀ ಗೊಮ್ಮಟೇಶ್ವರನ ನೆಲೆ. ನಲವತ್ತೆರಡು ಅಡಿಗಳಷ್ಟು ಎತ್ತರ ಇರುವ ಈ ಭವ್ಯ ಏಕಶಿಲಾ ವಿಗ್ರಹದ ಎದುರು ಗುಡ್ಡದಲ್ಲಿರುವುದೇ ಚತುರ್ಮುಖ ಬಸದಿ. (ತ್ರಿಭುವನ ಜಿನ ಚೈತ್ಯಾಲಯ) ಧರ್ಮಸ್ಥಳದ ಗೊಮ್ಮಟೇಶ್ವರ, ಫಿರೋಜಾಬಾದಿಗೆ ಕಳುಹಿಸಲಾದ ಗೊಮ್ಮಟೇಶ್ವರ. ಜಪಾನ ದೇಶಕ್ಕೆ ಕಳುಹಿಸಲಾದ ಸುಮಾರು ಬೌದ್ಧ ವಿಗ್ರಹಗಳು ಮತ್ತು ಸುಂದರ ಅವಲೋಕಿತೇಶ್ವರ ವಿಗ್ರಹ – ಇವು ಎದ್ದು ಬಂದುದು ಈ ಕಾರ್ಕಳದ ದಿವ್ಯ ಭೂಮಿಯಿಂದ. ಕಳಸ, ಕಾರ್ಕಳ ರಾಜ್ಯವನ್ನು ಭೈರರಸರು ಆಳಿದುದು ಇದೇ ಐತಿಹಾಸಿಕ ಪಟ್ಟಣವಾದ ಕಾರ್ಕಳದಿಂದ. ಇದು ಇತಿಹಾಸಕಾರರಿಗೂ ಪುರಾತತ್ವ ಶೋಧಕರಿಗೂ ಆಕರ್ಷಕವಾಗಿರುವಂತೆಯೇ ಒಂದು ಶಿಲ್ಪಕಲಾ ಶಾಸ್ತ್ರದ ಕೇಂದ್ರವೂ ಆಗಿದೆ. ಚರಿತ್ರ ಕಾಲದ ಹದಿನೆಂಟು ಬಸದಿಗಳೂ ಹಿರಿಯಂಗಡಿಯ ಮಾನಸ್ತಂಭ, ಅನೆಕೆರೆ ಬಸದಿ, ಕೆರೆವಾಸೆಯ ಬಸದಿಗಳು, ಅನಂತಶಯನ ದೇವಸ್ಥಾನ ಇವು ಇಲ್ಲಿನ ಅಪೂರ್ವ ಶಿಲ್ಪಕಲಾಕೃತಿಗಳು. ಕನ್ನಡದ ಕವಿಗಳಾದ ಲಲಿತಕೀರ್ತಿ, ನಂದಳಿಕೆ ಲಕ್ಷ್ಮೀನಾರಣಪ್ಪ, ನಾಗಚಂದ್ರ, ಕಲ್ಯಾಣಕೀರ್ತಿ, ಚದುರಚಂದ್ರಮರು ಇಲ್ಲಿಯವರೇ. ಲಲಿತಕೀರ್ತಿ ಭಟ್ಟಾರಕ ಮಠವಿರುವುದು ಇಲ್ಲಿಯೇ.

## ವೇಣೂರು

ಹಲವು ಶತಮಾನಗಳ ಕಾಲ ಅಜಿಲರ ರಾಜಧಾನಿಯಾಗಿ ಮೆರೆದ ಈ ಚಿಕ್ಕ ಪಟ್ಟಣ ಹಿಂದಿನ ರಾಜವಂಶದ ವೈಭವವನ್ನು ಸಾರಿ ಹೇಳುತ್ತಿದೆ. ಇಲ್ಲಿರುವ ಮೂವತ್ತೈದು ಅಡಿ ಎತ್ತರದ ಗೊಮ್ಮಟೇಶ್ವರ ವಿಗ್ರಹವೂ ೧೮ ತೀರ್ಥಂಕರರ

ಮೂರ್ತಿಗಳನ್ನು ಹೊಂದಿರುವ ತೀರ್ಥಂಕರ ಬಸದಿ ಹಾಗೂ ಐತಿಹಾಸಿಕ ಮೌಲ್ಯವುಳ್ಳವುಗಳು. ಅಕ್ಕಂಗಳ ಬಸದಿ, ಚಿನ್ನಾಣಿ ಬಸದಿ, ಶ್ರೀ ಪಾರ್ಶ್ವನಾಥ ಬಸದಿ, ಶ್ರೀ ಶಾಂತೀಶ್ವರ ಬಸದಿ, ಶ್ರೀ ಆದೇಶ್ವರ ಬಸದಿಗಳು ಪ್ರಮುಖವಾದ ರಚನೆಗಳು. ಪಕ್ಕದಲ್ಲಿರುವ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಬಳಿಯಲ್ಲಿ ಅಜಿಲರ ಅಳಿದುಳಿದ ಅರಮನೆಯ ಅವಶೇಷಗಳಿವೆ.

## ಧರ್ಮಸ್ಥಳ

ಧರ್ಮಸ್ಥಳವು ಒಂದು ಪ್ರಖ್ಯಾತ ಯಾತ್ರಾ ಸ್ಥಳ. ಶ್ರೀ ಮಂಜುನಾಥಸ್ವಾಮಿ ಮತ್ತು ಧರ್ಮ ದೇವತೆಗಳು ನೆಲೆಸಿರುವ ಪುಣ್ಯಭೂಮಿ. ಇದೊಂದು ಜೈನ ಕ್ಷೇತ್ರ. ಹೆಗ್ಗಡೆ(ಜೈನರು)ಯವರಿಂದ ಪ್ರಾದುರ್ಭಾವಕ್ಕೆ ಬಂದ ಈ ಕ್ಷೇತ್ರದ ಮಹಾದ್ವಾರದ ಬಳಿಯ ಗುಡ್ಡದಲ್ಲಿ ೩೯ ಅಡಿ ಎತ್ತರದ ಭವ್ಯ ಏಕಶಿಲಾ ಗೊಮ್ಮಟ ವಿಗ್ರಹವನ್ನೂ ಇನ್ನೊಂದೆಡೆ ಶ್ರೀ ಚಂದ್ರನಾಥ ಬಸದಿಯನ್ನೂ ಕಾಣುತ್ತೇವೆ. ಇಂದಿನ ಧರ್ಮಾಧಿಕಾರಿಗಳಾಗಿರುವ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರಿಂದ ಪ್ರವರ್ಧಮಾನಕ್ಕೆ ಬರುತ್ತಿರುವ ಈ ಕ್ಷೇತ್ರದ ಪರಿಸರದಲ್ಲಿ ಬೆಳೆಯುತ್ತಿರುವ ವಿದ್ಯಾಸಂಸ್ಥೆಗಳು, ನಡೆಯುತ್ತಿರುವ ಅನ್ನದಾನ ಮತ್ತು ವೈದ್ಯಕೀಯ ಸೇವೆ, ದೀನ ದಲಿತರಿಗೆ ಸಹಾಯ, ಸಾಹಿತ್ಯ ಸಮ್ಮೇಳನಗಳು, ಧರ್ಮ ಸಮ್ಮೇಳನಗಳು ಶ್ರೀ ಕ್ಷೇತ್ರದ ಹಿರಿಮೆಗೆ ಇನ್ನಷ್ಟು ಕಳೆಗೂಡಿಸುತ್ತಿವೆ.

## ವರಾಂಗ

ಕಾರ್ಕಳದ ಉತ್ತರ ದಿಕ್ಕಿನಲ್ಲಿರುವ ವರಾಂಗವು ಒಂದು ಅತ್ಯಂತ ಪುರಾತನವಾದ ಜೈನ ಕೇಂದ್ರ. ಇಲ್ಲಿ ಮನೋಜ್ಞವಾದ ದೇವೇಂದ್ರಕೀರ್ತಿ ಸ್ವಾಮಿಗಳ ಮಠ ಇರುತಿದೆ. ಇಲ್ಲಿ ಬಹು ಪ್ರಾಚೀನವಾದ ದೊಡ್ಡದೊಂದು ಕೆರೆಯ ಮಧ್ಯದಲ್ಲಿರುವ ಚತುರ್ಮುಖ ಬಸದಿಯೂ ಶಿಲಾನಿರ್ಮಿತ ಶ್ರೀ ನೇಮಿನಾಥ ಬಸದಿಯೂ ಹಲವಾರು ಶಿಲಾ, ತಾಮ್ರ ಶಾಸನಗಳೂ ಗಮನಾರ್ಹವಾಗಿವೆ.

## ಬಾರಕೂರು

ಉಡುಪಿಯಿಂದ ೯ ಮೈಲು ದೂರದಲ್ಲಿರುವ ಸೀತಾ ನದಿಯ ದಡದಲ್ಲಿರುವ ಬಾರಕೂರು ಬಹುಶಃ ಅತ್ಯಂತ ಪ್ರಾಚೀನವಾದ ಜೈನ ಕೇಂದ್ರ. ಇದು ವಿಜಯನಗರ ಸಾಮ್ರಾಜ್ಯದ ಬಾರಕೂರು ರಾಜ್ಯದ ರಾಜಧಾನಿ ಹಾಗೂ ಪುರಾತನ ವಿದೇಶೀ ವ್ಯಾಪಾರ ಕೇಂದ್ರ. ಇಕ್ಕೇರಿಯ ನಾಯಕರ ದಾಳಿಯ ನಂತರ ಇದು ತನ್ನ ಪ್ರಾಮುಖ್ಯವನ್ನು ಕಳೆದುಕೊಂಡು ಇಂದಿಗೆ ಕೇವಲ ಒಂದು ಸಂಶೋಧನಾ ಯೋಗ್ಯವಾದ ಸ್ಥಳವಾಗಿದೆ. ಇಲ್ಲಿ ಅಳಿದು ಉಳಿದಿರುವ ಹಿರಿಯ ಬಸ್ತಿಯೂ ಕೋಟೆಯ ಮಾನಸ್ತಂಭವೂ ಹಿಂದಿನ ಕ್ರೂರ ಕದನಗಳಿಗೆ ಮೂಕಸಾಕ್ಷಿಗಳಾಗಿವೆ. ದಕ್ಷಿಣ ಕನ್ನಡದಲ್ಲಿ ಇಂದಿಗೂ ಪ್ರಚಾರದಲ್ಲಿರುವ ಅಳಿಯ ಕಟ್ಟುಗಳ ಪ್ರಾರಂಭವಾದುದು ಈ ಪ್ರಾಚೀನ ವಾಣಿಜ್ಯ ಕೇಂದ್ರದಿಂದಲೇ.

## ಬಂಗಾಡಿ

ಬೆಳ್ತಂಗಡಿ ತಾಲೂಕಿನಲ್ಲಿರುವ ಬಂಗಾಡಿಯು ಬಂಗ ಅರಸರ ರಾಜಧಾನಿಯಾಗಿ ಮೆರೆದ ಸ್ಥಳ.



“...ಇದರಿಂದ, ದೇಶದ ಎಲ್ಲಾ ಪುಣ್ಯಕ್ಷೇತ್ರ ದರ್ಶನ ಮಾಡಿದಷ್ಟೇ ಪುಣ್ಯ ಸಿಗುತ್ತಾ ಮಗೂ...?”

ಇಲ್ಲಿರುವ ಶಾಂತಿನಾಥ ಬಸದಿ, ಇಪ್ಪತ್ತು ನಾಲ್ಕು ತೀರ್ಥಂಕರರ ಬಸದಿ, ಶ್ರವಣಗುಂಡದಲ್ಲಿರುವ ಬ್ರಹ್ಮ – ಇವು ಪ್ರೇಕ್ಷಣೀಯ.

## ಅಳದಂಗಡಿ

ವೇಣೂರಿನ ಅಜಿಲರ ಒಂದು ಶಾಖೆಯವರು ಇಲ್ಲಿಂದ ರಾಜ್ಯಭಾರ ಮಾಡುತ್ತಿದ್ದರು. ಆ ವಂಶಸ್ಥರು ಈಗಲೂ ಇಲ್ಲಿ ಇರುವರು. ಇಲ್ಲಿ ಈಗ ಇರುವ ಹಳೆಯ ಪರಂಪರೆಯ ವಸ್ತುಗಳಲ್ಲದೇ, ಶ್ರೀ ಪಾರ್ಶ್ವನಾಥರ ಎರಡು ಬಸದಿಗಳೂ ಶ್ರೀ ಆದಿನಾಥರ ಒಂದು ಬಸದಿಯೂ ಬೆಟ್ಟದ ಬ್ರಹ್ಮದೇವರೂ ಸಂದರ್ಶನಾರ್ಹ.

## ನೆಲ್ಲಿಕಾರು

ನಿರ್ಗ್ರಂಥರಾಗಿದ್ದ ಶ್ರೀ ಅನಂತಕೀರ್ತಿ ಮುನಿಗಳಿಂದಾಗಿ ಈ ಕ್ಷೇತ್ರದ ಕೀರ್ತಿ ಹೆಚ್ಚಿತು. ಇಲ್ಲಿ ಶ್ರೀ ಅನಂತನಾಥರ ಬಸದಿ ಇದೆ. ಇಲ್ಲಿರುವ ಬ್ರಹ್ಮ ಯಕ್ಷ ಮತ್ತು ಕ್ಷೇತ್ರಪಾಲರು ವಿಶೇಷ ಭಕ್ತಿ ಗೌರವಾದರಗಳಿಗೆ ಪಾತ್ರರಾಗಿದ್ದಾರೆ.

## ನಲ್ಲೂರು

ಮೂಡುಬಿದ್ರೆಯಲ್ಲಿ ಶ್ರವಣಬೆಳಗೊಳದಿಂದ ಬಂದ ಸ್ವಾಮಿಗಳಿಂದ ಚಾರುಕೀರ್ತಿ ಮಠವು ಸ್ಥಾಪಿಸಲ್ಪಡುವುದರ ಮೊದಲೇ ಆ ಮಠದ ಶಾಖೆಯು ಇಲ್ಲಿ ಸ್ಥಾಪಿಸಲ್ಪಟ್ಟಿತು. ಆ ಭಟ್ಟಾರಕರು ತಾವು ತಮ್ಮೊಡನೆ ತಂದಿದ್ದ ಚಂದನದ ಸಿಂಹಾಸನ, ಘಂಟೆ ಹಾಗೂ ಆನೆ ಕಟ್ಟುವ ಸರಪಳಿಯನ್ನು ನಾವು ಇಂದಿಗೂ ಇಲ್ಲಿ ಕಾಣಬಹುದು. ಇಲ್ಲಿರುವ ಕೂಷ್ಮಾಂಡಿನೀ ಹಾಗೂ ಪದ್ಮಾವತಿ ಅಮ್ಮನವರ ವಿಗ್ರಹಗಳೂ ಶ್ರೀ ಪಾರ್ಶ್ವನಾಥರ ಬಸದಿಯೂ ಪ್ರೇಕ್ಷಣೀಯವಾಗಿವೆ.

## ಸುಬ್ರಹ್ಮಣ್ಯ

ತುಳುನಾಡಿನ (ದಕ್ಷಿಣ ಕನ್ನಡ ಜಿಲ್ಲೆಯ) ಸಪ್ತ ತೀರ್ಥಕ್ಷೇತ್ರಗಳಲ್ಲಿ ಒಂದಾದ ಶ್ರೀ ಕುಕ್ಕೇ ಸುಬ್ರಹ್ಮಣ್ಯವು ಹಿಂದೊಮ್ಮೆ ಜೈನರಾದ ಬಲ್ಲಾಳರಿಂದಲೂ ಬಂಗಾಡಿಯ ಬಂಗರಿಂದಲೂ ನೇರವಾಗಿ ಆಳಲ್ಪಡುತ್ತಿತ್ತು. ಈಗ ಜಾನುವಾರು ಜಾತ್ರೆ ನಡೆಯುವ ಕುಲ್ಕುಂದದ ಬಳಿಯಲ್ಲಿರುವ ಬಲ್ಲಾಳರ ಅರಮನೆಯ ಕುರುಹುಗಳೂ ಕುಮಾರ ಪರ್ವತದ ತಪ್ಪಲಲ್ಲಿರುವ ಹಾಳು ಬಿದ್ದಿರುವ ಬಾವಿಗಳೂ ಅಲ್ಲದೇ ಪಂಚಾಂಗಗಳೂ ಶಿಲಾ ಮಂಟಪಗಳೂ ಹಾಗೂ ಸುಬ್ರಹ್ಮಣ್ಯೇಶ್ವರನ ಎದುರಲ್ಲಿರುವ ಬಲ್ಲಾಳರಾಯನ ವಿಗ್ರಹವೂ ಇದಕ್ಕೆ ಸಾಕ್ಷಿಯಾಗಿವೆ.

ನಾವು ದಕ್ಷಿಣ ಕನ್ನಡ ಜಿಲ್ಲೆಯ ಯಾವುದೇ ಊರಿಗೆ ಹೋದರೂ ಅಲ್ಲಿ ಒಂದೆರಡು ಬಸದಿಗಳನ್ನಾಗಲಿ ಇತರ ಜೈನ ಸಂಸ್ಕೃತಿಯ ಅವಶೇಷಗಳನ್ನಾಗಲಿ ಕಂಡೇ ಕಾಣುತ್ತೇವೆ. ವಾಸ್ತುಶಿಲ್ಪದ ದೃಷ್ಟಿಯಿಂದಲೂ ಶಿಲ್ಪಕಲಾ ರಚನೆಗಳಿಂದಾಗಿಯೂ ಹಲವು ಬಸದಿಗಳು ವಿಶೇಷ ಅಧ್ಯಯನಕ್ಕೆ ಅರ್ಹವಾಗಿವೆ. ಇವು ನಮಗೆ ಹಂಪೆಯ ನೆನಪು ತಂದುಕೊಡುತ್ತವೆ. ಬಸದಿಗಳಲ್ಲಿರುವ ತೀರ್ಥಂಕರರ ವಿಗ್ರಹಗಳು ಸುಂದರವಾಗಿದ್ದು ಸಜೀವ ಕಳೆಯಿಂದ ಕೂಡಿದ್ದು ಬಹು ರಮಣೀಯವೂ ಸದಾ ಸ್ಮರಣೀಯವೂ ಆಗಿವೆ. "ನವನಾರೀ ಕುಂಜರ", "ಪಂಚನಾರೀ ತುರಗ"ದಂತಹ ಅಪೂರ್ವ ಕಲಾಕೃತಿಗಳೂ ವರ್ಣ ಚಿತ್ರಗಳೂ ನಿರ್ಲಕ್ಷಿಸಲ್ಪಟ್ಟಿವೆ. ವೇದ ಸಮಾನವಾದ ಧವಳಾ ಗ್ರಂಥಗಳು ಇಲ್ಲಿಯವುಗಳೇ ಆದರೂ, ಪ್ರಚಾರವನ್ನು ಪಡೆಯದೆ ಸಾಮಾನ್ಯರಿಗೆ ಅವುಗಳ ಮೌಲ್ಯವೇ ತಿಳಿದಿಲ್ಲ. ಅಸಂಖ್ಯಾತ ಹಸ್ತಲಿಖಿತ ಗ್ರಂಥಗಳು ಇನ್ನೂ ಮುದ್ರಣವನ್ನು ಕಾಣದೇ ರಾಶಿಯಾಗಿ ಬಿದ್ದಿವೆ. ಇಂತಹ ಅನರ್ಘ್ಯ ಸಾಹಿತ್ಯರತ್ನಗಳ ಬೆಲೆಯೂ ಅವುಗಳ ಅಮೂಲ್ಯ ಸಂದೇಶವೂ ನಮಗೆ ತಿಳಿಯದಾಗದೆ ಹೋಗಿವೆ. ಅತ್ಯುಪಯುಕ್ತವೂ ಅಮೂಲ್ಯವೂ ಆದ ಈ ನಾಡಿನ ಜೈನ ಸಂಪತ್ತು ಇಂದಿನ ದಿನಗಳಲ್ಲಾದರೂ ಬೆಳಗಿ, ಭವಿಷ್ಯದಲ್ಲಿ ರಾರಾಜಿಸುವಂತೆ ಪ್ರಯತ್ನಿಸುವುದು ನಮ್ಮೆಲ್ಲರ ಸಾಮಾಜಿಕ ಕರ್ತವ್ಯವಾಗಿದೆ.

★

# ದೇವರಲ್ಲಿ ನಂಬಿಕೆ ಬೇಡ

ಎಂ. ಎಸ್. ಕಿರ್ಲೋಸ್ಕರ

ದೇವರಲ್ಲಿ ನಾವು ನಂಬಿಕೆ ಇಡಬೇಕೆ?" (ಮಾರ್ಚ್) ಎಂಬ ನನ್ನ ಲೇಖನಕ್ಕೆ ಎಪ್ರಿಲ್ ಮತ್ತು ಮೇ ಸಂಚಿಕೆಗಳಲ್ಲಿ ಬಂದ ಪ್ರತಿಕ್ರಿಯೆಗಳಿಗೆ ನನ್ನ ಉತ್ತರಗಳು:

ಅನುಕೂಲಕರವಾಗಿ ಬರೆದವರಿಗೆ ನನ್ನ ಧನ್ಯವಾದಗಳು.

ದೇವರು ಎಂದರೆ ಏನು? ಇದರ ಬಗ್ಗೆ ಸರ್ವಮಾನ್ಯ ವ್ಯಾಖ್ಯೆ ಮಾಡಲಾಗಿದೆ. ಅದು ಕೆಳಗಿನಂತಿದೆ.

"ದೇವರೆಂದರೆ ಮಾನವಾತೀತ ರೂಪ. ಮಾನವನ ಜೀವನ ಮತ್ತು ನಿಸರ್ಗದ ಮೇಲೆ ಸ್ವಾಮಿತ್ವ ಹೊಂದಿರುವ ಅವನನ್ನು ನಾವು ಪೂಜಿಸುತ್ತೇವೆ. ಅಥವಾ ಒಂದು ಕಲ್ಪಿತ ರೂಪದಲ್ಲಿ ಪ್ರಾಣಿಯಲ್ಲಿ ಮತ್ತು ಯಾವುದೋ ವಸ್ತುವಿನಲ್ಲಿ ನಿಸರ್ಗದ ಮೇಲೆ ಮತ್ತು ಮಾನವನ ಜೀವನದ ಮೇಲೆ ಸ್ವಾಮಿತ್ವದ ಶಕ್ತಿ ಇರುತ್ತದೆ ಎಂದು ಕಲ್ಪಿಸಿ ಅದನ್ನು ಪೂಜಿಸುತ್ತೇವೆ."

ಆ ಅರ್ಥ ಬಿಟ್ಟು ಬೇರೆ ಬೇರೆ ಅರ್ಥ ಮಾಡಿದವರಿಗೆ ಉತ್ತರ ಕೊಡುವ ಅವಶ್ಯಕತೆಯಿಲ್ಲ. ಇದರಲ್ಲಿ "ಬದುಕಿನ ಸತ್ಯವೇ ದೇವರು"... "ಪ್ರತಿಮಾನವನಲ್ಲಿ ದೇವರಿದ್ದಾನೆ." "ಆನಂದದಲ್ಲಿ ಪರಮಾತ್ಮನನ್ನು ಕಾಣುವದು." "ಕಾಲಪುರುಷನೇ ದೇವರು." "ದೇವರೆಂಬ ಜೀವಿ ನಮಗೆ ಅಗೋಚರ." "ಆತ್ಮಜ್ಞಾನವೆಂದರೆ ದೇವರು"– ಇವು ಬರುತ್ತವೆ. ಪ್ರತಿಯೊಬ್ಬ ವ್ಯಕ್ತಿಯೂ ದೇವರ ವ್ಯಾಖ್ಯೆ ತನ್ನ ಮನಸ್ಸಿನಂತೆ ಮಾಡಿದರೆ ದೇವರ ಸಂಬಂಧಿ ಸಂವಾದವು ಆಗುವುದು ಶಕ್ಯವಿಲ್ಲ.

"ಬಾಹ್ಯ ಇಂದ್ರಿಗಳಿಗೆ ಗೋಚರವಾಗದಂತಹ ಶಕ್ತಿಗಳು ಇವೆ. ಇದು ಮನುಷ್ಯನಿಗೆ ಹೇಗೆ ಗೊತ್ತಾಯಿತು? ದೇವರೆಂದರೆ "ಅವನು ನಿರ್ಗುಣ. ನಿರಾಕಾರ ನಿರಂಕುಶ ಬ್ರಹ್ಮ. ಇದು ಶೂನ್ಯದ (nothing) ವ್ಯಾಖ್ಯೆಯ ಹೊರತು ದೇವರವಲ್ಲ.

ಭೌತಿಕ ಜ್ಞಾನವಿಭಾಗ ನನಗೆ ಗೊತ್ತು. ಆದರೆ ಆಧ್ಯಾತ್ಮಿಕ ಜ್ಞಾನದಿಂದ ಸಂಪಾದನೆಯಾದ ಜ್ಞಾನದ ವರ್ಣನೆ ನನಗೆ ಸಿಕ್ಕಿಲ್ಲ. ಸಾಕ್ಷಾತ್ಕಾರ, ಅನುಭೂತಿ ಅವರ್ಣನೀಯ ಆನಂದ ಇಂತಹ ಅರ್ಥಹೀನ ಶಬ್ದಗಳನ್ನು ಉಪಯೋಗಿಸಿದ್ದು ಮಾತ್ರ ಕಂಡು ಬರುತ್ತಿದೆ.

(೧) ಆಯುಷ್ಯದ ಬಹುತೇಕ ಭಾಗ ಕಷ್ಟ ಪಟ್ಟು ಉಪವಾಸ ಮಾಡಿ, ಕೊನೆಗೆ ಸಾಕ್ಷಾತ್ಕಾರವಾಯಿತು ಎಂಬ "ಅನುಭವ" ಪಡೆಯುವುದಕ್ಕಿಂತ, ಮಾದಕ ಪದಾರ್ಥ ಸೇವನೆಯಿಂದ ಪ್ರತಿ ದಿನ ತನ್ನ ಮನಸ್ಸಿಗೆ ಇಚ್ಛೆಯಾದಾಗ ಈ "ಸಾಕ್ಷಾತ್ಕಾರ" ಪಡೆಯುವದು ಸುಲಭವಲ್ಲವೇ? ಇವು ಎರಡು ಪ್ರಕಾರಗಳು ಸಂಪೂರ್ಣ ವ್ಯಕ್ತಿಗತ ಲಾಭಕ್ಕೆ ಮಾತ್ರ ಅಲ್ಲವೇ?

(೨) ಕಾಣದಿದ್ದರೂ ಬಾಹ್ಯೇಂದ್ರಿಯಗಳ ಇತರ ಇಂದ್ರಿಯಗಳಿಂದ ಗಾಳಿಯ ಜ್ಞಾನ ಸಂಪಾದಿಸಿ ಅದರ ವಿಶ್ಲೇಷಣೆ ಮಾಡಿ ಶಾಸ್ತ್ರಜ್ಞನು ಗಾಳಿಯ ಸಂಬಂಧಿ ಪೂರ್ಣ ವಿವರಗಳನ್ನು ಕೊಡಬಹುದು. ಆದರೆ ಎಲ್ಲ ತರಹದ ಆಧುನಿಕ ಉಪಕರಣ ಉಪಯೋಗಿಸಿ, ಕಲ್ಪಿತ ವಸ್ತುವನ್ನು ಕಂಡುಹಿಡಿಯುವುದು ವಿಜ್ಞಾನಿಗೆ ಶಕ್ಯವಾಗಿಲ್ಲ ಎಂಬ ಮಾತು ಒಪ್ಪಬೇಕಾಗುತ್ತದೆ.

(೩) ಇನ್ನು ಅಗೋಚರ ಶಕ್ತಿಯ ಸೃಷ್ಟಿಯ ಬಗ್ಗೆ ಹೇಳುವದಾದರೂ ಹೇಗೆ? ಹಾಗಾದರೆ ದೇವರು ಜಗತ್ತನ್ನು ಸೃಷ್ಟಿಸಿದ್ದಾನೆ ಎಂದು ಹೇಳುವದು ಹೇಗೆ ಸಾಧ್ಯ?

(೪) "ಅಮೀಬಾದ ಭಾಗಕ್ಕೆ ಜಲಚರಗಳು ದೇವರಾದರೆ ಚಲಚರಗಳ ಪಾಲಿಗೆ ಕೋತಿಯೇ ದೇವರು. ಮಂಗನ ಪಾಲಿಗೆ ಮಾನವನು ದೇವರೆನಿಸಿಕೊಳ್ಳುತ್ತಾನೆ" ಇದು ಲೇಖಕನ ಮಾನಸಿಕ ಕಲ್ಪನೆ ಮಾತ್ರ. ಇಲ್ಲಿ ಯಾರ ಮೇಲೆಯೂ ಯಾರದೂ ನಿಯಂತ್ರಣ ಇಲ್ಲ.

(೫) ವಿಶ್ವದಲ್ಲಿಯ ಘಟನೆಗಳು ಸುವ್ಯವಸ್ಥಿತವಾಗಿಲ್ಲ ಮತ್ತು ಸುಂದರವಾಗಿಯೂ ಇಲ್ಲ. ಎಲ್ಲ ತರಹದ ಅನಿಯಮಿತತೆ ಸ್ಫೋಟ-ನಷ್ಟಗಳು ಇವರಲ್ಲಿ ಕಂಡುಬರುತ್ತದೆ. ಪೃಥ್ವಿಯ ಮೇಲೆ ವಾಸ ಮಾಡುವ ಮನುಷ್ಯ ಮತ್ತು ಇತರ ಪ್ರಾಣಿಗಳ ಜೀವನ ಹೇಗೆ ನಡೆದಿದೆ ಇದರ ವರ್ಣನೆ ಕಷ್ಟಸಾಧ್ಯ.

(೩) ಭೌತಿಕ ಶಾಸ್ತ್ರಜ್ಞರು ಭೌತಿಕ ವಿಷಯದ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ಇದರಲ್ಲಿ ಅವರು ದೇವರ ವಿಚಾರ ಮಾಡುವದಿಲ್ಲ. ಅದರ ಆವಶ್ಯಕತೆಯಿದೆ ಎಂದೂ ಅವರಿಗೆ ಅನಿಸಿಲ್ಲ. ಅನಭಿಜ್ಞರು ಇಂತಹ ವಿಷಯದಲ್ಲಿ ಮಾತನಾಡಬಾರದು.

(೪) ಆಸೆ-ಆಕಾಂಕ್ಷೆ, ಇಚ್ಛಾಪೂರ್ತಿಯ ಸಲು

# ದೇವರನ್ನು

ಕಸ್ತೂರಿ ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ ಡಾ. ಎಂ.ಎಸ್. ಕಿರ್ಲೋಸ್ಕರ ಅವರು ಬರೆದ 'ದೇವರಲ್ಲಿ ನಾವು ನಂಬಿಕೆ ಇಡಬೇಕೇ?' ಎಂಬ ಲೇಖನ, ಅದಕ್ಕೆ ಉತ್ತರವಾಗಿ ಮೇ ಸಂಚಿಕೆಯಲ್ಲಿ ಪ್ರಕಟವಾದ ಪ್ರತಿಕ್ರಿಯೆಗಳು ನಿಜವಾಗಿಯೂ ಸ್ವಾರಸ್ಯಕರವಾದ ಉಚ್ಚ ಮಟ್ಟದ ಚರ್ಚೆಯೊಂದನ್ನು 'ಕಸ್ತೂರಿ'ಯ ವಾಚಕರಿಗೆ ಒದಗಿಸಿದೆ. ಇಂಥ ಉಚ್ಚ ಮಟ್ಟದ ಸ್ವಾರಸ್ಯಕರವಾದ ಚರ್ಚೆಗಳು ಆಗಾಗ 'ಕಸ್ತೂರಿ'ಯಲ್ಲಿ ನಡೆಯುತ್ತಿರುವುದನ್ನು ನಾನು ಬಹಳ ವರ್ಷಗಳಿಂದಲೂ ಗಮನಿಸುತ್ತ ಬಂದಿದ್ದೇನೆ. ಈ ಸತ್ಸಂಪ್ರದಾಯವನ್ನು ಕಸ್ತೂರಿ ಅನೂಚಾನವಾಗಿ ನಡೆಯಿಸಿಕೊಂಡು ಹೋಗಲಿ ಎಂದು ನಾನು ಹಾರೈಸುತ್ತೇನೆ.

ಡಾ. ಕಿರ್ಲೋಸ್ಕರರು ಈಗಲಾದರೂ ವಿಚಾರ ಮಾಡುವುದಕ್ಕಾಗಿ ಎರಡು ವಿಷಯಗಳನ್ನು ಈ ಪತ್ರದ ಮುಖಾಂತರ ಮುಂದಿಡುತ್ತೇನೆ. ದೇವರನ್ನು ನಂಬುವುದೂ ಬಿಡುವುದೂ ಬರೀ ಒಂದು ಬೌದ್ಧಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾದ ಚರ್ಚೆಯ ವಿಷಯವಲ್ಲ ಮತ್ತು ಅದು ಬರೀ ಬೌದ್ಧಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾದ ಚರ್ಚೆಯ ವಿಷಯವೂ ಆಗಬಾರದು.

ಒಬ್ಬ ರೋಗಿಯು 'ಡಾಕ್ಟರರನ್ನು ನಾವು ನಂಬಬೇಕೇ?' ಎಂದು ಬರೀ ಚರ್ಚಿಸುತ್ತ ಕುಳಿತರೆ ಎಂದೂ ಅವನ ರೋಗವು ಗುಣವಾಗದು. ಅವನು ಡಾಕ್ಟರರನ್ನು ನಂಬಿ ಔಷಧವನ್ನು ತೆಗೆದುಕೊಂಡಾಗ ಮಾತ್ರ ಅವನ ರೋಗವು ಗುಣವಾಗುತ್ತದೆ. ಹಾಗೇ ದೇವರನ್ನು ನಾವು ನಂಬಬೇಕೇ? ಎಂದು ಬರೀ ಚರ್ಚೆ ಮಾಡುತ್ತ ಕುಳಿತರೆ ಅವನ ಅಸ್ತಿತ್ವವಾಗಲಿ ಮಹಿಮೆಯಾಗಲಿ ನಮಗೆ ತಿಳಿಯುವುದಿಲ್ಲ. ದೇವರನ್ನು ನಂಬಿ ಆರಾಧನೆ ಮಾಡಿದರೆ ಖಚಿತವಾಗಿಯೂ ಅವನ ಅಸ್ತಿತ್ವದ ಹಾಗೂ ಮಹಿಮೆಯ ಅರಿವು [illegible]

ವಾಗಿ ಸಹಾಯ ಬೇಡುವದು ರಕ್ಷಣಾರ್ಥ ಪ್ರಾರ್ಥನೆ ಮಾಡುವದು ಮತ್ತು ದೇವರು ಕೋಪಗೊಳ್ಳಬಾರದೆಂದು ಆಸ್ತಿಕರು ದೇವರ ಧ್ಯಾನ ಪೂಜೆ ಮಾಡಿದರೆ ಇದರಲ್ಲಿ ತಪ್ಪೇನು? ದೇವರ ಪ್ರಯೋಜನವಾದರೂ ಏನು? ದೇವರು ಇದ್ದಾನೆ ದೇವರು ಇಲ್ಲ, ಈ ಬೇಧ ಇದರಲ್ಲಿಯೇ ಇದೆ. ಇಲ್ಲದಿದ್ದರೆ ಭಿನ್ನತ್ವ ಉಳಿಯುವದಿಲ್ಲ. ದೇವರು ಏನೂ ಅಪೇಕ್ಷಿಸುವದಿಲ್ಲ, ಎಂದು ಲೇಖಕರಿಗೆ ಹೇಗೆ ಗೊತ್ತಾಯಿತು?

(೫) "ದೇವರ ಮನೋಧರ್ಮವನ್ನು ಗುರುತಿಸುವ ಮನೋಧರ್ಮ ಮನುಷ್ಯನಲ್ಲಿ ಇರಬೇಕು." ಹಾಗಾದರೆ ದೇವರಿಗೆ ಒಂದು ಸ್ವಂತ ಮನೋಧರ್ಮವಿದೆಯೋ?

(೬) ಯಾವದೇ ವಿಜ್ಞಾನ ವಿಷಯದ ಅಭ್ಯಾಸ ಮಾಡುವವನಿಗೆ ಪ್ರತಿ ಹೆಜ್ಜೆಗೆ ಪ್ರಯೋಗಶಾಲೆಯಲ್ಲಿ ಅದರ ಸತ್ಯವನ್ನು ಪರೀಕ್ಷಿಸುವುದು ಸಾಧ್ಯವಿದೆ. ದೇವರನ್ನು ಕಾಣಲಿಕ್ಕೆ ಶಾಲೆ ಕಾಲೇಜುಗಳು ಎಲ್ಲಿಯೂ ಇದ್ದ ಹಾಗೆ ಕಾಣುವದಿಲ್ಲ. ಹೀಗೇಕೆ?

(೭) "ದೇವರೇಕೆ ಪ್ರತ್ಯಕ್ಷನಾಗಬೇಕು?" ಮಾನವನು ಕಷ್ಟಪಟ್ಟು ನಿಸರ್ಗದ ಘಟನೆಗಳ ಅಭ್ಯಾಸ ಮಾಡಿ ಅವುಗಳನ್ನು ತನ್ನ ಸುಖಕ್ಕೇ ಉಪಯೋಗಿಸುತ್ತಾನೆ. ಆದರೆ ದೇವರು ತಾನಿದ್ದಾನೆ ಎಂದೇ ಮನುಷ್ಯನಿಗೆ ಕಷ್ಟ ಕೊಡದೇ ಸುಲಭರೀತಿಯಲ್ಲಿ ತನ್ನ ಅಸ್ತಿತ್ವವನ್ನು ತೋರಿಸಿಕೊಡಬೇಕು.

(೮) ದೇವರು ಇದ್ದಾನೆ ಎಂದು ನಂಬಲು ಎರಡು ಗುಣಗಳಿದ್ದರೆ ಸಾಕು. ವಿಚಾರಹೀನತೆ (ಸಾಂಪ್ರದಾಯಿಕತೆ, ಮಾನಸಿಕ ಗುಲಾಮಗಿರಿ ಶ್ರದ್ಧೆ) ಮತ್ತು ಭೀರು ಸ್ವಭಾವ (ಯಾವದೇ ಪ್ರಶ್ನೆ ಕೇಳುವದಕ್ಕೆ ಹೆದರಿಕೆ). ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ ಸಾಹಿತ್ಯ. ಬಂಡಾಯ

---

## ನಂಬಬೇಕೇಕೆ ?

ಉಂಟಾಗುತ್ತದೆ.

ಎರಡನೆಯದಾಗಿ, ಡಾಕ್ಟರರೆಂದೂ ರೋಗಿಗಳನ್ನು ಹುಡುಕಿಕೊಂಡು ಮನೆ ಮನೆಗೆ ಅಲೆದಾಡಿ 'ನಾನು ಡಾಕ್ಟರ್' ಎಂದು ಹೇಳಿಕೊಳ್ಳುತ್ತ ಹೋಗುವುದಿಲ್ಲ. ತನ್ನ ರೋಗವನ್ನು ಗುಣಪಡಿಸಿಕೊಳ್ಳಬೇಕೆನ್ನುವವನು ಡಾಕ್ಟರರನ್ನು ಹುಡುಕಿಕೊಂಡು ಹೋಗಿ ಅವರು ಕೇಳಿದಷ್ಟು ದುಡ್ಡನ್ನು ಸುರಿದು ಅವರ ಕೃಪೆಗೆ ಪಾತ್ರನಾಗಿ ತಾನು ರೋಗಮುಕ್ತನಾಗಬೇಕಾಗುತ್ತದೆ. ದೇವರ ಅಸ್ತಿತ್ವವನ್ನರಿಯಬೇಕೆನ್ನುವವರೂ ಇದೇ ರೀತಿಯಲ್ಲಿ ದೇವರನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ. ಅವನು ಇಟ್ಟಿರುವ ಶುಲ್ಕವಾದ ಶ್ರದ್ಧೆ ಹಾಗೂ ಭಕ್ತಿಗಳನ್ನು ಸಲ್ಲಿಸಿ ಅವನ ಕೃಪೆಗೆ ಪಾತ್ರರಾಗಬೇಕಾಗುತ್ತದೆ.

ತಮ್ಮ ಉದ್ಯೋಗ ವ್ಯವಸಾಯದಲ್ಲಿ ತಮ್ಮ ಗಿರಾಕಿಗಳು ಪಾಲಿಸಲು ನಿಯಮಗಳನ್ನು ಹಾಕುವ ಡಾಕ್ಟರರು ಹಾಗೂ ಇತರರು ದೇವರು ಮಾತ್ರ ಯಾವ ನಿಯಮಗಳನ್ನೂ ಹಾಕದೇ ತಾವು ಕರೆದಾಗ ತಟ್ಟನೇ ಬಂದು ತಮ್ಮ ಮುಂದೆ ಕೈ ಕಟ್ಟಿಕೊಂಡು ನಿಲ್ಲಬೇಕೆಂದು ಬಯಸುವುದು ಎಲ್ಲಿಯ ನ್ಯಾಯ? ಉದ್ಯೋಗ ವ್ಯವಸಾಯಗಳ ಕ್ಷೇತ್ರಗಳಲ್ಲಿರುವಂತೆ ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ code of conduct (ನಡವಳಿಕೆಯ ನಿಯಮ) ಎಂಬುದು ಇರುವದನ್ನು ಮರೆಯಬಾರದು.

ದೇವರ ಅಸ್ತಿತ್ವದ ಬಗ್ಗೆ ಬರೀ ಬೌದ್ಧಿಕ ಕುತೂಹಲ ಮಾತ್ರವಿದ್ದರೆ ದೇವರ ಅಸ್ತಿತ್ವದ ಅರಿವು ಆಗಲು ಸಾಧ್ಯವಿಲ್ಲ. ಅದು ಹೃದಯದ ಹಂಬಲವಾಗಿ ನಮ್ಮನ್ನು ಕಾರ್ಯಪ್ರವೃತ್ತರನ್ನಾಗಿ ಮಾಡಿದಾಗ ಮಾತ್ರ ಅದರ ಫಲ ನಮಗೆ ನಿಶ್ಚಿತವಾಗಿಯೂ ದೊರೆಯುತ್ತದೆ.

—ಚಿದಂಬರಾನಂದ

ಸಾಹಿತ್ಯ ಒಳಗೊಂಡು ನಾಸ್ತಿಕತ್ವದ ಮೇಲೆ ಪುಸ್ತಕ ಬರೆಯಲು ಧೈರ್ಯ ಆಗಿದೆಯೆ? ಆಸ್ತಿಕರಿಗೆ "ಮತಿ"ಯ ಅವಶ್ಯಕತೆಯಿಲ್ಲ. ನಾಸ್ತಿಕರಿಗೆ ನಾಸ್ತಿಕ ಆಗಬೇಕಾದರೆ ಖಗೋಲಶಾಸ್ತ್ರ, ಜೀವಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಭೌತಿಕಶಾಸ್ತ್ರ, ಇದರ ಅಭ್ಯಾಸ ಮಾಡಿದ ವಿನಾ ಗತ್ಯಂತರವಿಲ್ಲ. ಸುತ್ತಮುತ್ತಲೂ ಅಸಹಿಷ್ಣುಕರ ಧಾರ್ಮಿಕ ವಾತಾವರಣ ಇದ್ದಾಗ ನಾಸ್ತಿಕ ಆಚರಣೆಗೆ ಧೈರ್ಯ ಬೇಕಾಗುತ್ತದೆ.

ದೇವರಿದ್ದಾನೆಯೆ? ಎಂದು ಕೇಳಿದ ಪ್ರಶ್ನೆ ಕುತೂಹಲ ಉತ್ಪನ್ನ ಆಗಬೇಕೆಂದು ಅಲ್ಲ. ಇದೊಂದು ಜ್ವಲಂತ ಪ್ರಶ್ನೆ. ಜಗತ್ತಿನಲ್ಲಿ ಕಂಡುಬಂದ ಅಶಾಂತತೆ, ಕಲಹ, ಯುದ್ಧ, ಅತ್ಯಾಚಾರ, ನಷ್ಟಗಳು ಇದಕ್ಕೆ ಅನೇಕ ಕಾರಣಗಳ ಪೈಕಿ, ಕಲ್ಪಿತ ದೇವರು ಮತ್ತು ಅವನ ಧರ್ಮದ ಆಚಾರ ವಿಚಾರಗಳು ಮಹತ್ವದ ಕಾರಣಗಳು. ಧರ್ಮದ ಆಚಾರ ವಿಚಾರ ಬಂಧನದಿಂದ ಮನುಷ್ಯನು ಮನಸ್ಸಿನಿಂದ ಗುಲಾಮನಾಗಿಬಿಟ್ಟಿದ್ದಾನೆ. ಎಲ್ಲ ಧರ್ಮಗಳಲ್ಲಿ ಹೇಳಿರುವ ಉಚ್ಚ ವಿಚಾರದ ಫಲ ಈವರೆಗೂ ದೊರೆತಿಲ್ಲ. ಅಂದಮೇಲೆ ಎಲ್ಲ ಧರ್ಮಗಳಲ್ಲಿ ಹೇಳಿದ ಮಾತಿನಲ್ಲಿ ಎಲ್ಲಿಯೋ ನ್ಯೂನ್ಯತೆಯಿದೆ ಎಂದು ಅನಿಸುತ್ತದೆ. ಯಾವುದೇ ಧರ್ಮವು ಮನುಷ್ಯನ ಜೀವನ ಪರಿಸ್ಥಿತಿ ಸುಧಾರಿಸುವ ಉಪಾಯ ಹೇಳಿಲ್ಲ ಎಂದು ತೋರುತ್ತದೆ. ಒಂದು ಊಟದ ಕೊರತೆ ಇರುವ ಮನುಷ್ಯನಿಗೆ ಆರೋಗ್ಯ ಕಾಪಾಡಿಕೊಳ್ಳಲಿಕ್ಕೆ ಪ್ರತಿದಿನ ಸೇಬು, ಬಾಳೆಹಣ್ಣು, ಮೋಸಂಬಿ, ಹಾಲು, ಟೋಮ್ಯಾಟೊ, ನವಿಲಕೋಲು, ಕಾಲಿಫ್ಲಾವರ್, ತಿನ್ನಬೇಕು ಎಂದು ಡಾಕ್ಟರ್ ಸಲಹೆ ಕೊಟ್ಟ ಹಾಗೆ ಇದು.

ಕೊನೆಯ ಒಂದು ಮಾತು. ಹೀಗೆ ಸಮಾಜ ಸುವ್ಯವಸ್ಥಿತವಾಗಿ ನಡೆಯಬೇಕಾದರೆ ಕಾಯಿದೆ ಕಾನೂನು ನಿಯಮಗಳು ಹೇಗೆ ಬೇಕೊ ಹಾಗೆ ಸಂಭಾಷಣೆಗೆ ಅಕ್ಷರ, ವಿಶಿಷ್ಟ ಅರ್ಥದ ಶಬ್ದ, ವ್ಯಾಕರಣ ಮತ್ತು ತರ್ಕಶಾಸ್ತ್ರ ಇದರ ಅವಶ್ಯಕತೆ ಇದೆ. ಅದೇ ಪ್ರಕಾರ ಜ್ಞಾನಪ್ರಾಪ್ತಿಗಾಗಿ ಕೆಲವು ನಿಶ್ಚಿತ ನಿಯಮಗಳನ್ನು ಮಾಡಲಾಗಿದೆ. ಈ ನಿಯಮಗಳ ವಿವೇಚನೆಯೇ ಒಂದು ಸ್ವತಂತ್ರ ಲೇಖನವಾಗುತ್ತದೆ. ✡



ನಮ್ಮ ಸಹೋದ್ಯೋಗಿ ಶಿಕ್ಷಕಿಯೊಬ್ಬರ ಮಗಳು ಇಂದಿರಾ ನಾಲ್ಕನೇ ವರ್ಗದ ವಿದ್ಯಾರ್ಥಿನಿ. ಇಂಗ್ಲೀಷ ಮೂಲಾಕ್ಷರಗಳನ್ನೂ, ಅವುಗಳ ಕನ್ನಡ ಉಚ್ಚಾರಗಳನ್ನೂ ಇತ್ತೀಚೆಗೆ ಕಲಿತ ಅವಳಿಗೆ ಕಣ್ಣಿಗೆ ಕಂಡ ಪ್ರತಿ ಇಂಗ್ಲೀಷ ಶಬ್ದವನ್ನೂ ಓದಿದಾಗಲೇ ಸಮಾಧಾನ. ಅವಳ ಈ ಹವ್ಯಾಸ ಮನೆಗೆ ಪುಸ್ತಕಕ್ಕಷ್ಟೇ ಸೀಮಿತವಾಗಿರದೇ ರಸ್ತೆಗೂ ಬೀದಿಯ ಫಲಕಗಳಿಗೂ ವಿಸ್ತರಿಸಿತ್ತು.

ಒಮ್ಮೆ ತಾಯಿಯೊಂದಿಗೆ ಪೇಟೆಗೆ ಹೊರಟಾಗ ಇಂದಿರಾಳ ಪ್ರಶ್ನೆ ಬಾಣದಂತೆ ತೂರಿಬಂತು:

"ಅವ್ವಾ ಮನೀಗೆ ಯಾರsssರ ಕೆಟ್ಟ ಕೆಟ್ಟ ಹೆಸರು ಇಡ್ತಾರೇನು ?"

"ಇಲ್ಲ."

"ಛೊಲೋ ಹೆಸರು ಮತ್ತು ದೇವರ ಹೆಸರು ಇಡ್ತಾರ ಹೌದಲ್ಲೋ?"

"ಹೌದು,......ಯಾಕ ?"

"ಮತ್ತ ಈ ಮನೀಗ್ಯಾಕ 'ಚಾಂಡಾಲ' ಅಂತ ಹೆಸರಿಟ್ಟಾರ? ಚಾಂಡಾಲ ಅಂದ್ರ ಕೊಲೆಗಡುಕ ಹೌದೋ ಅಲ್ಲೋ?"

ಇಂದಿರಾಳ ತೋರು ಬೆರಳು ನಿರ್ದೇಶಿಸಿದತ್ತ ನೋಡಿದ ನಮ್ಮ ಟೀಚರ್‌ಗೆ ಕಂಡದ್ದೇನು?

ಒಂದು ಮನೆಯ ಮೇಲೆ ಅತ್ಯಂತ ಸುಂದರವಾಗಿ ಬರೆದ "Chandala" ಎಂಬ ಹೆಸರು.

— ಶ್ರೀಮತಿ [illegible]

# ನಿಮ್ಮ ಶಬ್ದಭಾಂಡಾರ ಬೆಳೆಸಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧ **ಸವರ್ಣ**

(ಅ) ಬಂಗಾರ (ಆ) ಹರಿಜನೇತರ ಹಿಂದು (ಇ) ಸಮಾಧಾನ (ಈ) ಅನುಕೂಲವಂತ

೨. **ಸವಡು**

(ಅ) ವಿರಾಮ (ಆ) ದವಡೆ (ಇ) ಭೂಸಾ (ಈ) ಸ್ಪರ್ಧೆ

೩. **ಹಳಚು**

(ಅ) ಮುಪ್ಪಾಗು (ಆ) ಹಿಂದೆ ಸರಿ (ಇ) ಕೊಳಕು (ಈ) ಅಪ್ಪಳಿಸು

೪. **ನೆರವಣಿಗೆ**

(ಅ) ಸಹಾಯ (ಆ) ಹತ್ತಿರ ಇರುವುದು (ಇ) ಚೊಕ್ಕತನ (ಈ) ಪ್ರಾರಂಭ

೫. **ಸರ್ವಮಾನ್ಯ**

(ಅ) ತೆರಿಗೆಯಿಂದ ಮುಕ್ತ (ಆ) ಶಿವಭಕ್ತ (ಇ) ಎಲ್ಲರಿಗೆ ಸೇರಿದ (ಈ) ಅಳತೆಗೆ ಸಿಕ್ಕದ

೬ **ಸಾರ್ವತ್ರಿಕ**

(ಅ) ಇಡೀ ರಾತ್ರಿಯ (ಆ) ಮೂರು ಭಾಗ (ಇ) ಎಲ್ಲ ಕಡೆಯ (ಈ) ಎಲ್ಲರೂ ಒಪ್ಪಿದ

೭. **ನಸಿ**

(ಅ) ಒಂದು ಹುಳ ಜಾತಿ (ಆ) ಮೂಗು (ಇ) ಮೃದುವಾಗು (ಈ) ಸೊರಗು

೮. **ಲಾಕ್ಷಣಿಕ**

(ಅ) ಅರಗಿನ ಗೊಂಬೆ (ಆ) ಕಲಾ ವಿಮರ್ಶೆ ಬಲ್ಲವ (ಇ) ಕ್ಷಣದಲ್ಲಿ ಮಾಯ-ವಾಗುವ (ಈ) ಬಡಿಗೆ ಧಾರಿ

೯. **ಜವನಿಕೆ**

(ಅ) ಮುಸಲ್ಮಾನ ಹೆಂಗಸು (ಆ) ಪ್ರಾಯ ಬಂದವಳು (ಇ) ವೇಗ (ಈ) ಪರದೆ

೧೦. **ಲಾಗಾಯಿತು**

(ಅ) ಪ್ರಾರಂಭ ಕಾಲ (ಆ) ಅಂಗ ಸಾಧನೆ (ಇ) ಸಂದುಗೂಡಿದ (ಈ) ಸುಲಭ

೧೧. **ಹಳುವು**

(ಅ) ಬೈಗಳು (ಆ) ತಗ್ಗು ಪ್ರದೇಶ (ಇ) ಅಡವಿ (ಈ) ನಿಂದೆ

೧೨. **ನಸೆ**

(ಅ) ಹಾಳು (ಆ) ನಯತನ (ಇ) ಶಿಕ್ಕು (ಈ) ಬೆಳಗು ಮುಂಜಾನೆ

## 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

೧. **ಸವರ್ಣ** (ಆ) ಹರಿಜನನಲ್ಲದ (ಮೇಲ್ಜಾತಿಯ) ಹಿಂದು; ನಾಲ್ಕು ವರ್ಣ (ಜಾತಿ) ಗಳ ಹಿಂದೂ ಸಮಾಜ ವ್ಯವಸ್ಥೆಯೊಳಗೆ ಸೇರಿದ. ಉದಾ:— ಹರಿಜನರ ಮೇಲೆ ಸವರ್ಣರ ಬಲಾತ್ಕಾರ [ಸಂ. ಸ = ಸಹಿತವಾದ + ವರ್ಣ = ಜಾತಿ]

೨. **ಸವಡು** (ಅ) ವಿರಾಮ, ಬಿಡುವು, ವೇಳೆ. ಉದಾ:— ಯಾವ ಕೆಲಸಕ್ಕೂ ಸವಡೇ ಇಲ್ಲ. [ಮರಾಠಿ – ಸವಡೀ]

೩. **ಹಳಚು** (ಈ) ಅಪ್ಪಳಿಸು, ಬಲವಾಗಿ ಬಂದು ತಾಗು. ಉದಾ:— ತೆರೆಗಳು ದಡಕ್ಕೆ ಹಳಚುವ [ಹಳೆಗನ್ನಡ, ಪಳಂಚು = ತಾಗು]

೪. **ನೆರವಣಿಗೆ** (ಇ) ಚೊಕ್ಕತನ, ಒಪ್ಪ, ಅಚ್ಚುಕಟ್ಟು; ಪರಿಪೂರ್ಣವಾಗಿರುವುದು. ಉದಾ:— ಆಡಳಿತದ ನೆರವಣಿಗೆ. [ಕನ್ನಡ,ನೆರೆ = ಪೂರ್ಣವಾಗು, ಸರಿಯಾಗಿರು]

೫. **ಸರ್ವಮಾನ್ಯ** (ಅ) ಯಾವ ತೆರಿಗೆಯೂ ಇಲ್ಲದ, ಕರಮುಕ್ತ. ಉದಾ:— ಅರಸರು ಅವನಿಗೆ ಸರ್ವಮಾನ್ಯವಾದ ಭೂಮಿಯನ್ನು ನೀಡಿದರು. [ಸಂ. ಸರ್ವ = ಎಲ್ಲ + ಮಾನ್ಯ = ಮನ್ನೆಯ = ಸವಲತ್ತು]

೬. **ಸಾರ್ವತ್ರಿಕ** (ಇ) ಎಲ್ಲ ಕಡೆಯು, ಎಲ್ಲೆಡೆಗೂ ಆಗುವ. ಉದಾ:— ಸಾರ್ವತ್ರಿಕ ಅಭಿವೃದ್ಧಿಯ ಗುರಿ. [ಸಂ. ಸರ್ವತ್ರ = ಎಲ್ಲ ಕಡೆ]

೭. **ನಸಿ** (ಈ) ಸೊರಗು, ಬಡವಾಗು. ಕೃಶವಾಗು, ಸವೆ. ಉದಾ:— ಗಿಡ ದಿನ ದಿನಕ್ಕೆ ನಸಿಯುತ್ತ ಬಂತು. [ದೇಶ್ಯ]

೮. **ಲಾಕ್ಷಣಿಕ** (ಆ) ಕಲೆ, ಸಾಹಿತ್ಯ ಇತ್ಯಾದಿಗಳ ತತ್ವವನ್ನು ಬಲ್ಲವ. ಉದಾ:— ಲಾಕ್ಷಣಿಕರು ಮೆಚ್ಚದಿದ್ದರೂ ಅವನ ಕವಿತೆ ಜನಪ್ರಿಯವಾಯಿತು. ಸಂ.]

೯. **ಜವನಿಕೆ** (ಈ) ನಾಟಕದ ಪರದೆ. ತೆರೆ, ಪಟ; ಮರೆ. ಉದಾ:— ಜವನಿಕೆಯ ಆಚೆ ಏನು ನಡೆಯಿತೋ [ಸಂ. ಯವನಿಕಾ]

೧೦. **ಲಾಗಾಯಿತು** (ಅ) ಪ್ರಾರಂಭದ ಕಾಲ, ಮೊದಲಿನ ಕಾಲ; ಇಂಥಲ್ಲಿಂದ ಸುರುವಾಗಿ. ಉದಾ:— ಲಾಗಾಯಿತಿನಿಂದ ಬಂದ ವಾಡಿಕೆ: ಆ ಲಾಗಾಯಿತು ಅವನ ಬುದ್ಧಿ ಕೆಟ್ಟದೆ. [ಹಿಂದೀ, ಲಗ್ = ತಗಲು, ಸುರುವಾಗು ಎಂಬುದರಿಂದ]

೧೧. **ಹಳುವು** (ಇ) ಅಡವಿ, ಕಾಡು, ಕಾಡಿನ ಕಾಲ್ದಾರಿ. ಉದಾ:—ಹಳುವಿನಲ್ಲಿ ಹೊಕ್ಕು ಬೇಟೆಗೆ ಹೊಂಚುತ್ತಿದ್ದನು. [ಹಳೆಗನ್ನಡ, ಪಳುವು]

೧೨. **ನಸೆ** (ಅ) ನಯುತನ; ಸಲಿಗೆ. ಉದಾ:— ನಾಯಿಗೆ ನಸೆ ಕೊಟ್ಟರೆ ನೊಸಲು ನೆಕ್ಕಿತು. [ದೇಶ್ಯ]

●

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯—೧೦ | ,, | ... | ಉತ್ತಮ |
| ೧೧—೧೨ | ,, | ... | ಅತ್ಯುತ್ತಮ |

●



# ಸಚ್ಚರಿತ ಸಾಲಿ ರಾಮಚಂದ್ರರಾಯ

ಡಾ. ರಂ. ಕೃ. ಅಸುಂಡಿ

ಇಂದಿಗೆ ತುಸು ಹೆಚ್ಚು ಕಡಿಮೆ ಎರಡು ವರ್ಷ ಮೊದಲು ನಮ್ಮನ್ನಗಲಿದ ಕನ್ನಡನಾಡಿನ ಕವಿಗಳಲ್ಲಿ ಒಬ್ಬರಾಗಿದ್ದ ಶ್ರೀ ಸಾಲಿ ರಾಮಚಂದ್ರ ರಾಯರನ್ನು ಅದೆಷ್ಟು ಸ್ಮರಿಸಿದರೂ ಸಾಲದು. ಇದೀಗ ಅವರ ಪ್ರಶಾಂತ, ಸ್ನಿಗ್ಧ, ಗಂಭೀರ ವ್ಯಕ್ತಿತ್ವದ ವಿವಿಧ ಮುಖಗಳ ಬಣ್ಣನೆ ಇರುವ ಸುಂದರ ಸಂಪುಟವೊಂದು ಪ್ರಸಿದ್ಧವಾಗಿದೆ. ಅದರಲ್ಲಿಯ, ಸ್ತ್ರೀ-ಪುರುಷ, ಹಿರಿ–ಕಿರಿ, ಜಾತಿ–ಮತ–ಪಂಥಾದಿ ಭೇದವಿಲ್ಲದೆ ಶ್ರದ್ಧಾಂಜಲಿ ಅರ್ಪಿಸಿದ, ಲೇಖಕ ಬಳಗ ಮತ್ತು ಅವರ ಸಂಪರ್ಕದಲ್ಲಿ ಬಂದ ಇತರ ಅನೇಕರನ್ನು ನೆನೆಸಿಕೊಂಡಾಗ ನಿಜವಾಗಿ ಅವರೊಬ್ಬ ವಿಶ್ವ ಕುಟುಂಬಿ ಎನ್ನುವಂತಿದೆ.

ಸಾಲಿಯವರ ಜೀವನವೇ ಅಂಥದು. ಕಳೆದ ಆರೇಳು ದಶಕದಲ್ಲಿ ಅವರೊಡನೆ ಬೆಳೆದು ಬಂದ ನನ್ನ ಸಂಬಂಧ. ಅವರ ಸಹವಾಸದಲ್ಲಿ ಮೂಡಿ, ಮೊಳೆತು, ಬೆಳೆದು ನಿಂತ ಗೌರವಾಭಿಮಾನಗಳು ಅಚ್ಚಳಿಯದೆ ಉಳಿದಿವೆ.

ಸಾಲಿಯವರೊಬ್ಬ ಧ್ಯೇಯನಿಷ್ಠ, ಸಚ್ಚರಿತ್ರ, ಸಾಧಕ ಜೀವಿ. ಎಳೆತನದಲ್ಲಿ ತಂದೆ ತಾಯಿಗಳನ್ನು, ಮಧ್ಯ ವಯಸ್ಸಿನಲ್ಲಿ ಪತ್ನೀ ಪುತ್ರರನ್ನು ಇಳಿ ವಯಸ್ಸಿನಲ್ಲಿ ನುರಿತ ಸಂಶೋಧಕ, ಪ್ರತಿಭಾಸಂಪನ್ನ ಸಾಹಿತಿ ಎಂದು ಹೆಸರು ಗಳಿಸಿದ ಅಳಿಯನನ್ನು ಕಳೆದುಕೊಂಡೂ ಧೃತಿಗೆಡದೆ, ಧ್ಯೇಯ ಸಾಧನೆಯಲ್ಲಿ ಬಂದೊದಗಿದ ಬಡತನವನ್ನು ಸಂತೋಷದಿಂದ ಒಪ್ಪಿ, ಕೊನೆಯ ವರೆಗೆ ಕಾವ್ಯೋಪಾಸನೆಯಲ್ಲಿ ತಮ್ಮ ಜೀವನವನ್ನು ನಡೆಸಿದರು.

## ಕೃತಿಗಳ ವೈಶಿಷ್ಟ್ಯ

ತಮ್ಮ ಜೀವನದಲ್ಲಿ ಕ್ವಚಿತ್ತಾಗಿ ಒದಗಿ ಬಂದ ನಲಿವು, ಉದ್ದಕ್ಕೂ ನಡೆದುಬಂದ ನೋವು ಹಾಗು ಅನ್ಯ ಏರುಪೇರುಗಳಲ್ಲಿ ಕುದಿ ಒಡೆದ ಉದಾತ್ತ ಭಾವನೆಗಳ ಸೌಮ್ಯ, ಸುಲಲಿತ ಅಭಿವ್ಯಕ್ತಿ, ಸಾಲಿಯವರ ಕೃತಿಗಳ ವೈಶಿಷ್ಟ್ಯವೆನ್ನಬಹುದು. ಹಳಗನ್ನಡದತ್ತ ಒಲಿದ ಅವರು ಮೊದಮೊದಲು ಪೂರ್ವಿಕರು ಹಾಕಿಕೊಟ್ಟ ದಾರಿಯಲ್ಲಿ ನಡೆದುಬಂದರೂ ಹಳೆಯದಲ್ಲ

"ಹಳಗನ್ನಡದಿಂದ ತಿಳಿಗನ್ನಡಕ್ಕಿಳಿದ ನಾನು ಅದಕ್ಕಿಂತ ಹೆಚ್ಚು ತಿಳಿಯಾಗಿರುವ ಕನ್ನಡದಲ್ಲಿ ಬರೆಯಲಾರಂಭಿಸಿದ್ದೇನೆ; ಅದೆಲ್ಲ ಸಮಕಾಲೀನ ಸಾಹಿತ್ಯಾವಲೋಕನದ ಪ್ರಭಾವ" ಎಂದಿದ್ದಾರೆ ಅವರು ನನಗಿರುವ ತಮ್ಮದೊಂದು ಪತ್ರದಲ್ಲಿ. ತಿಳಿಗನ್ನಡದಲ್ಲಿ ಬರೆಯುವುದರೊಂದಿಗೆ ಷಟ್ಪದಿ ಪ್ರಿಯರೆಂದು ಹೆಸರು ಗಳಿಸಿದ ಅವರು ಹೆಚ್ಚಾಗಿ ಅದರ ಚೌಕಟ್ಟಿನಲ್ಲಿಯೇ ಹೊಸ ಹೊಸ ಛಂದೋ ರೂಪಗಳನ್ನು ಕಲ್ಪಿಸಿ ಬಳಕೆಯಲ್ಲಿ ತಂದಿರುವರು. ಭಾಷಾಶುದ್ಧಿ, ಬಂಧನದ ಬಿಗುವು ಹಾಗು ಛಂದಸ್ಸಿನ ಕಟ್ಟುನಿಟ್ಟುಗಳನ್ನು ಕೊನೆಯ ವರೆಗೆ ಉಳಿಸಿಕೊಂಡು ಬಂದಿರುವರು. 'ಅಭಿಸಾರ' 'ತಿಲಾಂಜಲಿ'ಗಳಂಥ ನೀಳ್ಗವನಗಳನ್ನು, 'ಕಪಿ ಮತ್ತು ಬನದೇವಿ', 'ಮಳೆ ಬೀಳುತಲಿತ್ತು', 'ಹೆದರಿದುವೆನಗಕಟ', 'ನೀರುಗುಳ್ಳಿ' ಮೊದಲಾದ ಚಿಕ್ಕ ಕವನಗಳನ್ನು ಅವರಲ್ಲಿ ಉಂಟಾಗುತ್ತ ಬಂದ ಈ ಬಗೆಯ ಪರಿವರ್ತನೆಗೆ ಉದಾಹರಣೆಗಳೆಂದು ಉಲ್ಲೇಖಿಸಬಹುದು. ಗದ್ಯದಲ್ಲಿ ಒಂದೆರಡು ಕೃತಿಗಳನ್ನು ರಚಿಸಿದ್ದರೂ ಗದ್ಯದ ಸಾಮಾನ್ಯ ಅರ್ಥದಲ್ಲಿ ಅವು ಅವರ ಅಳವಿನಲ್ಲಿ ಬರುವಂತಿಲ್ಲ. ಉತ್ಕಟ ಭಾವಾಭಿವ್ಯಕ್ತಿ, ವಿಚಾರ, ವೈಶಾಲ್ಯ ಮತ್ತು ಪ್ರಾಸಂಗಿಕ ಪದ್ಯಗಳಿಂದ ಕೂಡಿದ ಅವರ 'ಉಮಾಪತಿ' 'ಜಯ ಗುರುದೇವ' ಕೃತಿಗಳನ್ನು ಗದ್ಯ ಎನ್ನುವುದಕ್ಕಿಂತ ಗದ್ಯ–ಕಾವ್ಯಗಳೆಂದು ಕರೆಯುವುದು ತಪ್ಪಾಗಲಿಕ್ಕಿಲ್ಲ.

ಕೃತಿಗಳ ಶರೀರ ಸೌಷ್ಠವದೊಂದಿಗೆ ಅವರಲ್ಲಡಕವಾದ ಬೆಡಗಿನ ಶಬ್ದಗಳಲ್ಲಿ ಕನ್ನಡ ನಾಡು ನುಡಿಗಳ ಬಗ್ಗೆ ಸಾಲಿಯವರಲ್ಲಿದ್ದ ನಿಷ್ಠೆ ಅಭಿಮಾನಗಳು ಎಷ್ಟೊಂದು ಸಮ ಗಾಂಭೀರ್ಯಯುಕ್ತ ಅಭಿವ್ಯಕ್ತಿ ಪಡೆದಿದೆ ಎನ್ನಲು ಅವರ–

"ತತ್ವಜ್ಞರ ಭಕ್ತರ ಸಚ್ಚರಿತರ ವಸತಿಸ್ಥಳವಿದು ಸಿರಿಗನ್ನಡ ನಾಡು"

"ಕನ್ನಡಂ ನರುದಂಬುಲಂ ಮೆಲ್ದ ಸರಸತಿಯು
ಬೆನ್ನುಸಿರಲೇ"

ಮುಂತಾದ ಪದ್ಯ ಪಂಕ್ತಿಗಳನ್ನು ನೋಡಬೇಕು. ಕನ್ನಡ ನಾಡುನುಡಿಗಳ ಸೇವೆ ಲಭಿಸಿದುದು ಜನ್ಮಾಂತರಗಳಿಂದ ತಮಗೆ ಒದಗಿದ ಪುಣ್ಯವೆಂಬ ಕೃತಜ್ಞತಾ ಭಾವದ ಸೊಗಸಿಗೆ,

"ಎನಿತೊಂದೆನ್ನಯ ಪೂರ್ವದ ಸುಕೃತಮೋ
ಜನಿಸಿದೆನಾಂ ಪೆರ್ಮೆಯ ಕನ್ನಡನಾಡಿನ
ನೆಲದೊಳ್,
ಕನ್ನಡ ನುಡಿಯುಗ್ಗಳದಮರ್ಥಂ ನವಿದಪೆನು.."

ಇದೊಂದು ಉದಾಹರಣೆ ಸಾಕೆನಿಸುವದು.

ನಾಡು ನುಡಿಗಳನ್ನು ದಾಟಿ ವಿಶ್ವ ಸೌಂದರ್ಯವನ್ನ ನಿಸರ್ಗದ ವಿವಿಧ ರೂಪಗಳಲ್ಲಿ ಕೊಂಡಾಡುವಾಗ ಮೈಮರೆತು ಅರಿವಿಲ್ಲದೆ ಸ್ಫೂರ್ತಿಯಿಂದ ಹೊರಹೊಮ್ಮಿದ ಎಷ್ಟೋ ಕವನಗಳಲ್ಲಿ ಮೈವೆತ್ತಿ ಬಂದ ಸೃಷ್ಟಿಕರ್ತನಲ್ಲಿದ್ದ ಅವರ ಭಕ್ತಿ ವಿಶ್ವಾಸಗಳಿಗೆ ಈ ಕೆಳಗಿನ,

"ಬಹು ವಿಧಂ ಶಕ್ತಿಯೆಲೆ ಈ ಸೃಷ್ಟಿಯಾ!"
"ಹರಿ ನಿನ್ನ ಮಾಯೆ ಪರಮಾದ್ಭುತಂ!
ಸೃಷ್ಟಿಯಚ್ಚರಿಯಾಗರಂ!"
"ತಿಳಿದರಾರಿದಂ! ನರನೆ, ನೀನರಿತರ್ಪುದಲ್ಪ
ಮತ್ತಲ್ಪಮೈ!"
"ನನ್ನಳವೆ, ಈಯನಂತಮನರಿವುದು?"
"ಅರಸು ನೀನೇ ದೇವ! ಸತ್ಯವಿದು! ಮಿಕ್ಕವರ್ಗರಸರೆಂಬುದುಪಚಾರವಚನವೈ!" ಅವತರಣಿಕೆಗಳು ಬೆರಳಿಟ್ಟು ತೋರಿಸುತ್ತಿವೆ.

ಸ್ವಲ್ಪದರಲ್ಲಿ, ಸಾಲಿಯವರು ಕೇವಲ ನಿಸರ್ಗ ರಮಣೀಯತೆಯನ್ನು ಕೊಂಡಾಡಿದ ಕವಿಯಲ್ಲ. ಅದ್ಭುತವಾದ ವಿಶ್ವದಲ್ಲಿ ಹಾಸು ಹೊಕ್ಕಾಗಿದ್ದ ನಿಸರ್ಗಕ್ಕೆ ಮೂಲಾಧಾರನಾಗಿದ್ದ ಸೃಷ್ಟಿಕರ್ತನ ಮಹಿಮೆಯನ್ನು ಹೆಜ್ಜೆ ಹೆಜ್ಜೆಗೆ ಗಮನಿಸಿ ಧನ್ಯರಾಗಿ ಮೈಮರೆತು ಅವರು ಕುಣಿದಾಡಿದರು. ನಗೆಮೊಗದಿಂದ ಕಷ್ಟ ಜೀವನವನ್ನು ಎದುರಿಸಲು ಶಕ್ತಿ ಪಡೆದರು. ಬಾಹ್ಯ ಸೌಂದರ್ಯಕ್ಕಿಂತ ಮಿಗಿಲಾಗಿ ಅವುಗಳಲ್ಲಿದ್ದ ಚೈತನ್ಯವು ಅಪ್ರತಿಮವಾಗಿದ್ದು, ಅವರ ಕವಿತ್ವವು ಸಹೃದಯ ಓದುಗರ ಆತ್ಮಶಾಂತಿ, ಆತ್ಮೋನ್ನತಿಗಳಿಗೆ ಎಡೆಮಾಡಿಕೊಡುವ ಸಾಮರ್ಥ್ಯ ಹೊಂದಿದೆ ಎಂದರೆ ಅತಿಶಯೋಕ್ತಿಯಾಗದು.

## ಸತ್ಯಪರೀಕ್ಷೆಯ ಒರೆಗಲ್ಲು

ಸಾಲಿಯವರ ಕಾವ್ಯಗಂಗೆ ಹಲವು ಸುಳಿಗಳಲ್ಲಿ ಹರಿದಿದರೂ ಹೆಚು ಮುಂದುವರಿಯದೆ

ಮಧ್ಯದಲ್ಲಿ ಹರಿಗಡೆದು ನಿಂತ ಸಂದರ್ಭಗಳೇ ಬಹಳ. ಅವರ ಖಂಡಕಾವ್ಯ 'ಶ್ರೀರಾಮ ಚರಿತ್ರ' ಓದುವದಕ್ಕೆ ಸರಲ, ಹಾಡುವದಕ್ಕೆ ಸುಲಭ ಮತ್ತು ಸಾತ್ವಿಕ ಚಿರನೂತನ ಕಥಾವಸ್ತುವಿದ್ದ ಲಲಿತ ಗೀತ. ಅದರ ಬಾಲಕಾಂಡ ಅಯೋಧ್ಯಾ ಕಾಂಡ(ಪೂರ್ವಭಾಗ)ಗಳು ಮಾತ್ರ ಬೆಳಕು ಕಂಡವು. ಉಭಯ ಭಾಷಾ ಪಂಡಿತರಾಗಿದ್ದ ಸ್ವರ್ಗೀಯ ಮ. ಪ್ರ. ಪೂಜಾರರು, ಕಾವ್ಯದಲ್ಲಿ ನಿರೀಕ್ಷಿಸಬೇಕಾಗಿದ್ದದ್ದು ಕವಿಯ ಭಾವ ಭಾಷೆಗಳ ಪರಿಶುದ್ಧಿ ಮತ್ತು ತನ್ಮೂಲಕ ಒದಗುವ ರಸಸಿದ್ಧಿ. 'ಶ್ರೀರಾಮ ಚರಿತ್ರ'ವು ಸ್ವಮಹಿಮೆಯಿಂದಲೇ ಸದಾ ವಿಜಯಶಾಲಿ. ಅದೊಂದು ರಸಘಟ್ಟಿ. ಪರಿಶುದ್ಧಭಾವ ಭಾಷೆಗಳ ನಿರ್ಮಲ ಝರಿ ಎಂದು ಅದನ್ನು ಹರಿಸಿದರು. ಶ್ರೀರಂಗರು ಅದೊಂದು ಇಂದಿನ ಸಾಹಿತ್ಯದ ಆದಿಕಾವ್ಯವೆನ್ನಬಹುದು ಎಂದು ಅಭಿಪ್ರಾಯಪಟ್ಟರು. ಬಹು ಜನರು – ಸ್ತ್ರೀ ಪುರುಷರು, ಬಾಲಕ ಬಾಲಿಕೆಯರು – ಹಾಡಿ ಮೆಚ್ಚಿದರು. ಅಯೋಧ್ಯಾಕಾಂಡವು, ಹೊರಬೀಳುವಾಗಲೇ ಬಾಲಕಾಂಡದ ಪ್ರತಿಗಳು ದೊರೆಯದಂತಾದವು. ಅಷ್ಟರಲ್ಲಿ ಕ್ರಾಂತಿಯ ಹೆಸರಿನಿಂದ ಸಾಹಿತ್ಯ ಕ್ಷೇತ್ರದಲ್ಲಿ ಬೀಸಿದ ಹೊಸ ಗಾಳಿಯೊಂದಿಗೆ ಬೆರೆತು ಬಂದ ವಿಷಗಾಳಿಯ ದುಷ್ಟ ಹೊಡೆತಕ್ಕೆ ಸಿಕ್ಕು ಮುಂದಿನ ಕಾಂಡಗಳ ಪ್ರಕಟನೆಯು ಅಷ್ಟಕ್ಕೇ ನಿಂತಿತು. ಹೀಗಾಗದೆ ಹೋಗಿದ್ದರೆ ಮಹಾರಾಷ್ಟ್ರದಲ್ಲಿ ಇಂದು ಜನಪ್ರಿಯವಾಗಿ ಪ್ರಚಲಿತವಿರುವ 'ಗೀತ ರಾಮಾಯಣ'ಕ್ಕೆ ಪೂರ್ವಭಾವಿಯಾಗಿ ಕನ್ನಡದಲ್ಲಿ ಅದೊಂದು ಸದೃಶ ಆದ್ಯ ಕೃತಿಯಾಗುತ್ತಿತ್ತು.

ಗದ್ಯ ಕೃತಿಗಳಲ್ಲಿ ಆತ್ಮನಿವೇದನೆಯಂತಿರುವ 'ಯದುಪತಿ' ದ್ವಿತೀಯ ಮತ್ತು ಮುಂದಿನ ಭಾಗಗಳಲ್ಲಿ ಕಾಲಿರಿಸಲಿಲ್ಲ. 'ಜಯ ಗುರು–ದೇವ', 'ಸುಕನ್ಯೆ' (ರೂಪಕ), 'ಧರ್ಮವಿಜಯ' (ಸಾವಿತ್ರಿ ಉಪಾಖ್ಯಾನ), ಅನುವಾದ ಕೃತಿ ಬುದ್ಧ ಜಾತಕ ಕಥೆಗಳ ಹಾಡಾದರೂ ಅಷ್ಟೇ. ಸಂಸ್ಕೃತದಲ್ಲಿ ವಾಲ್ಮೀಕಿ ರಾಮಾಯಣವನ್ನು ವಾಲ್ಮೀಕಿಯ ಶಬ್ದಗಳಲ್ಲಿಯೇ ವಚನ ರೂಪಕ್ಕಿಳಿಸಿದ ಒಂದು ಕಾಂಡವು ಬೆಳಕು ಕಾಣುವಷ್ಟರಲ್ಲಿಯೇ ಉಳಿದವೆಲ್ಲ 'ವಾಲ್ಮೀಕ'ಗಳಿಗೆ ಆಹಾರವಾಯಿತು. ವ್ಯಾಸ ಭಗವಾನರ ಭಾಗವತದಲ್ಲಿಯ ಶ್ರೀಕೃಷ್ಣ ಚರಿತ್ರೆಯನ್ನು ಸುಲಭ ಸುಲಲಿತ ಗದ್ಯದಲ್ಲಿ ವ್ಯಾಸರ ಶಬ್ದಗಳಲ್ಲಿಯೇ ಪರಿವರ್ತಿಸುವ ಸಂಕಲ್ಪವು ಅದೀಗ ಗರ್ಭ–ಗಟ್ಟುತ್ತಿರುವಾಗಲೇ ಭಗವಂತ ಅವರನ್ನು ಕರೆದೊಯ್ದನು.

ಹೀಗೆ ಒಂದಲ್ಲ, ಎರಡಲ್ಲ, ಅವರ ಅನೇಕ ಪ್ರಯತ್ನಗಳು ನಿಷ್ಫಲವಾದದ್ದು ಕೂಡ ಒಂದು ಬಗೆಯ ಸತ್ವಪರೀಕ್ಷೆಯ ಒರೆಗಲ್ಲು. ದೈವೀ ಸಂಕಲ್ಪ ಎನ್ನುವಂತಿದೆ. ಉಡುಪಿಯ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥರ ಮಾತಿನಲ್ಲಿ ಹೇಳುವದಾದರೆ ಅನಾದಿ. ಅವಿನಾಶಿ ಆತ್ಮನ ಕೇವಲ ಒಂದು ಜನ್ಮದ ಘಟನೆಗಳಿಂದ ಅವನ ಸಮಗ್ರ ಅಸ್ತಿತ್ವದ ಸುಖ–ದುಃಖ, ಆಗುಹೋಗುಗಳನ್ನು ಅಳೆಯಹೊರಟರೆ ನಮಗೆ ಅವುಗಳ ಸರಿಯಾದ ಅರ್ಥವಾಗದು. ಸಾಲಿಯವರಾದರೂ ಹೀಗೆಯೆ ಭಾವಿಸು–ವಂತಿದೆ. ಅಂತೆಯೆ ಅಷ್ಟೊಂದು ಪ್ರಾಪಂಚಿಕ ಕಷ್ಟ ನಷ್ಟಗಳನ್ನು, ಹಲ ಕೆಲವು ಕಿರಿ–ಕಿರಿ ಸಂಬಂಧಿ ಸಾಹಿತಿಗಳ ನಿಲ್ಲದ ಅವಹೇಳನವನ್ನು ಧೃತಿಗೆಡದೆ ಸಹಿಸಿ ತಮ್ಮ ೯೦ ವರ್ಷಗಳ ಸುದೀರ್ಘ ಜೀವನವನ್ನು ನಡೆಸಿಕೊಂಡು ಹೋಗಲು ಶಕ್ತರಾದರು.

## ಅಚಲ ಆತ್ಮವಿಶ್ವಾಸ

ಚಿತ್ರಮಯ ಪ್ರಪಂಚದ ಲಕ್ಷ್ಯವನ್ನು ನಮ್ಮ ಹರಿದಾಸರು ಕತ್ತಲೆ ಬೆಳದಿಂಗಳುಗಳಿಗೂ, ಬೆಳಕಿನ ಛಿದ್ರಗಳಿಂದ ಕೂಡಿದ ರಥಿಕ್ಷಬಿಯ ನೆರಳಿಗೂ ಹೋಲಿಸಿರುವರು. ಸರ್ವಜ್ಞ 'ಒಳಿತು ಕೇಡುಗಳೆರಡು ಬೆಳಕು ಕತ್ತಲೆಯಂತೆ,' ಇವೆರಡರ 'ಮಾನಸ ಸಮತೋಲ' ಇರುವದೇ 'ಸಂಸಾರದ ಬಂಗಾರು' ಎಂದು ಸಾರಿರುವನು. ತನ್ನ ತಿಳಿಗನ್ನಡದಲ್ಲಿ ಕರ್ಮಯೋಗ ಮಾರ್ಗದಿಂದ ಮಾನವನು ಇಂಥ ಸಮತೋಲವನ್ನು ಹೇಗೆ ಸಾಧಿಸಬೇಕೆಂಬುದನ್ನು ಕಲಿಸಿದೆ ನಮ್ಮ ಭಗವದ್ಗೀತೆ. ಈ ತರದ ಮನೋವೃತ್ತಿಯನ್ನು ತಳೆದು ಕರ್ತವ್ಯನಿಷ್ಠೆಯಿಂದ ಬಾಳುವವರು ಎಲ್ಲೋ ಸಾವಿರಕ್ಕೊಬ್ಬರು. ಅವರಲ್ಲಿ ಸಾಲಿ

ಒಬ್ಬರು. ಅವರ ಕವನಗಳಲ್ಲಿ ಇದನ್ನು ಸ್ಫುಟವಾಗಿ ಮೇಲಿಂದ ಮೇಲೆ ಕಾಣುವಂತಿದೆ, ಮಗ ಅಗಲಿದಾಗ ಗತಿಗಾಣದೆ–

'ಎಂತೋ ನಾನೀ ಧರೆಗೆ ನಿಂತಿಹುದು ಜಗದೊಳಗೆ
ಸಂತತವು ಆಪತ್ತು! ಸಂತತವು ಆಪತ್ತು!'

–ಎಂದು ನಿರಾಶೆಯು ಕಗ್ಗತ್ತಲೆಯಲ್ಲಿ ಕನವರಿಸುತ್ತಿರುವಾಗಲೇ

'ಸತತವೂ ಯತ್ನಿಸುವೆ ಧೃತಿಗುಂದದಿರಲು, ಸಂ-
ಸ್ಕೃತಿಯು ಬಂಧನವು ಮತಿಗೆಡಿಸುತಿರಲಿತ್ತ–'

–ಎಂದು ದೃಢ ಮನಸ್ಸಿನಿಂದ ಮುನ್ನಡೆವ ಗಂಭೀರ ಪ್ರತಿಜ್ಞೆಗೈದಿರುವರು. ಅಷ್ಟಕ್ಕೇ ನಿಲ್ಲದೆ,

'ಜಗವನೇ ತೂಗುತಿಹ ಶಕ್ತಿ ನಿನಗಾಶ್ರಯವು
ನಗಿಸಿಕೊಳ್ಳುವದೇಕೊ ದೀನನಾಗಿ।
ನಗುತೆ ನಗಿಸುತೆ ಲೋಕವನು ಬೆಳಗುನಲ್ಲಾಳ
ಮೊಗರಿನಿಂದಾತ್ಮ ಶಕ್ತಿಯನು ತೋರು॥'

ಎಂದು ಸ್ವರೂಪಾಂತರ್ಗತ ಸರ್ವಶಕ್ತ ಪರಮಾತ್ಮನ ಪ್ರಸಾದದಿಂದ ಮಾನವನು ತನ್ನಲ್ಲಿರುವ ಸುಪ್ತಶಕ್ತಿಯನ್ನು ಕುದುರಿಸಿಕೊಂಡು ಕಾರ್ಯ ಪ್ರವೃತ್ತನಾಗಿ ಉದ್ದಿಷ್ಟಧ್ಯೇಯವನ್ನು ಸಾಧಿಸಿಕೊಳ್ಳಬಲ್ಲನೆಂಬ ಅಚಲ ಶ್ರದ್ಧೆ ಆತ್ಮವಿಶ್ವಾಸಗಳನ್ನು ತೋರಿರುವರು.

ಯಸ್ಮಾನ್ನೋದ್ವಿಜತೇ ಲೋಕಃ ಲೋಕಾನ್ನೋದ್ವಿಜತೇಯಃ। –ಎಂಬ ಗೀತೆಯ ಪವಿತ್ರ ಶಬ್ದಗಳೇ,

'ಪರರಿಗಂಜದೆ ಪರರನಂಜಿಸದೆ ಸತ್ಯನಿ-
ಷ್ಠುರನಾಗಿ ಸೌಜನ್ಯ ಮಧುರನಾಗಿ।
ದೊರೆಯೆ ನಿನ್ನೊಳನಗೆಯು ತಂಬೆಳಗಿನೊಳು ಸುಖಿಸು-
ತಿರುವ ಭಾಗ್ಯವು ನನಗೆ ಬರುವದೆಂದು?॥'

ಎಂದು ಸಾಲಿಯವರ ಮೃದು ಮಧುರ ಸಿರಿಗನ್ನಡದಲ್ಲಿ ಒಡಮೂಡಿ ಇದುವೆ ಮಾನವ ಧರ್ಮ, ಇದನ್ನೇ ಸಾಧಿಸತಕ್ಕದ್ದು ಎಂದು ನೆರೆನಂಬಿ ಅವರು ನಡೆದಿದ್ದರು.

## ಅಹಂಭಾವ ನಿರ್ಮೂಲನ

ಹಿಂದೊಮ್ಮೆ ವಿಜಯನಗರದ ಕೃಷ್ಣದೇವ ರಾಯನ ಕುಹಯೋಗವನ್ನು ನಿವಾರಿಸಿದ ಆತನ ಗುರು ಶ್ರೀ ವ್ಯಾಸತೀರ್ಥರು ಕನಕದಾಸರನ್ನು "ನಾವು ಯಾವಾಗೋ, ಕನಕ, ಮುಕ್ತಿಗೆ ಹೋಗುವದು?" ಎಂದು ಕೇಳಿದ್ದಕ್ಕೆ ಆತ, "ಸ್ವಾಮೀ, ಇನ್ನೂ, ಮೂರು ಜನ್ಮಕ್ಕೆ"; "ನೀನೋ" ಎಂದು ಕೇಳಿದ್ದಕ್ಕೆ "'ನಾನು' ಹೋದರೆ ಹೋದೇನು



ಸ್ವಾಮೀ" ಎಂದು ಉತ್ತರಿಸಿದನಂತೆ ಈ 'ನಾನು' ಕಳೆದುಕೊಳ್ಳುವುದೇ ಬ್ರಹ್ಮಜ್ಞಾನಕ್ಕೆ ಅರ್ಹವಾದ ನಿರ್ಲೇಪ ಪಡೆವ ಜೀವನ ಗುರಿ.

ಸಾಲಿಯವರಂಥ ಸುಪಕ್ವ ಜೀವಿಗಳಿಗೆ ಕೂಡ 'ನಾನು'ತನವನ್ನು ಕಳೆದುಕೊಳ್ಳುವ ಈ ಗುರಿ ಸಾಧನೆ ಎನಿಷ್ಟು ದುರ್ಗಮ್ಯವೆಂಬುದು ಮೇಲೆ ಉದಾಹರಿಸಿದ ಅಚಲ ಶ್ರದ್ಧೆ ಆತ್ಮವಿಶ್ವಾಸಗಳ ಶಬ್ದ ಪ್ರತೀಕದಂತಿರುವ ಅವರ 'ಜಗವನೇ ತೂಗುತಿಹ ಶಕ್ತಿ ನಿನಗಾಶ್ರಯವು' ಪದ್ಯ ಪಾಠದಲ್ಲಿಯೇ ವ್ಯಕ್ತವಾಗಿದೆ. ಇದು ಅವರು ಸ್ವಹಸ್ತಾಕ್ಷರಗಳಲ್ಲಿ ನನ್ನಲ್ಲಿರುವ ಮುದ್ರಿತ ಕೃತಿಯಲ್ಲಿ ತಿದ್ದಿದ ಪಾಠ. ಇತರ ಕೃತಿಗಳಲ್ಲಿ 'ಜಗವನೇ ತೂಗುತಿಹ ಮಹಾಶಕ್ತಿ ನಿನ್ನದಿರೆ' ಎಂದಿದೆ. ಅವರ ಈ ತಿದ್ದುಪಡಿಗೆ ಒಂದು ಹಿನ್ನೆಲೆ ಇದೆ. ಆಗ ನಾನು ಬನಾರಸ ಹಿಂದೂ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕನಿದ್ದೆ. ರಾಮಚಂದ್ರರಾಯರು ತಮ್ಮೊಬ್ಬ ಶಿಷ್ಯನೊಂದಿಗೆ ನನ್ನಲ್ಲಿ ಏಳೆಂಟು ದಿನ ತಂಗಿದ್ದರು. ನಮ್ಮೊಂದಿಗೆ ನನ್ನ ಹಿರಿಯಣ್ಣ ಅಂತಣ್ಣ ಅವರೂ ಇದ್ದರು. ಆದೀಗ ಬೆಳಕು ಕಂಡಿದ್ದ ಸಾಲಿಯವರ 'ಯದುಪತಿ'ಯನ್ನು ಓದಿ ಸಂತಸಪಟ್ಟ ಅವರು, ಆತ್ಮಸ್ಥೈರ್ಯಕ್ಕಾಗಿ ತನ್ನ ಮನಸ್ಸಿಗೆ ಹೇಳಿಕೊಂಡ ಯದುಪತಿಯ 'ಬದುಕು ಬದುಕೆಲೋ ಬಂಟ' ಹಾಡಿನಲ್ಲಿ ಮುದ್ರಿಸಿದಂತೆ, 'ಜಗವನೇ ತೂಗುವ ಮಹಾಶಕ್ತಿ ನಿನ್ನದಿರೆ' ಎಂಬುದು 'ಸಾಧುವೇನೊ ರಾಮರಾಯಾ' ಎಂದು ಕೇಳಲು, ಒಂದರೆಕ್ಷಣ ಸ್ತಬ್ಧರಾಗಿದ್ದು ಸಾಲಿಯವರು ನನಗೆ ಕೊಟ್ಟ ಪ್ರತಿಯಲ್ಲಿ ಮೇಲಿನಂತೆ ತಿದ್ದಿದರು. ಭಾವನಾವಶದಲ್ಲಿ ಘಟಿಸಿದ ಅದೊಂದು ಭಗವಂತನ ಅಪಾರ ಶಕ್ತಿಯನ್ನು ತನ್ನದಾಗಿಸಿಕೊಂಡ ದೊಡ್ಡ ಅಪರಾಧ; ಅದಕ್ಕೆ ಕಾರಣವಾದ ಅಹಂ ಮಮತೆಯು ಎಂಥ ಪ್ರಮಾದಕ್ಕೆ ಗುರಿಮಾಡಿತಲ್ಲ, ಎಂದು ಬಹುವಿಧವಾಗಿ ನೊಂದುಕೊಂಡು ಪರಿತಪಿಸಿದರು.

## ಒಳ್ಳೇ ಔಷಧ

ಸಾಮಾನ್ಯವಾಗಿ ಸಂಸಾರಿಯು ಬಡತನ ನಿಂದೆಗಳನ್ನು ಅನಿಷ್ಟವೆಂದೇ ಎಣಿಸುತ್ತಾನೆ. ಆದರೆ ಸಾಧನ ಮಾರ್ಗದಲ್ಲಿದ್ದ ಜೀವಿಯು ಇವು 'ನಾನು'ವಿನ ರೋಗವನ್ನು ಸಮೂಲ ಕಿತ್ತೊಗೆಯಲು ಒಳ್ಳೇ ಔಷಧಗಳೆಂದೇ ಎಣಿಸುತ್ತಾನೆ. ಇವೇ ವಿರಕ್ತಿಗೆ ಮಾರ್ಗ ತೋರಿಸುತ್ತವೆ. ವಿರಕ್ತಿ ಇಲ್ಲದೆ ಭಕ್ತಿ–ಜ್ಞಾನಗಳು ಹುಟ್ಟಿ ಬೆಳೆಯಲಾರವು. ಈ ಮೂರರ ಪರಸ್ಪರ ಅಭಿಯೋಗದಿಂದಲೇ ಪರಮ ಶ್ರೇಯಸ್ಸು. ಈ ಸತ್ಯವನ್ನು ಚೆನ್ನಾಗಿ ಅರಿತುಕೊಂಡು ಬಂದ ಬಡತನವನ್ನು ಸಂತೋಷದಿಂದ ಒಪ್ಪಿ, ಪರನಿಂದೆಯಿಂದ ಉದ್ವೇಗಗೊಳ್ಳದೆ ವೈರಾಗ್ಯಕ್ಕೆ ಅಂಟಿಕೊಂಡು. ಗೀತೆಯಲ್ಲಿ ವಿವರಿಸಿದ ಯೋಗಮಾರ್ಗದಿಂದ ಜೀವನ ಯಾತ್ರೆ ಮುಗಿಸಿದ ನನಗೆ ಗೊತ್ತಿರುವ ವ್ಯಕ್ತಿಗಳಲ್ಲಿ ಒಬ್ಬರು ಸಾಲಿ ರಾಮಚಂದ್ರರಾಯರು.

ಆತ್ಮೀಯರನೇಕರಿಗೆ ಅಕ್ಕರೆಯ 'ಅಜ್ಜ' ಆಗಿ ನಂತರ ಮನೆಯಲ್ಲಿ ಕಾಲಿರಿಸಿದ್ದ ಸಾಲಿ ಇಂದು ನಮ್ಮೊಂದಿಗಿಲ್ಲ. ಅವರೂ ಶ್ರೀ ಕ್ಷೇತ್ರ ಸೋದೆಯ ಗುರುವರ್ಯ ಶ್ರೀ ವಾದಿರಾಜರ ಸನ್ನಿಧಿಯಲ್ಲಿ ಅವರೇ ಹಚ್ಚಿದ, ಸ್ವರಚಿತ ಶ್ರೀ ವಾದಿರಾಜಾಷ್ಟಕದ ತಾಮ್ರಪಟ್ಟಿಕೆಯೊಂದಿಗೆ, ಶೋಭಿಸುತ್ತಿರುವ ನಿತ್ಯ ನಂದಾದೀಪ ನಮ್ಮೆಲ್ಲರಿಗೆ ಮಾರ್ಗದರ್ಶಕವಾಗಿದೆ. ಸುಜ್ಞಾನ, ಸೌಜನ್ಯ, ಸದಾಚಾರಗಳ ಸುಮಧುರ ಸಂಗಮದಂತಿದ್ದ ಅವರು ಅನುಸರಿಸಿದ ಮಾರ್ಗದಲ್ಲಿ ಮುನ್ನಡೆಸಿಕೊಂಡು ಹೋಗಲು ಕೈ ನೀಡಿ ಕರೆಯುತ್ತಿದೆ.* ✡

---

* ಈ ಶ್ರದ್ಧಾಂಜಲಿಯನ್ನು ಬರೆದು ಮುಗಿಸುವ ಮುನ್ನ ಇದನ್ನೋದಿ ಹಲವು ಸೂಕ್ತ ಸಲಹೆಗಳನ್ನಿತ್ತು ಈಗಿದ್ದ ರೂಪಕ್ಕೆ ತರಲು ನೆರವಾದವರು ಸಾಹಿತ್ಯ ಕ್ಷೇತ್ರದಲ್ಲಿ ಪರಿಶ್ರಮಿಸುತ್ತಿರುವ ಶ್ರೀ ಚಟಗುಪಿ ಭೀಮರಾಯ. –ಲೇಖಕ



ತೂರುಬೂದಿ ಸಿವಿಲ್ ಎಂಜಿನಿಯರಿಂಗ್ ಕ್ಷೇತ್ರದಲ್ಲೂ ತೂರಿಬರುತ್ತಿದೆ

# ಬೂದಿಯೆಂದರೆ 'ಇಶ್' ಎನ್ನಬೇಡಿ

ಎಂ. ಜಿ. ಶ್ರೀನಿವಾಸನ್

ಬೂದಿಯ ಪರಿಚಯ ಯಾರಿಗಿಲ್ಲ? ಅಡಿಗೆ ಮನೆಯ, ಬಚ್ಚಲು ಮನೆಯ ಒಲೆಗಳಿಂದ ದಿನವೂ ತೆಗೆಯುವುದನ್ನು ನೋಡಿದ್ದೇವೆ. ಇದು ಯಾರಿಗೂ ಬೇಡವಾದ ವಸ್ತು. ಇದನ್ನು ಮನೆಯ ಹಿಂದಿರುವ ತಿಪ್ಪೆ ಗುಂಡಿಗೋ ಪಕ್ಕಕ್ಕೋ ಸುರಿಯುವುದನ್ನು ಹಲವು ಬಾರಿ ಗಿಡದ ಪಾತಿಗೋ. ಮತ್ತೆ ಕೆಲವು ಬಾರಿ ಹುಳ ಹೊಡೆದಿರುವ ಬದನೆ, ಗೋರಿಕಾಯಿ ಇತ್ಯಾದಿ ಗಿಡಗಳ ಎಲೆಗಳ ಮೇಲೂ ಸಿಂಪಡಿಸುವುದನ್ನು ನೋಡಿದ್ದೇವೆ. ಈ ಬೂದಿಯು ಸೌದೆ, ಇದ್ದಿಲು, ಮರದ ಹೊಟ್ಟು, ಭತ್ತದ ಹೊಟ್ಟು, ಮುಂತಾದವುಗಳನ್ನು ಉರಿಸಿದ ನಂತರ ಉಳಿದದ್ದು.

ಉಗಿಬಂಡಿ ಹೋಗುವೆಡೆಗಳಲ್ಲೆಲ್ಲ ಒಂದು ರೀತಿಯ ಬೂದಿಯನ್ನು ನೋಡಬಹುದು. ಕೆಲವು ಕಾರ್ಖಾನೆಗಳಲ್ಲಿ ಜಾಲರಿಗಳ ಮೇಲೆ ಕಲ್ಲಿದ್ದಲುಗಳನ್ನು ಉರಿಸಿ, ಹಬೆ, ಬಿಸಿ ಗಾಳಿ ಮುಂತಾದುವನ್ನು ಪಡೆಯುತ್ತಾರೆ. ಮನೆಯ ಬೂದಿಗೂ ಈ ಬೂದಿಗೂ ಇರುವ ವ್ಯತ್ಯಾಸವೇನೆಂದರೆ, ಮನೆಯದು ಹಸನಾದ ಬೂದಿಯಾದರೆ, ಕಲ್ಲಿದ್ದಲಿನ ಈ ಬೂದಿಯಲ್ಲಿ ಕೆಲವು ಪೂರ್ಣವಾಗಿ ಉರಿಯದೆ ಇದ್ದ ಕಲ್ಲಿದ್ದಲೂ ಮಿಶ್ರವಾಗಿರುತ್ತವೆ. ಅರೆ ಉರಿದ ಕಲ್ಲಿದ್ದಲನ್ನು ಬೇರ್ಪಡಿಸಿ ಅದನ್ನು ಇಟ್ಟಿಗೆ ಸುಡುವ ಕುಲುಮೆಗಳಲ್ಲೂ ಉಪಯೋಗಿಸುತ್ತಾರೆ. ಉಳಿದುದನ್ನು ಹಳ್ಳ ತುಂಬಲು ಉಪಯೋಗಿಸುವರು.

ಇದಕ್ಕಿಂತ ಭಿನ್ನವಾದ ಒಂದು ಬೂದಿಯಿದೆ. ಇದೇ ತೂರುಬೂದಿ. ಇದು ತಾಂತ್ರಿಕ ಕ್ಷೇತ್ರದಲ್ಲಿ-ಪ್ರಮುಖವಾಗಿ ಸಿವಿಲ್ ಇಂಜನಿಯರಿಂಗ್ ಕ್ಷೇತ್ರದಲ್ಲಿ-ಇತ್ತೀಚೆ ಹೊಸದಾಗಿ ಬಳಕೆಯಲ್ಲಿ ಬರುತ್ತಿದೆ.

ಹಬೆ ವಿದ್ಯುದಾಗಾರ(Steam Power Station)ಗಳಲ್ಲಿ ಕಲ್ಲಿದ್ದಲಿನ ಮತ್ತು ಇದರದೇ ಇನ್ನೊಂದು ರೂಪವಾದ ಲಿಗ್ನೈಟಿನ ತುಂಡುಗಳನ್ನು ನಯವಾಗಿ ಪುಡಿಮಾಡಿ ಉರಿಸುವರು. ಈ ಪುಡಿಯು ಉರಿದ ನಂತರ ಬೂದಿಯಾಗಿ ಹೊಗೆಯೊಂದಿಗೆ ಹೊರಬರುತ್ತದೆ. ಹೊಗೆಯಿಂದ ವಿಶೇಷ ಸಾಧನಗಳನ್ನುಪಯೋಗಿಸಿ ಈ ಬೂದಿಯನ್ನು ಬೇರ್ಪಡಿಸುವರು. ಗಾಳಿಯಲ್ಲಿ ಬಹು ಸುಲಭವಾಗಿ ತೂರಿಬಿಡುವಷ್ಟು ನಯವಾದುದರಿಂದ ಇದಕ್ಕೆ ತೂರುಬೂದಿಯೆಂಬ ಹೆಸರು.

## ತೂರುಬೂದಿಯ ಸಮಸ್ಯೆ

ನಾಡಿನ ಪ್ರಗತಿಗೆ ವಿದ್ಯುಚ್ಛಕ್ತಿ ಬಹು ಮುಖ್ಯ. ಇದನ್ನು ಅನೇಕ ಮೂಲಗಳಿಂದ ಪಡೆಯಬಹುದಾದರೂ ವಿದ್ಯುದುತ್ಪಾದನೆಗಾಗಿ ನಾವು ಸುಲಭವಾಗಿ ಅವಲಂಬಿಸಬಹುದಾದದ್ದು ಜಲಶಕ್ತಿಯೊಂದೇ ಆಗಬೇಕು. ಇದನ್ನು ಬಳಸುವುದರಿಂದ ವಿದ್ಯುತ್ತಿನ ಬೇಡಿಕೆ ಹೆಚ್ಚಿದಂತೆಲ್ಲಾ ಅಷ್ಟು ವಿದ್ಯುದಾಗಾರಗಳನ್ನು ಸ್ಥಾಪಿಸಿ, ಹೆಚ್ಚು ಬೇಕಾದಷ್ಟು ವಿದ್ಯುತ್ತನ್ನು ರವಾನಿಸಬಹುದು. ಕಲ್ಲಿದ್ದಲು ಮತ್ತು ಲಿಗ್ನೈಟುಗಳನ್ನು ಉರಿಸುವುದರಿಂದ ಮಾತ್ರವಷ್ಟೇ ತೂರುಬೂದಿ ದೊರೆಯುವುದು.

ಒಂದು ಸಾವಿರ ಯೂನಿಟ್ಟುಗಳ ವಿದ್ಯುದುತ್ಪಾದನೆಗೆ ಬೇಕಾದ ಉರವಲಿನಿಂದ ೧೫೦ ಕಿಲೋಗ್ರಾಂ ತೂರುಬೂದಿಯು ಹೊರಬರುತ್ತದೆ. ಒಂದೊಂದು

ವಿದ್ಯುಚ್ಛಕ್ತಿಯ ತಗುದಿ* ಕನಿಷ್ಠ ೨೦೦ ಮೆಗಾವಾಟ್ ಎಂದಿಟ್ಟುಕೊಂಡರೆ, ದಿವಸಕ್ಕೆ ೬೨೦ ಟನ್ ತೂರು ಬೂದಿಯು ಹೊಗೆಯೊಂದಿಗೆ ಹೊರಬರುತ್ತದೆ. ಇದನ್ನು ಬೇರ್ಪಡಿಸದೆ ಹಾಗೆಯೇ ಬಿಟ್ಟರೆ, ಪರಿಸರ ಮಾಲಿನ್ಯದ ತೊಡಕಿನಲ್ಲಿ ಸಿಕ್ಕಿಕೊಳ್ಳುತ್ತೇವೆ. ವಾತಾವರಣವನ್ನೂ ಪರಿಸರವನ್ನೂ ಮಲಿನ ಮಾಡದಿರಲು ಮತ್ತು ಕೆಲವು ಉಪಕರಣಗಳ ಮೇಲಾಗುವ ದುಷ್ಪರಿಣಾಮಗಳನ್ನು ನಿವಾರಿಸಲು, ತೂರುಬೂದಿಯನ್ನು ಬೇರ್ಪಡಿಸುವರು. ಈಚಿನ ಹಬೆ ವಿದ್ಯುದಾಗಾರಗಳು ಕನಿಷ್ಠ ೬೦೦ ಮೆಗಾವಾಟ್ ತಗುದಿಯವು. ಅಂದರೆ ಒಂದು ದಿವಸಕ್ಕೆ ೨೨೦೦ ಟನ್ನಿನಷ್ಟು ತೂರುಬೂದಿಯು ಶೇಖರವಾಗುತ್ತದೆ. ಪ್ರಪಂಚದಲ್ಲಿ ಈಗ ಸುಮಾರು ೪೦ ಕೋಟಿ ಟನ್ನಿನಷ್ಟು ತೂರುಬೂದಿ ಪ್ರತಿವರ್ಷ ಉತ್ಪಾದಿತವಾಗುತ್ತದೆ.

ಇಷ್ಟು ತೂರುಬೂದಿಯನ್ನು ಏನು ಮಾಡುವುದು ಎಂಬುದು ದೊಡ್ಡ ಪ್ರಶ್ನೆ. ಇದಕ್ಕೆ ಸಾಮಾನ್ಯವಾಗಿ ತೋರುವ ಉತ್ತರ. ತ್ಯಜಿಸಿದ ಗಣಿಗಳನ್ನೂ ಹಳ್ಳ-ಕೊಳ್ಳಗಳನ್ನೂ ತುಂಬುವುದು ಅಥವಾ ಊರಿನಾಚೆ ದೂರದಲ್ಲಿ ರಾಶಿ ಹಾಕುವುದು. ವರ್ಷಾನುಗಟ್ಟಲೆ ಸತತವಾಗಿ ಶೇಖರವಾಗುವ ಇಷ್ಟೊಂದು ತೂರುಬೂದಿಯನ್ನು ತುಂಬಲು ಹಳ್ಳ-ಕೊಳ್ಳ, ಗಣಿಗಳೆಲ್ಲಿ ಸಿಕ್ಕಬೇಕು? ಅದನ್ನು ರಾಶಿಹಾಕಲು ಬೇಕಾದ ವಿಸ್ತಾರವಾದ ಜಾಗ. (ಒಂದು ೬೦೦ ಮೆಗಾವಾಟ್ ವಿದ್ಯುದಾಗಾರಕ್ಕೆ ಸುಮಾರು ೧೦೦ ಹೆಕ್ಟೇರು ಬೇಕು) ಅದೂ ಈಗ ಬೆಳೆಯುತ್ತಿರುವ ಊರು, ನಗರಗಳ ಬಳಿ ಅಗ್ಗವಾಗಿ ಎಲ್ಲಿ ದೊರೆಯಬೇಕು ? ಅಗ್ಗವಾಗಿ ಎಲ್ಲೋ ಹತ್ತಾರು ಕಿಲೋಮೀಟರುಗಳಾಚೆ ದೊರೆತರೆ ಅಲ್ಲಿಗೆ ರವಾನಿಸುವ ಖರ್ಚು ಕಡಿಮೆಯೇ?

ಈ ಸಮಸ್ಯೆಯ ಕಡೆಗೆ ಹತ್ತಾರು ಸಂಘ-ಸಂಸ್ಥೆಗಳ, ವಿಜ್ಞಾನಿಗಳ ತಂತ್ರಜ್ಞರ ಗಮನ ಹರಿದು, ತೂರುಬೂದಿಯನ್ನು ಉಪಯೋಗಿಸಲು ಹಲವಾರು ಮಾರ್ಗಗಳನ್ನು ಕಂಡುಕೊಂಡಿದ್ದಾರೆ. ಅವುಗಳಲ್ಲಿ ಕೆಲವನ್ನು ಈಗಾಗಲೇ ಯಶಸ್ವಿಯಾಗಿ ಕಾರ್ಯಗತಗೊಳಿಸಲಾಗಿದೆ. ಇನ್ನು ಕೆಲವು ಇನ್ನೂ ಸಂಶೋಧನೆಯ ವಿವಿಧ ಹಂತಗಳಲ್ಲಿವೆ.

ತೂರುಬೂದಿ ಸಿಮೆಂಟಿಗಿಂತ ನಯವಾಗಿರುತ್ತದೆ. ಉಪಯೋಗಿಸಿದ ಉರವಲಿನ ದರ್ಜೆಗನುಗುಣವಾಗಿ ಅದರ ಬಣ್ಣವು ಬೂದಿಯ ಬಣ್ಣದಿಂದ ಸಿಮೆಂಟಿನ ಬಣ್ಣದ ವರೆಗೂ ವ್ಯತ್ಯಾಸಗೊಳ್ಳುವುದು. ಇದರಲ್ಲಿ ಸಿಲಿಕಾ, ಅಲ್ಯುಮಿನ, ಕಬ್ಬಿಣದ ಭಸ್ಮ, ಮೆಗ್ನೀಸಿಯಮ್, ಸುಣ್ಣ, ಪೊಟಾಸಿಯಂ ಭಸ್ಮ, ಸೋಡಿಯಂ ಭಸ್ಮ, ಗಂಧಕದ ಟ್ರೈ-ಆಕ್ಸೈಡ್ ಅಲ್ಲದೆ ಅಲ್ಪ ಪ್ರಮಾಣದಲ್ಲಿ ಬೋರಾನ್, ರಂಜಕ, ಯುರೇನಿಯಂ, ಥೋರಿಯಂ, ತಾಮ್ರ, ಮ್ಯಾಂಗನೀಜ್, ಆರ್ಸೆನಿಕ್, ನಿಕ್ಕಲ್ ಸತು, ಸ್ಕ್ಯಾಂಡಿಯಂ, ಬೇರಿಯಂ, ಪಾದರಸ, ವೆನೆಡಿಯಂ, ಜಿರ್ಕೋನಿಯಂಗಳೂ ಇವೆ.

ತೂರುಬೂದಿಯ ಈ ವಿಸ್ತಾರವಾದ ರಾಸಾಯನಿಕ ಸಂಯೋಜನೆಯನ್ನು ಗಮನಿಸಿ ಕೃಷಿ, ರಾಸಾಯನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಉಪಯೋಗಿಸಲು ಪ್ರಯತ್ನಗಳು ನಡೆದಿವೆ.

## ಕೃಷಿ ಕ್ಷೇತ್ರದಲ್ಲಿ

ತೂರು ಬೂದಿಯಲ್ಲಿರುವ ಸುಣ್ಣ, ರಂಜಕ, ಮೆಗ್ನೀಸಿಯಂ, ಕಬ್ಬಿಣ, ಬೋರಾನ್, ಮಾಲಿಬ್ಡಿನಂ ಸಸ್ಯಗಳ ಬೆಳವಣಿಗೆಗೆ ಅನುಕೂಲವಾದ್ದರಿಂದ ತೂರುಬೂದಿಯನ್ನು ಗೊಬ್ಬರಗಳೊಂದಿಗೆ ಬೆರೆಸಿ ಉಪಯೋಗಿಸುವ ಪ್ರಯತ್ನಗಳು ನಡೆದಿವೆ. ಗ್ರಾಮನಾಳದ ಬಗ್ಗಡ(Sewage Sludge) ಜೊತೆಗೆ ಬೆರೆಸಿ ಉಪಯೋಗಿಸಿದಾಗ ಸಸ್ಯಗಳ ಬೆಳವಣಿಗೆ ಬಹಳ ಅನುಕೂಲವಾಗಿರುವುದಾಗಿ ತಿಳಿದುಬಂದಿದೆ.

ಮಣ್ಣು ಆಮ್ಲೀಯವಾಗಿದ್ದರೆ, ಅದಕ್ಕೆ ತೂರು ಬೂದಿಯನ್ನು ಬೆರೆಸುವುದರಿಂದ ಸಸ್ಯಗಳ ಬೆಳವಣಿಗೆಯನ್ನು ಪ್ರಚೋದಿಸಬಹುದು.

---

* ಒಂದು ಮೆಗಾವಾಟ್ ತಗುದಿ ಎಂದರೆ, ಒಂದು ಘಂಟೆಗೆ ೧೦೦೦ ಯೂನಿಟ್ಟುಗಳನ್ನು ತಯಾರಿಸುವ ಸಾಧ್ಯತೆ.

## ರಾಸಾಯನಿಕ ಕ್ಷೇತ್ರದಲ್ಲಿ

ತೂರುಬೂದಿಯನ್ನು ನೀರಿನಲ್ಲಿ ಕಲಸಿ ಕೊಳವೆಗಳ ಮೂಲಕ ಅದಕ್ಕಾಗಿಯೇ ನಿರ್ಮಿಸಿದ ಕೊಳಗಳಿಗೆ ರವಾನಿಸಿ, ಅಲ್ಲಿ ಶೇಖರವಾಗಲು ಬಿಡುವರು. ಹೀಗೆ ಮಾಡುವಾಗ, ಇಂಗ್ಲಂಡಿನ ಸೆಂಟ್ರಲ್ ಎಲೆಕ್ಟ್ರಿಸಿಟಿ ಜನರೇಟಿಂಗ್ ಬೋರ್ಡಿನವರು ತೂರುಬೂದಿಯ ಸ್ವಲ್ಪ ಭಾಗವು ನೀರಿನ ಮೇಲೆ ತೇಲುವುದನ್ನು ಕಂಡು ಇದನ್ನು ತೇಲುಬೂದಿ ಎಂದು ಕರೆದರು. ಇದು ತೂರುಬೂದಿಯ ಒಂದು ಮೂರಾಂಶದಷ್ಟು ಭಾರವಿದ್ದುದಾಗಿಯೂ, ಬಿಳಿ ಬಣ್ಣವುಳ್ಳದ್ದಾಗಿಯೂ ಅದರ ಕಣಗಳು ತೂರುಬೂದಿಯದಕ್ಕಿಂತ ಸ್ಥೂಲವಾಗಿದ್ದುದಾಗಿಯೂ ಕಣಗಳು ಒಂದೇ ಅಳತೆಯದಾಗಿದ್ದುದಾಗಿಯೂ ತಿಳಿದುಬಂದಿತು. ಅಲ್ಲದೆ ತೇಲುಬೂದಿಯಲ್ಲಿ ಅಲ್ಯುಮಿನ ಮತ್ತು ಸಿಲಿಕಾದ ಅಂಶಗಳು ಹೆಚ್ಚಾಗಿದ್ದು ಕಬ್ಬಿಣದ ಅಂಶ ಕಡಿಮೆ ಇತ್ತು. ತೂರುಬೂದಿಯಲ್ಲಿ ತೇಲುಬೂದಿಯ ಅಂಶವು ಶೇಕಡಾ ೨೦ರಷ್ಟು ಇರುವುದಾಗಿ ಗೊತ್ತಾಯಿತು. ಈ ತೇಲುಬೂದಿಯು ಉತ್ಕೃಷ್ಟ ಶಾಖನಿರೋಧಕಗಳ ತಯಾರಿಕೆಗೆ ಬೇಕಾದ ಮೂಲವಸ್ತುವಾಗಬಲ್ಲುದೆಂದೂ ರಾಸಾಯನಿಕ ಮತ್ತು ಪೆಟ್ರೋಲಿಯಂ ಕೈಗಾರಿಕೆಯಲ್ಲಿ ವೇಗವರ್ಧಕವಾಗಿ ಉಪಯೋಗಕ್ಕೆ ಬರುವುದೆಂದೂ ತಿಳಿಯಿತು.

ತೂರುಬೂದಿಯಲ್ಲಿ ಶೇಕಡಾ ಹದಿನೆಂಟರಷ್ಟಿರುವ ಕಬ್ಬಿಣವನ್ನು ಅಯಸ್ಕಾಂತ ವಿಧಾನಗಳಿಂದ ಬೇರ್ಪಡಿಸಿ, ಅದನ್ನು ಉಂಡೆಗಳಾಗಿ ಮಾಡಿ ಮಾರಬಹುದೆಂದು ಕಂಡುಕೊಂಡಿದ್ದಾರೆ. ಈ ರೀತಿ ಕಬ್ಬಿಣ ತೂರುಬೂದಿಯನ್ನು ಸಿಮೆಂಟಿನ ತಯಾರಿಕೆಯಲ್ಲಿ ಜೇಡಿ ಶಿಲೆಯ ಬದಲು ಬಳಸಬಹುದು.

ತೂರುಬೂದಿಯಲ್ಲಿ ಸಿಲಿಕಾದ ಸೂಕ್ಷ್ಮಗೋಳಗಳಿವೆ. ಇದನ್ನು ಸೆನೋಗೋಳ ಎನ್ನುವರು. ಇದನ್ನು ಕೆಲವು ಪ್ಲಾಸ್ಟಿಕ್ಕುಗಳೊಂದಿಗೆ ಬೆರೆಸಿ, ಆ ಪ್ಲಾಸ್ಟಿಕ್ಕನ್ನು ಶಾಖನಿರೋಧಕವಾಗಿ ಮಾಡಬಹುದು. ಸೆನೋಗೋಳಗಳನ್ನು ಪೆಯಿಂಟುಗಳ ಅವಾಹಕಗಳ ಮತ್ತು ರಬ್ಬರಿನ



ಉತ್ಪನ್ನಗಳ ತಯಾರಿಕೆಯಲ್ಲೂ ಉಪಯೋಗಿಸಬಹುದು. ಪಾಲಿಯೆಸ್ಟರ್‌ರಾಳ-ಸೆನೋಗೋಳದ ಮಿಶ್ರಣವನ್ನು ಮರದ ಚೌಕಟ್ಟಿನ ರಿಪೇರಿಗೂ, ಸೆನೋಗೋಳ – ಇಪಾಕ್ಸಿ ನೊರೆಯನ್ನು ಉತ್ಕೃಷ್ಟ ಉಷ್ಣ ಅವಾಹಕವಾಗಿಯೂ ಉಪಯೋಗಿಸಬಹುದು. ಕೆಲವು ರಾಸಾಯನಿಕ ಉದ್ಯಮಗಳಲ್ಲಿ ಫಿನಾಲನ್ನು ಹೀರಲೂ ತೂರುಬೂದಿಯನ್ನು ಬಳಸುವರು.

ರಾಸಾಯನಿಕ ಮತ್ತು ಶಾಖನಿರೋಧಕಗಳ ಉದ್ಯಮಿಗಳಿಗೆ ಬೇಕಾದ ಅಲ್ಯುಮಿನಾವನ್ನು ತೂರುಬೂದಿಯಿಂದ ತೆಗೆಯಬಹುದು. ಅಲ್ಲದೆ ತಾಮ್ರ, ತವರ, ಸತು, ನಿಕ್ಕಲ್, ಮೆಗ್ನೀಸಿಯಂ, ಕ್ರೋಮಿಯಂ, ಟೈಟಾನಿಯಂ, ವೆನೆಡಿಯಂ ಸ್ಟ್ರಾಂಷಿಯಂ, ಬೇರಿಯಂ, ಲಿಥಿಯಂಗಳನ್ನು ಇದರಿಂದ ಲಾಭದಾಯಕವಾಗಿ ಪಡೆಯಬಹುದು.

ನೀರಿನಲ್ಲಿರುವ ಬ್ಯಾಕ್ಟೀರಿಯಾಗಳನ್ನು ನಿವಾರಿಸಲು ಕೈಗಾರಿಕಾ ಶೋಧಕಗಳಲ್ಲಿಯೂ ಗ್ರಾಮ ನಾರದ ಸಂಸ್ಕರಣಕ್ಕೂ ಇದನ್ನು ಬಳಸಬಹುದು.

## ತಾಂತ್ರಿಕ ಕ್ಷೇತ್ರದಲ್ಲಿ

ತೂರುಬೂದಿಯ ಉಪಯೋಗವು ಅಪಾರವಾಗಿ ಆಗುತ್ತಿರುವುದು ಸಿವಿಲ್ ಇಂಜಿನಿಯರಿಂಗ್ ಕ್ಷೇತ್ರದಲ್ಲಿ.

೧) ಹಳೆಯ ಕಲ್ಲುಗಣಿಗಳನ್ನು ಭರ್ತಿ ಮಾಡಲು ರಸ್ತೆ ಮತ್ತು ರೈಲು ದಾರಿಯ ಏರಿಗಳ ನಿರ್ಮಾಣಕ್ಕೆ ತೂರುಬೂದಿಯನ್ನು ಸೂಕ್ತ ಪರಿಮಾಣದ ನೀರಿನೊಂದಿಗೆ ಕಲಸಿ, ಪದರ ಪದರವಾಗಿ ಹರವಿ ಅಡಕಿಸುವರು.

೨) ಕೆಲವು ಮಣ್ಣುಗಳ ಭಾರ ಹೊರುವ ಸಾಮರ್ಥ್ಯವನ್ನು ಹೆಚ್ಚಿಸಲು, ಆ ಮಣ್ಣುಗಳನ್ನು ಸಿಮೆಂಟಿನೊಂದಿಗೆ ಕಲಸಿ ಪದರ ಪದರವಾಗಿ ಹರವಿ ಅಡಕಿಸುವರು. ತೂರುಬೂದಿಯೊಂದಿಗೆ ಸಿಮೆಂಟಿಗೆ ಬದಲು ಸುಣ್ಣವನ್ನು ಬೆರೆಸಿದರೆ ಇಷ್ಟೇ ಸಮರ್ಪಕತೆಯನ್ನು ಪಡೆಯಬಹುದು.

೩) ಸಿಮೆಂಟ್ ಕಾಂಕ್ರೀಟಿನ ತಯಾರಿಕೆಯಲ್ಲಿ ಸಿಮೆಂಟನ್ನು ಶೇಕಡಾ ೨೫ರ ವರೆಗೆ ತೂರುಬೂದಿಯಿಂದ ಬದಲಿಸಬಹುದು. ಹಾಗೆಯೇ ಮರಳನ್ನು ತೂರುಬೂದಿಯಿಂದ ಆಂಶಿಕವಾಗಿ ಬದಲಿಸಬಹುದು. ಇದರಿಂದ ಕಾಂಕ್ರೀಟಿನ ಸಾಮರ್ಥ್ಯ ಏನೂ ಕಡಿಮೆಯಾಗುವುದಿಲ್ಲ. ದಿನ ಕಳೆದಂತೆ ಹೆಚ್ಚುತ್ತಲೇ ಹೋಗುವುದು. ನೀರು ತೂರುವಿಕೆಯು ಕಡಿಮೆಯಾಗುವುದು. ಕಾಂಕ್ರೀಟು ಬಲಿಯುವಾಗ ಉತ್ಪತ್ತಿಯಾಗುವ ಶಾಖವು ಕಡಿಮೆಯಾಗುವುದು, ತೂರುಬೂದಿಯಲ್ಲಿ ಸಿಲಿಕಾದ ಸೂಕ್ಷ್ಮಗೋಳಗಳಿರುವುದರಿಂದ ಕಾಂಕ್ರೀಟಿನ ಕಾರ್ಯಶೀಲತೆಯು ಹೆಚ್ಚುವುದು. ಅಲ್ಲದೇ ನಯಗಾರಿಕೆ (ಒಪ್ಪ ಮಾಡುವುದು) ಸುಲಭ. ಹೀಗೆ ಹೆಚ್ಚು ಬೆಲೆಯ ಸಿಮೆಂಟನ್ನು ಅಗ್ಗದ ತೂರುಬೂದಿಯಿಂದ ಬದಲಿಸುವುದರಿಂದ ವೆಚ್ಚ ಕಡಿಮೆಯಾಗುವುದು.

ಅಮೇರಿಕದಲ್ಲಿರುವ ಪ್ರಪಂಚದ ಅತಿ ಎತ್ತರದ ಹೊಗೆಗೊಳವೆಯ(೩೮೦ ಮೀಟರು) ನಿರ್ಮಾಣಕ್ಕೂ ತೂರುಬೂದಿಯನ್ನು ಬಳಸಲಾಗಿದೆ.

೪) ತೂರುಬೂದಿಯಿಂದ ಸಾಮಾನ್ಯ ಸಿಮೆಂಟಿನಷ್ಟೇ ಫಲಕಾರಿಯಾದ ಪೋರ್ಟ್‌ಲ್ಯಾಂಡ್ ಪೊಜೊಲಾನಾ ಸಿಮೆಂಟನ್ನು ತಯಾರಿಸುವರು.

೫) ಸಿಮೆಂಟ್ ಕಾಂಕ್ರೀಟಿನ ತಯಾರಿಕೆಗೆ ನಾವು ಸಾಮಾನ್ಯವಾಗಿ ಜಲ್ಲಿ ಮತ್ತು ಮರಳನ್ನು ಉಪಯೋಗಿಸುತ್ತೇವೆ. ಈ ಕಾಂಕ್ರೀಟಿನ ಒಂದು ಘನ ಮೀಟರು ಸುಮಾರು ೨೩೦೦ ಕಿಲೋಗ್ರಾಂ ತೂಗುತ್ತದೆ. ಕಾಂಕ್ರೀಟಿನ ಸಾಮರ್ಥ್ಯವು ಕಡಿಮೆಯಾಗದೆ, ಸ್ವಲ್ಪ ಹಗುರವಾಗಿ ನಮಗೆ ಅನುಕೂಲವಲ್ಲವೇ! ಹೀಗಾಗುವುದರಿಂದ ನಮ್ಮ ಕಾಂಕ್ರೀಟು ಕಟ್ಟಡಗಳ ಕಂಬ, ತೊಲೆ ಇತ್ಯಾದಿಗಳ ಅಳತೆ ಕಡಿಮೆ ಮಾಡಬಹುದು, ಅಲ್ಲದೇ ಉಕ್ಕಿನ ಅವಶ್ಯಕತೆಯೂ ತಗ್ಗುವುದು. ಈ ರೀತಿಯ ಕಾಂಕ್ರೀಟನ್ನು ಹಗುರ ಸಮಷ್ಟಿಯ ಕಾಂಕ್ರೀಟು ಎನ್ನುತ್ತಾರೆ. ಇದು ಒಂದು ಘನ ಮೀಟರು ೧೨೦೦ ರಿಂದ ೧೮೦೦ ಕಿಲೋಗ್ರಾಮಿನಷ್ಟು ತೂಗುತ್ತದೆ. ಇದರ ತಯಾರಿಕೆಗೆ ಬೇಕಾದದ್ದು ಹಗುರವಾದ ಸಮಷ್ಟಿಗಳು. ಇವನ್ನು ತೂರುಬೂದಿಯಿಂದ ತಯಾರಿಸಬಹುದು. ಇದರ ಉಪಯೋಗವು [illegible]

ಆಗುತ್ತಿವೆ. ಭಾರೀ ಗಗನಚುಂಬಿಗಳು, ಸೇತುವೆಗಳು ಇದರಿಂದ ನಿರ್ಮಿಸಲ್ಪಟ್ಟಿವೆ. ತೂರುಬೂದಿಯಿಂದ ತಯಾರಿಸಿದ ಕಾಂಕ್ರೀಟು ಧ್ವನಿ ನಿರೋಧಕವೂ ಹೌದು.

೬) ಹಗುರ ಕಾಂಕ್ರೀಟು ಎಂದು ಕರೆಯಿಸಿಕೊಳ್ಳುವ ಇನ್ನೊಂದು ವಸ್ತು ಕೋಶಮಯ ಕಾಂಕ್ರೀಟು. ಇದೊಂದು ವಿಶೇಷ ರೀತಿಯಿಂದ ತಯಾರಿಸಿದ ಸಿಮೆಂಟಿನ ವಾಯುಪೂರಿತ ಗಾರೆ. ಇದನ್ನು ಸಿಮೆಂಟ್, ಸುಣ್ಣ, ಮರಳಿನ ಹುಡಿ, ಅಲ್ಯುಮಿನಂ ಪುಡಿ ಮತ್ತು ಇತರ ಕೆಲವು ವಸ್ತುಗಳನ್ನು ಬೆರೆಸಿ ತಯಾರಿಸುವರು. ಇಲ್ಲೂ ಸಿಮೆಂಟು ಮತ್ತು ಮರಳನ್ನು ಅಂಶಿಕವಾಗಿ ತೂರುಬೂದಿಯಿಂದ ಬದಲಿಸಬಹುದು.

೭) ತೂರುಬೂದಿಯನ್ನು ಜೇಡಿಮಣ್ಣಿನೊಂದಿಗೆ ಮಿಶ್ರ ಮಾಡಿ ಉತ್ಕೃಷ್ಟವಾದ ಇಟ್ಟಿಗೆಯನ್ನು ಇಂಗ್ಲೆಂಡಿನಲ್ಲಿ ತಯಾರಿಸುತ್ತಿರುವರು. ತೂರುಬೂದಿ, ಸುಣ್ಣ, ಜಿಪ್ಸಮ್‌ಗಳನ್ನು ಸೂಕ್ತ ಪ್ರಮಾಣದಲ್ಲಿ ಬೆರೆಸಿ, ಅರೆದು, ಅಚ್ಚುಗಳಿಗೆ ಮುದ್ದು ಇಟ್ಟಿಗೆಗಳನ್ನು ತಯಾರಿಸುವರು. ಇವನ್ನು ಸುಡಬೇಕಾಗಿಲ್ಲ. ಫಿನ್‌ಲಂಡ್ ಮತ್ತು ಬ್ರಿಟನ್ನುಗಳಲ್ಲಿ ಉತ್ಪಾದನೆಯಾಗುವ ತೂರುಬೂದಿಯು ಶೇಕಡಾ ೮೦ ರಷ್ಟನ್ನು ಲಾಭದಾಯಕವಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ.

ನಮ್ಮ ದೇಶದಲ್ಲಿ ಈಗ ೪೦ ಕ್ಕೂ ಹೆಚ್ಚು ಹಬೆ ವಿದ್ಯುದಾಗಾರಗಳಿವೆ. ಅವು ಲಿಗ್ನೈಟನ್ನು ಕೆಳ ದರ್ಜೆಯ ಕಲ್ಲಿದ್ದಲನ್ನು ಉರಿಸುತ್ತಿದ್ದು ಪ್ರತಿ ವರ್ಷ ಸುಮಾರು ೫೫ ಲಕ್ಷ ಟನ್ನುಗಳಷ್ಟು ತೂರುಬೂದಿಯನ್ನು ಉತ್ಪಾದಿಸುತ್ತಿವೆ. ಮುಂದಿನ ದಶಕದಲ್ಲಿ ಇದು ದ್ವಿಗುಣಗೊಳ್ಳಬಹುದು. ಇಷ್ಟು ದೊಡ್ಡ ಪ್ರಮಾಣದಲ್ಲಿ ದೊರೆಯುವ ತೂರುಬೂದಿಯನ್ನು ಲಾಭದಾಯಕವಾಗಿ ಉಪಯೋಗಿಸಿಕೊಳ್ಳುವುದಕ್ಕೆ ನಮ್ಮ ದೇಶದಲ್ಲೂ ಅಧ್ಯಯನಗಳು ನಡೆದು ಅಂಕೆ-ಅಂಶಗಳು ಲಭ್ಯವಿದ್ದರೂ ಅವನ್ನು ಕಾರ್ಯಗತಗೊಳಿಸುವಲ್ಲಿ ನಾವು ಹಿಂದೆ ಬಿದ್ದಿದ್ದೇವೆ. ಸದ್ಯಕ್ಕೆ ಕೆಲವು ಸಿಮೆಂಟಿನ ಕಾರ್ಖಾನೆಗಳಲ್ಲೂ ಅಣೆಕಟ್ಟಿನ ನಿರ್ಮಾಣಗಳಲ್ಲೂ ಹೆಚ್ಚಿನ ಪಾಲು ಉಪಯೋಗವಾಗುತ್ತಿದೆ. ಸಾಮಾನ್ಯ ನಿರ್ಮಾಣ ಕ್ಷೇತ್ರದಲ್ಲಿ, ಹಗುರ ಸಮುಚ್ಚಯ ತಯಾರಿಕೆಯಲ್ಲಿ ಕೋಶಮಯ ಕಾಂಕ್ರೀಟಿನ ತಯಾರಿಕೆಯಲ್ಲಿ ಇದರ ಉಪಯೋಗವು ವ್ಯಾಪಕವಾಗಿ ಆಗಬೇಕು. 



## ಸತ್ಯ

- ಸತ್ಯದ ಶೋಧಕನು ಸತ್ಯದ ಆರಾಧಕನಾಗುತ್ತಾನೆ. ಸತ್ಯವು ಒಳ್ಳೆಯದಿರಲಿ ಕೆಟ್ಟದಿರಲಿ ಆರಾಧನೀಯ.
- ಸತ್ಯದ ಪರಮಾರ್ಥದಲ್ಲಿ ಒಳ್ಳೆಯದೆಂಬುದು ಯಾವುದೂ ಇಲ್ಲ.
- ಸತ್ಯವೇ ದೇವರು. ಸತ್ಯದೊಂದಿಗೆ ಸಹಜೀವನ ಒಡನಾಟ ಅಥವಾ ಸರಸ ಸಾಧ್ಯವಿರುವುಲ್ಲ. ಅದಕ್ಕಾಗಿ ಸತ್ಯವನ್ನು ಆರಾಧಿಸಬೇಕು, ಬಲಿಸಿಕೊಳ್ಳಬೇಕು.

— ಶೀಲಜೋ.

# ನಗೆಮಲ್ಲಿಗೆ

ನಿವೃತ್ತ ಸೈನಿಕನೊಬ್ಬ ತನ್ನ ಕುಟುಂಬದೊಡನೆ ದೂರದ ಶಾಂತ ಸ್ಥಳವೊಂದರಲ್ಲಿ ವಾಸಿಸುತ್ತಿದ್ದ. ಬಹಳ ದಿನಗಳ ನಂತರ ಭೇಟಿಯಾದ ಅವನ ಮಿತ್ರನೊಬ್ಬ ಚಹಾ ಪಾನದ ನಂತರ ಕೇಳಿದ,

"ಹೂಂ. ಈಗ ಹೇಳು, ನಿನ್ನ ಮೊದಲ ಜೀವನಕ್ಕೂ ನಿವೃತ್ತ ಜೀವನಕ್ಕೂ ಏನು ವ್ಯತ್ಯಾಸ ಅನಿಸುತ್ತದೆ?"

"ಏನೂ ಇಲ್ಲ" ತಟ್ಟನೇ ಉತ್ತರಿಸಿದ ಮಾಜಿ ಸೈನಿಕ.

ಗೆಳೆಯ ಆಶ್ಚರ್ಯದಿಂದ ಪ್ರಶ್ನಿಸಿದ— "ಆಂ! ಹಾಗಂದರೆ?"

ಅಲ್ಲೇ ನಿಂತಿದ್ದ ತನ್ನ ಪತ್ನಿಯನ್ನೂ, ಆಟವಾಡುತ್ತಿದ್ದ ಅರ್ಧ ಡಜನ್ ಮಕ್ಕಳನ್ನೂ ತೋರಿಸುತ್ತಾ ಸೈನಿಕ ಹೇಳಿದ, "ನಾನು ಆಗಲೂ ಸೈನ್ಯದಲ್ಲಿದ್ದೆ ಈಗಲೂ ಸೈನ್ಯದಲ್ಲಿಯೇ ಇದ್ದೇನೆ."

—ವಸಂತ ಹೆಬ್ಬಾರ

▪

ಡಯಲ್ ತಿರುವಿದ ಆತ, "ಹಲೋ, ಇಲೆಕ್ಟ್ರಿಸಿಟಿ ಆಫೀಸಾ?" ಎಂದು ಕೇಳಿದ.

"ಹೌದು" ಎಂದುತ್ತರ ಬಂತು.

"ನೋಡಿ, ನಾನು ತ್ರಿವೇದಿ ಮಾತಾಡ್ತಿರೋದು."

"ನಮಸ್ಕಾರಾ. ಏನ್ಸಮಾಚಾರಾ?"

"ನಿಮ್ಮ ತಲೆ ಅಂದ್ರೆ ನಾಯಿ ಬಾಲವೇನ್ರಿ?"

"ಯಾಕೆ ಸಾರ್, ಏನಾಯ್ತು?"

"ಕಳೆದೆರಡು ವರ್ಷಗಳಿಂದ ನೀವು ಬಿಲ್ಲಿ

ದೀರಿ. ನಾನು ದ್ವಿವೇದಿ ಅಲ್ಲ, ತ್ರಿವೇದಿ. ಚೇಂಜ್ ಮಾಡಿ ಅಂತ ಎಷ್ಟು ಸಲ ಬರಕೊಂಡ್ರೂ ನಿಮ್ಮಿಂದ ಉತ್ತರವಿಲ್ಲ..."

"ಚೇಂಜ್ ಮಾಡಿ ಲೆಟರ್ ಕಳ್ಸಿದೀವಲ್ಲ ಸಾರ್."

"ಏನ್ ಚೇಂಜ್ ಮಾಡ್ತೀರ್ರಿ ನಿಮ್ ತಲೆ. ನನ್ನ ಹೆಸರ್ನ ಚೇಂಜ್ ಮಾಡಿದೀರಿ ಅಷ್ಟೆ. 'ಎರಡು ವರ್ಷಗಳಿಂದ ನಿಮ್ಮ ಹೆಸರಿಗಾದ ಅಪಚಾರಕ್ಕೆ ಕ್ಷಮೆ ಕೋರುತ್ತ' ಎಂದು ಬರೆದು ನನ್ನ ಹೆಸರ್ನ ಚತುರ್ವೇದಿ ಅಂತ ಬರೆದಿದೀರಲ್ರಿ..."

▪

ಮಿತಿ ಮೀರಿ ವೇಗದಿಂದ ಕಾರನ್ನೋಡಿಸಿದ ಅಪರಾಧಕ್ಕಾಗಿ ಇಬ್ಬರು ನ್ಯಾಯಾಧೀಶರು ಒಂದೇ ಕೋರ್ಟಿಗೆ ಒಂದೇ ದಿನ ಹಾಜರಾಗಬೇಕಾಯಿತು. ಆ ದಿನ ಅದಾವ ಕಾರಣದಿಂದಲೋ ಮೆಜಿಸ್ಟ್ರೇಟರು ಬರಲು ತಡವಾಯಿತು. ಇಬ್ಬರೂ ನ್ಯಾಯಾಧೀಶರು ಪರಸ್ಪರ ಮಾತಾಡಿಕೊಂಡು ನ್ಯಾಯ ಬಗೆಹರಿಸಿಬಿಡಬೇಕೆಂದುಕೊಂಡರು.

ಸರಿ, ಒಬ್ಬ ನ್ಯಾಯಾಧೀಶ ಪೀಠ ಅಲಂಕರಿಸಿದ. ಮತ್ತೊಬ್ಬ ಅಪರಾಧಿ ಸ್ಥಾನದಲ್ಲಿ ನಿಂತ. ವಿಚಾರಣೆ ಆರಂಭವಾಯಿತು.

"ನೀನು ಈ ಅಪರಾಧ ಒಪ್ಪುತ್ತೀಯಾ?"

"ಹೌದು— ನಾನು ವೇಗಮಿತಿ ಮೀರಿ ಕಾರು ಓಡಿಸಿದ್ದು ನಿಜ. ಅದಕ್ಕಾಗಿ ಕ್ಷಮಿಸಿ."

"ಅಪರಾಧ ಒಪ್ಪಿಕೊಂಡದ್ದು ನಿನ್ನ ಸಹೃದಯತೆ ತೋರಿಸುತ್ತದೆ. ನ್ಯಾಯಾಲಯ ನಿನಗೆ ೧೦ ರೂಪಾಯಿ ದಂಡ ವಿಧಿಸುತ್ತದೆ."

ನಂತರ ಅವರಿಬ್ಬರೂ ಸ್ಥಾನ ಬದಲಿಸಿದರು. ಈಗ ಅಪರಾಧಿಯಾಗಿ ಮೊದಲು ನ್ಯಾಯಪೀಠದಲ್ಲಿ ಕುಳಿತಿದ್ದವನ ವಿಚಾರಣೆ.

"ಹೌದು."

"ಇದು ಕಾನೂನು ಉಲ್ಲಂಘನೆ ಎಂದು ನಿನಗೆ ತಿಳಿಯಲಿಲ್ಲವೆ?"

"ತಿಳಿದಿತ್ತು."

"ಆದರೂ ಉಲ್ಲಂಘಿಸಿದ್ದೀ. ಇಂಥ ಅಪರಾಧಗಳು ದಿನಕ್ಕೆ ನೂರಾರು ನಡೆಯುತ್ತಿವೆ. ಇಂದು ಮುಂಜಾನೆಯ ಅವಧಿಯಲ್ಲೇ ಇಂಥ ಎಸಡನೆಯ ಕೇಸು ನಿನ್ನದು. ಇಂಥ ಅಪರಾಧಕ್ಕೆ ಚಿಕ್ಕಪುಟ್ಟ ಶಿಕ್ಷೆ ಸಾಲದು. ನ್ಯಾಯಾಲಯ ನಿನಗೆ ೧೦೦ ರೂಪಾಯಿ ದಂಡ ವಿಧಿಸುತ್ತದೆ."

ನ್ಯಾಯಾಧೀಶರು ತೀರ್ಪು ಕೊಟ್ಟರು.

*

ಆತ ಕಾಲಿನಳತೆಗಿಂತ ಚಿಕ್ಕದಾದ ಬೂಟು ಹಾಕಿಕೊಂಡು ಪ್ರಯಾಸದಿಂದ ನಡೆಯುತ್ತಿದ್ದ. ತುಂಬ ನೋವು. ಬೇಗ ನಡೆಯಲಾಗುತ್ತಿಲ್ಲ. ಆದರೆ ತೀವ್ರವೇ ಕಚೇರಿ ತಲುಪಬೇಕಾಗಿದೆ. ಆಗ ಎದುರು ಬಂದ ಆತನ ಗೆಳೆಯ, "ಏನಯ್ಯಾ, ಎಲ್ಲಿತ್ತು ಇಂಥಾ ಬೂಟು?" ಎಂದು ಕೇಳಿದ.

"ಗಿಡದಲ್ಲಿ ಬೆಳೆದಿತ್ತು" ತಟ್ಟನೇ ಸಿಟ್ಟಿನಿಂದ ಉತ್ತರಿಸಿದ ಆತ.

"ನಿನ್ನದು ಯಾವಾಗಲೂ ಅವಸರ. ಇನ್ನೊಂದಷ್ಟು ದಿನ ಗಿಡದಲ್ಲೇ ಬಿಟ್ಟಿದ್ರೆ ಇನ್ನೂ ದೊಡ್ಡದಾಗಿ ಬೆಳೆದಿರೋದು. ನಿನ್ನ ಕಾಲಿಗೂ ಸರಿಯಾಗಿರೋದು- ಅಲ್ವೆ?" ಗೆಳೆಯ ಮರುಸವಾಲು ಹಾಕಿದ.



# ಕಾನ್ವೆಂಟ್ ಕಂದಮ್ಮಗಳು



ಕಾನ್ವೆಂಟ್‌ಗೆ ಹೋಗ್ತಿರೋ ನಮ್ಮ ಹುಡುಗ ಎಷ್ಟು ಬುದ್ಧಿವಂತನಾಗ್ತಿದ್ದಾನೆ ನೋಡಿದ್ರಾ... ಸೊಗಸಾಗಿ ಇಂಗ್ಲೀಷನಲ್ಲೇ ಬೈತಾನೆ!




ಗೋ ಅವೇ!.. ಗೆಟ್ ಔಟ್ ಯೂ ಬ್ಲಡಿ ಬ್ಲ್ಯಾಕ್ ಇಂಡಿಯನ್!!




ಅಪ್ಪ ಅಮ್ಮನಿಗೆ ಹೇಳೋದಿ ಏನಂತ ಕಲೀಬೇಕು ಹೇಳು ನೋಡೋಣಾ?..
DADDY
MUMMY




ಅಪ್ಪಂಗೆ ಡಾಡಿ ಅಂತ್ ಮತ್ತೆ ಅಮ್ಮಂಗೆ ಮಂಕಿ ಅಂತ ಕಲೀಬೇಕು ಮಿಸ್...
DADDY
MUMMY

ವಾಗಿಲ್ಲ. ಆದರೆ ಮಲಪ್ರಭೆಗೆ ಒಡ್ಡು ಕಟ್ಟಲು ಆಯ್ದುಕೊಂಡ ಸ್ಥಳ ಸರಿಯಾಗಿದೆಯೆ? ಸರಿಯಾಗಿದ್ದುದೆ ಆದರೆ ಅದು ಸಾಕಷ್ಟು ಫಲದಾಯಕವಾಗಲಿಲ್ಲವೇಕೆ? ಎಂಬ ಬಗೆಗೆ ಈಗ ಯೋಜನೆ ವಿಫಲವಾದ ನಂತರ ಪೋಸ್ಟ್ ಮಾರ್ಟಂ ನಡೆಯುತ್ತಿದೆ.

ಮಲಪ್ರಭಾ ಕೃಷ್ಣಾ ನದಿಯ ಒಂದು ಉಪನದಿ. ಉತ್ತರ ಕರ್ನಾಟಕ ಹಿಂದೆ ಮುಂಬಯಿ ಪ್ರಾಂತದ ಒಂದು ಭಾಗವಾಗಿದ್ದಾಗ ಆ ಭಾಗಕ್ಕೆ ಘಟಪ್ರಭೆಯನ್ನುಳಿದು ನೀರಾವರಿಯ ಬೇರೆ

## ತಜ್ಞರ ಅಭಿಪ್ರಾಯವನ್ನು ಏಕೆ ಕಡೆಗಣಿಸಲಾಯಿತು ?

# ಮಲಪ್ರಭೆಯ ಚಿದಂಬರ ರಹಸ್ಯ

**'ಸ್ಪೆಕ್ಯುಲರ್' ಪತ್ರಿಕೆಯಿಂದ**

ಅನೇಕ ವರ್ಷಗಳಿಂದ ರೈತರಲ್ಲಿದ್ದ ಅತೃಪ್ತಿ ಕಳೆದ ವರ್ಷದ ಜುಲೈ ೨೧ರಂದು ಧಾರವಾಡ ಜಿಲ್ಲೆಯ ನವಲಗುಂದ–ನರಗುಂದಗಳಲ್ಲಿ ಪ್ರಬಲ ಆಂದೋ-ಲನದ ರೂಪ ಪಡೆದಾಗ ಈ ಆಂದೋಲನಕ್ಕೆ ಸಂಬಂಧಿಸಿದ ಮಲಪ್ರಭಾ ಯೋಜನೆಯ ಬಗೆಗೆ ಜನರ ಗಮನ ಹರಿಯುವುದು ಸ್ವಾಭಾವಿಕವೇ ಆಗಿತ್ತು. ರೈತರ ಈ ಆಂದೋಲನ ಕ್ಷಿಪ್ರದಲ್ಲಿಯೆ ರಾಜ್ಯದ ಇತರೆಡೆಗಳಲ್ಲಿ ಪಸರಿಸಿದರೂ ಮಲ-ಪ್ರಭಾ ಯೋಜನೆಯ ಬಗೆಗಿನ ಜಿಜ್ಞಾಸೆ ಜನಸಾಮಾನ್ಯರಲ್ಲಿ ಕಡಿಮೆಯಾಗಲಿಲ್ಲ.

ಮಲಪ್ರಭೆಗೆ ಒಡ್ಡು ಕಟ್ಟಿ, ಅದನ್ನು ಕೃಷಿ ಕಾರ್ಯಗಳಿಗೆ ಬಳಸಿಕೊಳ್ಳಬೇಕೆಂಬಲ್ಲಿ ಎರಡು

ಯಾವ ಸೌಕರ್ಯವೂ ಇರಲಿಲ್ಲ. ಹೀಗಾಗಿ ಒಡ್ಡು ಕಟ್ಟಿ ಧಾರವಾಡ, ವಿಜಾಪುರ ಹಾಗೂ ಬೆಳಗಾವಿ ಜಿಲ್ಲೆಯ ಕೃಷಿಕರಿಗೆ ಅನುಕೂಲ ಮಾಡಿ ಕೊಡಬೇಕೆಂಬ ಬೇಡಿಕೆ ಬಂತು. ಈ ಯೋಜನೆಯಿಂದ ಒಟ್ಟು ಎರಡು ಲಕ್ಷ ಆರು ಸಾವಿರ ಮುನ್ನೂರ ಎಂಭತ್ತೇಳು ಹೆಕ್ಟೇರುಗಳಷ್ಟು ವಿಸ್ತಾರವಾದ ಪ್ರದೇಶಕ್ಕೆ ನೀರಾವರಿಯ ಸೌಲಭ್ಯ ದೊರೆಯುತ್ತಿದ್ದು ಈ ಪೈಕಿ ನಾಲ್ವತ್ತೆಂಟು ಸಾವಿರ ಎಂಟು ನೂರ ಐವತ್ತು ಹೆಕ್ಟೇರುಗಳಷ್ಟು ಭೂಮಿಗೆ ಈಗಾಗಲೇ ಸೌಲಭ್ಯ ದೊರೆಯುತ್ತಿದೆ. ಮೂವತ್ತೊಂದು ಸಾವಿರದ ಒಂಭತ್ತು ನೂರ ನಾಲ್ವತ್ತುನಾಲ್ಕು ಹೆಕ್ಟೇರುಗಳಷ್ಟು ಭೂಮಿ

ಯನ್ನು ಅಭಿವೃದ್ಧಿಪಡಿಸಲಾಗಿದ್ದು ಸರ್ವೇಕ್ಷಣೆಯನ್ನು ನಡೆಸಿ ಐದು ಸಾವಿರದ ಏಳುನೂರು ನಾಲ್ವತ್ತೈದು ಹೆಕ್ಟೇರುಗಳಷ್ಟು ಭೂಮಿಯನ್ನು ಅಭಿವೃದ್ಧಿಗೊಳಿಸಬೇಕೆಂದು ಯೋಜಿಸಲಾಗಿದೆ.

ಹಾಗೆ ನೋಡಿದರೆ ಎಂಜಿನಿಯರಿಂಗ್ ತಜ್ಞರು ಸವದತ್ತಿಗಿಂತ ಬೆಳಗಾವಿ ಜಿಲ್ಲೆಯ ಅಸೋಗಾ ಒಡ್ಡು ಕಟ್ಟುವುದಕ್ಕೆ ಹಚ್ಚು ಸೂಕ್ತ ಎಂದು ಬಹಳ ಹಿಂದೆಯೆ ತೀರ್ಮಾನಿಸಿದ್ದರು. ಆದರೆ ಧಾರವಾಡದ ಕಡೆಯಿಂದ ರಾಜಕೀಯ ಒತ್ತಡ ಬಂದುದರಿಂದ ತಜ್ಞರ ತೀರ್ಮಾನವನ್ನು ಕಡೆಗಣಿಸಿ ಸವದತ್ತಿಯಲ್ಲಿ ಡ್ಯಾಂ ಕಟ್ಟಲು ನಿರ್ಧರಿಸಲಾಯಿತು ಎಂದು ಹೇಳಲಾಗುತ್ತಿದೆ.

ಆದರೆ ನಿಜವಾದ ಕಾರಣ ಬೇರೆಯೆ ಇದೆ. ಅಸೋಗಾ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನಲ್ಲಿದೆ. ಈ ತಾಲೂಗೆ ಸೇರಿದ ೨೫೦ ಹಳ್ಳಿಗಳ ಪೈಕಿ ಅಸೋಗಾ ಒಂದು. ೧೯೬೭ ರಲ್ಲಿ ಮಹಾಜನ ಆಯೋಗಕ್ಕೆ ಹೇಳಿಕೆ ಸಲ್ಲಿಸುವಾಗ ಕರ್ನಾಟಕ ಸರಕಾರವು, ಪಶ್ಚಿಮ ಘಟ್ಟಗಳು ಎಂದು ಸಾಮಾನ್ಯವಾಗಿ ಗುರುತಿಸಲಾಗುವ ಸಹ್ಯಾದ್ರಿಯಿಂದ ಉಗಮವಾದ ಅನೇಕ ನದಿಗಳು ಪೂರ್ವಕ್ಕೆ ಹರಿಯುತ್ತಿದ್ದು ಅವುಗಳಲ್ಲಿ ಮಲಪ್ರಭೆಯೂ ಒಂದು; ಅದರ ಉಗಮ ಖಾನಾಪುರ ತಾಲೂಕಿನಲ್ಲಿ ಆಗಿದ್ದು ಖಾನಾಪುರದಿಂದ ನಾಲ್ಕು ಮೈಲುಗಳ ಅಂತರದಲ್ಲಿರುವ ಭುಡೇವಾಡಿಯಲ್ಲಿ ಡ್ಯಾಂ ನಿರ್ಮಿಸುವ ಯೋಜನೆಯನ್ನು ಕರ್ನಾಟಕ ಸರಕಾರ ಹಮ್ಮಿಕೊಂಡಿದೆ; ಆದ್ದರಿಂದ ಹೆಡ್‌ವರ್ಕುಗಳನ್ನೊಳಗೊಂಡ ಎಲ್ಲ ಪ್ರದೇಶವೂ ಕರ್ನಾಟಕದಲ್ಲಿಯೆ ಇರಬೇಕು ಎಂದು ಹೇಳಿತ್ತು. ಮಹಾಜನ ಆಯೋಗದ ವರದಿಯ ಮೇರೆಗೆ ಅಸೋಗಾ ಮಹಾರಾಷ್ಟ್ರಕ್ಕೆ ಸೇರಬೇಕು. ಡ್ಯಾಂ ನಿರ್ಮಾಣಕ್ಕೆ ಎಂಜಿನಿಯರಿಂಗ್ ದೃಷ್ಟಿಯಿಂದ ಅಸೋಗಾ ಸೂಕ್ತವಾದರೂ ಅದು ವಾದಗ್ರಸ್ತ ಪ್ರದೇಶವಾದುದನ್ನು ಅನುಲಕ್ಷಿಸಿ ಕರ್ನಾಟಕ ಸರಕಾರವು ಸವದತ್ತಿಯಲ್ಲಿ ಅಣೆಕಟ್ಟನ್ನು ನಿರ್ಮಿಸುವ ತೀರ್ಮಾನ ಕೈಕೊಂಡ ಹಾಗೆ ಕಾಣುತ್ತದೆ.

ತೀರ್ಮಾನ ಕೈಕೊಂಡ ನಂತರ ಸ್ವಾಭಾವಿಕವಾಗಿಯೆ ಯೋಜನೆಗೆ ಸಂಬಂಧಿಸಿದಂತೆ ನಿರ್ಮಾಣ ಕಾರ್ಯಗಳು ಆರಂಭವಾಗಿ ಮುಂದೆ ಯೋಜನೆಯೂ ಸಾಂಗೋಪಾಂಗವಾಗಿ ಪೂರ್ಣಗೊಂಡಿತು. ಅದರೊಂದಿಗೆ ಮಲಪ್ರಭೆಯಿಂದ ನೀರುಣ್ಣುತ್ತಿದ್ದ ಭೂಮಿ ಅಲ್ಲಲ್ಲಿ ಜವುಳು ಹಿಡಿದು. ಭೂಮಿಯಲ್ಲಿ ಲವಣದ ಪ್ರಮಾಣ ಹೆಚ್ಚಾಗಿ ರೈತರಿಗೆ ಹೊಸ ಸಮಸ್ಯೆಯನ್ನೇ ತಂದೊಡ್ಡಿತು. ಮುಂದೆ ಹೀಗಾಗಬಹುದೆಂಬುದನ್ನು ಇಂಜಿನಿಯರಿಂಗ್ ತಜ್ಞರು ಊಹಿಸಿದ್ದಿಲ್ಲವೆ? ಊಹಿಸಿದ್ದರೋ ಇಲ್ಲವೋ, ಕೃಷಿ ಇಲಾಖೆಯ ಡೆಪ್ಯುಟಿ ಡೈರೆಕ್ಟರರಿಗಂತೂ ಈ ವಿಷಯ ಖಚಿತವಾಗಿತ್ತೆನ್ನುವುದು ಅವರ ಮೃತ್ತಿಕಾ ವರದಿ(Soil Report)ಯಿಂದ ಖಚಿತವಾಗುತ್ತದೆ. ಅದರ ಪ್ರಕಾರ ಇಲ್ಲಿನ ಭೂಮಿಗೆ ಸೇಕಡಾ ಅರವತ್ತರಿಂದ ಎಪ್ಪತ್ತರವರೆಗೆ ನೀರನ್ನು ಹಿಡಿದಿಟ್ಟುಕೊಳ್ಳುವ ಗುಣವಿದೆಯೆಂದೂ ಎಕರೆವಾರು ಪ್ರಮಾಣದಲ್ಲಿ ಸೇಕಡಾ ನಾಲ್ಕರಷ್ಟು ಭೂಮಿ ಈಗಾಗಲೇ ಲವಣಾಂಶಯುಕ್ತವಾಗಿದೆಯೆಂದೂ ಆ ವರದಿ ಸ್ಪಷ್ಟವಾಗಿಯೇ ಹೇಳುತ್ತದೆ. ಭೂಮಿಯಲ್ಲಿ ನೀರು ಇಂಗುವ ಪ್ರಮಾಣ ಕಡಿಮೆ ಇರುವುದರಿಂದ ಭೂಮಿ ಸುಲಭವಾಗಿಯೆ ಜವುಳಾಗುವುದು. ಆದ್ದರಿಂದ ಈಗ ಕೈಕೊಂಡ ನೀರಾವರಿ ಪದ್ಧತಿಗಿಂತ ಸಿಂಚನ ನೀರಾವರಿಯನ್ನು ಈ ಭಾಗದಲ್ಲಿ ಅಳವಡಿಸುವುದು ಯೋಗ್ಯ. ಮೇಲಾಗಿ ಈ ಬಗೆಯ ನೀರಾವರಿ ಪದ್ಧತಿಯಲ್ಲಿ ಭೂಮಿಗೆ ನೀರನ್ನು ತುಂತುರು ತುಂತುರಾಗಿ ಹನಿಸಲಾಗುವುದರಿಂದ ಹಚ್ಚು ಭೂಮಿಗೆ ನೀರೊದಗಿಸಲು ಸಾಧ್ಯವಾಗುವುದು. ಭೂಮಿ ಜವುಳಾಗುವ ಹಾಗೂ ಅದರಲ್ಲಿ ಲವಣಾಂಶಗಳು ತುಂಬಿಕೊಂಡು ಭೂಮಿ ಕೃಷಿಗೆ ನಿರುಪಯುಕ್ತವಾಗುವ ಭೀತಿಯೂ ತಪ್ಪುವುದು ಎಂದು ಆ ವರದಿಯಲ್ಲಿ ಹೇಳಲಾಗಿದೆ.

ಆಗ ಕೇಂದ್ರದಲ್ಲಿ ಮಂತ್ರಿಗಳಾಗಿದ್ದ ಶ್ರೀಮತಿ

ಸರೋಜಿನಿ ಮಹಿಷಿಯವರು ನರಗುಂದವನ್ನು ಪ್ರತಿನಿಧಿಸುತ್ತಿದ್ದುದರಿಂದ ಆ ಭಾಗದ ಅಭ್ಯುದಯದ ಬಗೆಗೆ ಅವರಿಗೆ ಸಹಜವಾಗಿಯೆ ಆಸಕ್ತಿಯಿತ್ತು. ಆದ್ದರಿಂದ ಅವರು ಮುಂಬಯಿಯ ಖ್ಯಾತ ಇಂಜಿನಿಯರಿಂಗ್ ಸಲಹಾ ಸಂಸ್ಥೆಯಾದ 'ಭಗವತಿ ಅಸೋಸಿಯೆಟ್ಸ್' ಅವರಿಗೆ ಪತ್ರ ಬರೆದು, ಪ್ರಾಜೆಕ್ಟ್ ರಿಪೋರ್ಟ್ ತಯಾರಿಸುವಂತೆ ಹೇಳಿದರು. ಪುಣೆಯ ಹತ್ತಿರವಿರುವ ಉರುಳಿ ಕಾಂಚನದ ಭಾರತೀಯ ಅಗ್ರೋ ಇಂಡಸ್ಟ್ರೀಸ್ ಫೌಂಡೇಶನ್ನಿನವರೂ ಈ ಇಂಜಿನಿಯರಿಂಗ್ ಸಲಹಾ ಸಂಸ್ಥೆಯೊಡನೆ ಕೈಗೂಡಿಸಿದರು. ಇವೆರಡೂ ಸಂಸ್ಥೆಗಳ ತಜ್ಞರು ಧಾರವಾಡದಲ್ಲಿನ ಉತ್ತರ ವಿಭಾಗದ ನೀರಾವರಿ ಯೋಜನೆಗಳ ಮುಖ್ಯ ಇಂಜಿನಿಯರರನ್ನು ಭೇಟಿಯಾದಾಗ ಅವರು ಎಲ್ಲ ರೀತಿಯ ನೆರವನ್ನು ನೀಡುವುದಾಗಿ ಆಶ್ವಾಸನವಿತ್ತರಲ್ಲದೆ ಅಗತ್ಯವಿದ್ದ ಸಹಾಯ-ಸಹಕಾರಗಳನ್ನು ನೀಡಬೇಕೆಂದು ತಮ್ಮ ಇಲಾಖೆಯ ಸಿಬ್ಬಂದಿಗೆ ಆದೇಶ ನೀಡಿದರು.

ನೀರಾವರಿಯ ಸೌಲಭ್ಯವಿಲ್ಲದಾಗ ಇಲ್ಲಿ ಪ್ರತಿ ಎಕರೆಗೆ ಒಂದೂವರೆ ಕ್ವಿಂಟಾಲಿನಷ್ಟು ಜೋಳವನ್ನೂ ಎರಡೂವರೆ ಕ್ವಿಂಟಾಲಿನಷ್ಟು ಶೇಂಗಾವನ್ನೂ ಪಡೆಯಬಹುದು. ಆದರೆ ನೀರಾವರಿ ಸೌಲಭ್ಯವನ್ನು ಒದಗಿಸಿದ ನಂತರ ಪ್ರತಿ ಎಕರೆಗೆ ೧೨ ಕ್ವಿಂಟಾಲಿನಷ್ಟು ಜೋಳವನ್ನೂ ೮ ಕ್ವಿಂಟಾಲಿನಷ್ಟು ಹತ್ತಿಯನ್ನೂ ಅಷ್ಟೇ ಪ್ರಮಾಣದಲ್ಲಿ ಶೇಂಗಾವನ್ನು ಪಡೆಯುವುದಲ್ಲದೆ ಹತ್ತು ಕ್ವಿಂಟಾಲಿನಷ್ಟು ಸಜ್ಜೆಯನ್ನು ಪಡೆಯಬಹುದು ಎಂದು ಲೋಕೋಪಯೋಗಿ ಇಲಾಖೆಯ ಪ್ರಾಜೆಕ್ಟ್ ರಿಪೋರ್ಟಿನಲ್ಲಿ ಹೇಳಲಾಗಿತ್ತು. ಈ ಶೀರ್ಷಿಕೆಯನ್ನು ಬದಲಿಸಿ ಈಗ ಕೈಕೊಳ್ಳಬೇಕೆಂದಿರುವ ಯೋಜನೆಯ ಬದಲು




"ಕಿಸೆಗಳ್ಳತನದ ಟ್ರೈನಿಂಗನ್ನೂ ಪ್ರಾರಂಭಿಸಿ ಸಾರ್...ಅದೂ ಕೈಗಾರಿಕೆ ಅಂತ ನಾನು

ಸಿಂಚನ ನೀರಾವರಿ ಪದ್ಧತಿಯನ್ನು ಅಳವಡಿಸಿದರೆ ಇಷ್ಟೇ ಪ್ರಮಾಣದಲ್ಲಿ ಬೆಳೆಯನ್ನು ತೆಗೆಯಬಹುದಲ್ಲದೆ ವರ್ಷದ ಹನ್ನೆರಡು ತಿಂಗಳಿನಲ್ಲೂ ತರಕಾರಿಗಳನ್ನು ಬೆಳೆಯಬಹುದು ಎಂದು 'ಭಗವತಿ ಅಸೋಸಿಯೇಟ್ಸ್' ಸಂಸ್ಥೆಯ ತಜ್ಞರು ವರದಿಮಾಡಿದರು. ಮೇಲಾಗಿ ಈ ತರಹದ ನೀರಾವರಿ ವ್ಯವಸ್ಥೆಯನ್ನು ಅಳವಡಿಸಿದರೆ ಭೂಮಿ ಜವುಳಾಗುವ ಪ್ರಮೇಯವೂ ಇರಲಿಲ್ಲ. ಅಗ ಹಾಕಿದ ಲೆಕ್ಕಾಚಾರದ ಪ್ರಕಾರ ಕಾಲುವೆ–ಉಪಕಾಲುವೆಗಳನ್ನು ತೋಡಿಸಲು ನಾಲ್ವತ್ತು ಕೋಟಿ ನಾಲ್ವತ್ತೇಳು ಲಕ್ಷ ರೂಪಾಯಿಗಳಷ್ಟು ಖರ್ಚು ಬರುತ್ತಿತ್ತು: ಇದನ್ನೇ ಎಕರೆವಾರು ಲೆಕ್ಕದಲ್ಲಿ ಹೇಳುವುದಾದರೆ ಅಚ್ಚುಕಟ್ಟು ಪ್ರದೇಶದಲ್ಲಿನ ಸಾವಿರ ಎಕರೆ ಭೂಮಿಗೆ ನೀರುಣ್ಣಿಸಲು ಹತ್ತೊಂಭತ್ತು ಲಕ್ಷ ನಾಲ್ವತ್ತೆರಡು ಸಾವಿರ ರೂಪಾಯಿಗಳಷ್ಟು ವೆಚ್ಚ ತಗಲುತ್ತಿತ್ತು. ಆದರೆ ಸಿಂಚನ ನೀರಾವರಿಯನ್ನು ಅನುಸರಿಸಿದರೆ ಸಾವಿರ ಎಕರೆಗಳಿಗೆ ಎಂಟು ಲಕ್ಷಕ್ಕಿಂತ ಹೆಚ್ಚು ಖರ್ಚಾಗುತ್ತಿರಲಿಲ್ಲ. ಎಂದರೆ ಈ ವಿಧಾನವನ್ನನುಸರಿಸಿದರೆ ಸೇಕಡಾ ಅರವತ್ತರಷ್ಟು ಉಳಿತಾಯವನ್ನು ಸಾಧಿಸಬಹುದಾಗಿತ್ತು. ಮಲಪ್ರಭಾ ಯೋಜನೆಗೆ ಸಂಬಂಧಿಸಿದಂತೆ ಲೋಕೋಪಯೋಗಿ ಇಲಾಖೆ ಕೈಗೊಂಡ ಪ್ರಾಜೆಕ್ಟ್ ರಿಪೋರ್ಟಿನ ಪ್ರಕಾರ ಕಾಲುವೆ ನೀರಾವರಿ ಯೋಜನೆಯನ್ನು ಕೈಕೊಳುವುದಕ್ಕಿಂತ ಮೊದಲು ಪ್ರಯೋಜನ – ವೆಚ್ಚಗಳ ದಾಮಾಂಶ ೧.೪೭ ಇದ್ದರೆ ಸಿಂಚನ ನೀರಾವರಿ ಯೋಜನೆಯನ್ನು ಕೈಕೊಂಡ ನಂತರ ಅದು ೧.೭೧ ಆಗುತ್ತಿತ್ತು. ಸರಿಯೆ. ಆದರೆ ಕಾಲುವೆ ನೀರಾವರಿಯ ಬದಲು ಸಿಂಚನನೀರಾವರಿಯನ್ನು ಏರ್ಪಡಿಸಿದರೆ ಪ್ರಯೋಜನ-ವೆಚ್ಚಗಳ ದಾಮಾಂಶ ೨.೮೧ ಆಗುತ್ತಿತ್ತು. ಎಂದರೆ ಈ ವಿಧಾನ ಕಾಲುವೆ ನೀರಾವರಿಗಿಂತ ಹೆಚ್ಚು ಪ್ರಯೋಜನಕರವೂ ಮಿತವ್ಯಯದ್ದೂ ಆಗುತ್ತಿತ್ತು ಎಂದು 'ಭಗವತಿ ಅಸೋಸಿಯೇಟ್ಸ್' ಸಂಸ್ಥೆಯ ಇಂಜನಿಯರಿಂಗ್ ತಜ್ಞರು ಅಭಿಪ್ರಾಯಪಟ್ಟರು.

ಇವರ ಸಲಹೆಗಳು ಕಾರ್ಯಗತವಾಗಲೇ ಇಲ್ಲ. ಏಕೆ? ಅವು ಸಂಬಂಧಿಸಿದವರ ಗಮನಕ್ಕೆ ಬಾರದಿದ್ದುದರಿಂದಲೆ? ಆದರೆ ಹಾಗನ್ನಲು ಬರುವುದಿಲ್ಲ. ಈ ಯೋಜನೆಯಲ್ಲಿ ಸ್ವತಃ ಆಸ್ಥೆ ವಹಿಸಿದ ಸರೋಜಿನಿ ಮಹಿಷಿಯವರು ತಜ್ಞರ ಸಲಹೆ–ಸೂಚನೆಗಳನ್ನೊಳಗೊಂಡ ರಿಪೋರ್ಟನ್ನು ಅಂದಿನ ಮುಖ್ಯ ಮಂತ್ರಿಗಳಿಗೂ ಅಭಿವೃದ್ಧಿ ಕಮೀಶನರಿಗೂ ಖುದ್ದಾಗಿ ಕೊಟ್ಟಿದ್ದರು. ಆದರೆ ಯಾವ ಕಾರಣದಿಂದಲೊ ತಜ್ಞರ ಅಭಿಪ್ರಾಯವನ್ನು ಕಡೆಗಣಿಸಿ ಮಲಪ್ರಭೆ ಅಚ್ಚುಕಟ್ಟಿನ ರೈತರಿಗೆ ಹಾನಿಯಾಗುವಂಥ ಯೋಜನೆಯನ್ನು ಕೈಗೆತ್ತಿಕೊಳ್ಳಲಾಯಿತು. ಏಕೆ ಹೀಗಾಯಿತೆಂಬುದು ಇನ್ನು ಹೊರಬರಬೇಕಾಗಿದೆ. ✿



"ಪಾಪ, ರಶ್ಮಿಯ ಮಗಳಿಗೆ ಹುಚ್ಚು ಹಿಡೀತಂತೆ. ಹಿಂದೆ ಅವರ ಮನೆಯಲ್ಲಿ ಯಾರಿಗಾದರೂ ಹೀಗಾಗಿತ್ತೇ?"

"ಯಾರಿಗಾದರೂ ಎಂದರೇನು? ರಶ್ಮಿಯ ಗಂಡನಿಗೇ ಹೀಗಾಗಿತ್ತು. ಕೊನೇವರೆಗೂ ಆತ ಹುಚ್ಚನಾಗೇ ಇದ್ದ."

"ಆದರೆ ಆತ ಹಾಗೆ ಕಾಣಿಸುತ್ತಿರಲಿಲ್ಲವಲ್ಲ?"

"ಕಾಣಿಸುತ್ತಿರಲಿಲ್ಲ ಎಂದರೇನು? ಸ್ವಲ್ಪ ಕಣ್ಣು ತೆಗೆದು ನೋಡಿದವರಿಗೂ ಕಾಣಿಸುತ್ತಿತ್ತು. ಕೊನೇವರೆಗೂ ಆತ ಮನೆಯ ಯಜಮಾನ ತಾನೇ ಎಂದು ಭಾವಿಸಿಕೊಂಡಿದ್ದ."

'ಈವ್ನಿಂಗ್ ವೀಕ್ಲಿ'ಯಿಂದ

ಹಲವು ಆಘಾತಗಳಿಂದ
ಅದು ಉಂಟಾಗುತ್ತದೆ

# ಮಾನಸಿಕ ಅಲರ್ಜಿ

**ಡಾ. ಕೆ. ಎಂ. ಧ್ರುವಕುಮಾರ**

ನಾನು ಅಮೆರಿಕದಿಂದ ಆಗ ತಾನೇ ಹಿಂದಿರುಗಿದ್ದ ಸಮಯ. ತಾಯ್ನಾಡಿನ ಸೇವೆ ಮಾಡಬೇಕೆಂಬ ಉದ್ದೇಶದಿಂದ ಹಿಂದಿರುಗಿ ಕ್ಲಿನಿಕ್ ಪ್ರಾರಂಭಿಸಿದ್ದೆ. ಇಲ್ಲಿನ ಜನರಿಗೆ ಮನೋರೋಗದ ಬಗ್ಗೆ ಅಜ್ಞಾನವಿರುವುದರಿಂದ ಪ್ರ್ಯಾಕ್ಟೀಸ್ ಹೇಗೆ ನಡೆಯುವುದೋ ಎಂಬ ಆತಂಕವಿದ್ದಿತು. ಮನೋರೋಗಕ್ಕೆ ಮದ್ದಿಲ್ಲವೆಂಬ ನುಡಿಯನ್ನು ನಾನಾ ಕಾದಂಬರಿಗಳಲ್ಲಿ, ಲೇಖನಗಳಲ್ಲಿ ಮತ್ತು ಬಾಯಿ ಮಾತಿನಲ್ಲಿ ಕೇಳುವುದು ಸರ್ವೇ ಸಾಮಾನ್ಯ. ಇದಕ್ಕೆ ಮನೋರೋಗ ಚಿಕಿತ್ಸೆಯ ಬಗ್ಗೆ ಇರುವ ಅಜ್ಞಾನವೇ ಕಾರಣ. ಇಂತಹ ಅಜ್ಞಾನವಿರುವಲ್ಲಿ ಯಾರಾದರೂ ಮನೋರೋಗ ಚಿಕಿತ್ಸಕರ ಬಳಿ ಬರುವರೇ ಎಂಬ ಸಂದೇಹ ಸಹಜವಾಗಿಯೇ ನನ್ನಲ್ಲಿತ್ತು. ಅಕಸ್ಮಾತ್ ಮನೋರೋಗ ಚಿಕಿತ್ಸಕರಲ್ಲಿ ಚಿಕಿತ್ಸೆಗಾಗಿ ಬಂದರೂ, ಅವರು ಕಾಯಿಲೆ ತೀವ್ರವಾಗಿ ಉಲ್ಬಣವಾದ ಮೇಲೆಯೇ ಬರುವರೆಂದೂ ತಿಳಿದಿದ್ದೆ. ನನ್ನ ಎಲ್ಲಾ ಊಹಾಪೋಹಗಳನ್ನು ಸುಳ್ಳಾಗಿಸಿದವರೆಂದರೆ ರಾಜಾಜಿನಗರದ ಡಾ. ನಾರಾಯಣ. ಡಾ. ನಾರಾಯಣ ಉತ್ಸಾಹಿ ತರುಣ ವೈದ್ಯ. ರೋಗಿಗಳಿಗೆ ಅವರು ತಮ್ಮ ಕಾಯಿಲೆಗೆ ಏನಾದರೂ ಮಾಡೇ ಮಾಡುವರು ಎಂಬ ಅಪಾರ ನಂಬಿಕೆ. ಕಿರಣ ಇದಕ್ಕೆ ಹೊರತಲ್ಲ.

ಕಿರಣನಿಗೆ ಅಲರ್ಜಿಯ ತೊಂದರೆ. ಅವನ ಅಲರ್ಜಿ ಯಾರಿಂದಲೂ ವಾಸಿಯಾಗಲಿಲ್ಲ. ಡಾ. ನಾರಾಯಣ ಅವರು ಅಲರ್ಜಿ ಮಾನಸಿಕ ಅಸ್ವಸ್ಥತೆಯಿಂದಲೂ ಸಾಧ್ಯವೆಂಬುದನ್ನು ಎಲ್ಲಿಯೋ ಓದಿದ ನೆನಪಿನ ಮೇಲೆ ನನ್ನಲ್ಲಿಗೆ ಕಿರಣನನ್ನು ಕಳುಹಿಸಿದ್ದರು.

ಕಿರಣನಿಗೆ ಮೂವತ್ತೊಂದು ವರ್ಷ ವಯಸ್ಸು. ಬಹಳ ಮೆದು ಸ್ವಭಾವದವನು. ಮಾತನಾಡುವಾಗ ನಗುಮುಖದಿಂದಲೇ ಮಾತನಾಡುವನು. ಆ ನಗುಮುಖ ಕೇವಲ ಮೇಲ್ನೋಟಕ್ಕೆ ಮಾತ್ರವೆಂಬುದು ತಿಳಿಯಲು ಬಹಳ ಸಮಯ ಬೇಕಿರಲಿಲ್ಲ. ಅಲರ್ಜಿಯಿಂದ ಜೀವನವೇ ಬೇಸರವಾಗಿದೆಯೆಂದು ಕಿರಣ ಹೇಳಿದನು. ಅಲರ್ಜಿ ಪ್ರಾರಂಭವಾದುದು ಸುಮಾರು ಎರಡು ವರ್ಷಗಳ ಹಿಂದೆ. ತನಗೆ ತಿಳಿದಂತೆ ಅಹಿತಕರ ಘಟನೆಗಳಾವುವೂ ನಡೆದಿಲ್ಲವೆಂದು ಹೇಳಿದನು. ಅಲರ್ಜಿ ಮೊದಲು ಕನ್ನಡಕ ಧರಿಸುವ ಜಾಗದಲ್ಲಿ ಪ್ರಾರಂಭವಾಯಿತು. ಕ್ರಮೇಣ ಅದು ಹೆಚ್ಚುತ್ತಲೇ ಬಂದು ಶರೀರವನ್ನೆಲ್ಲಾ ಆಕ್ರಮಿಸಿತು. ಮೊದಲು ತುರಿಕೆ ಪ್ರಾರಂಭವಾಗುವುದು, ನಂತರ ಗುಳ್ಳೆಗಳು ಕಾಣುವವು. ಗುಳ್ಳೆಗಳು ಹೋದ ನಂತರ ಚರ್ಮ ಕಪ್ಪಾಗುವುದು. ಈ ರೀತಿ ಕಪ್ಪಾಗಿರುವ ಚರ್ಮ ಒಂದೆರಡು ಗಂಟೆಗಳ ನಂತರ ಸರಿಹೋಗುವುದು. ತುರಿಕೆ ಬಂದರೆ ಆ ಸಮಯದಲ್ಲಿ ತಡೆಯಲಾರದಷ್ಟು ಯಾತನೆ ಮತ್ತು ಇತರರಿಗೆ ಅದನ್ನು ನೋಡಲೂ ಅಸಹ್ಯ.

ಇಬ್ಬರು ಚರ್ಮರೋಗ ತಜ್ಞರ ಬಳಿ ತೋರಿ-ಸಿದ್ದಾಗಿತ್ತು. ಎಲ್ಲಾ ತರಹದ ಪರೀಕ್ಷೆಗಳನ್ನು ನಡೆಸಿದ್ದೂ ಆಗಿತ್ತು. ಅವರ ಆದೇಶದ ಮೇರೆಗೆ ಬೆಟ್ನೆಸೋಲ್ ಮತ್ತು ಸೈನೀಸ್ಟಮಿನ್ ಎಂಬ ಅಲರ್ಜಿಗೆ ಕೊಡುವ ಚುಚ್ಚುಮದ್ದುಗಳನ್ನು ಡಾ. ನಾರಾಯಣ ಅವರೇ ಕೊಡುತ್ತಿದ್ದರು. ಮೊದಲು ಈ ಎರಡು ಚುಚ್ಚುಮದ್ದುಗಳನ್ನು ಕೊಟ್ಟ ಮೂರು ತಿಂಗಳ ಕಾಲ ಏನೂ ತೊಂದರೆಯಿರಲಿಲ್ಲ. ಕ್ರಮೇಣವಾಗಿ ಚುಚ್ಚುಮದ್ದುಗಳನ್ನು ಕೊಟ್ಟಾಗಲೂ ಕಿರಣ ಅಲರ್ಜಿಯಿಲ್ಲದೇ ಚೆನ್ನಾಗಿರುವುದು ಕಡಿಮೆಯಾಗುತ್ತಲೇ ಬಂದಿತು. ಕಡೆಗೆ ಚುಚ್ಚುಮದ್ದುಗಳನ್ನು ಕೊಟ್ಟರೆ ಒಂದು ವಾರ ಸಹ ಸರಿಯಾಗಿರುವುದು ಅಸಾಧ್ಯವಾಯಿತು. ಈ ರೀತಿ ಹೆಚ್ಚು ಹೆಚ್ಚು ಚುಚ್ಚುಮದ್ದುಗಳನ್ನು ಕೊಟ್ಟರೆ ಹೇಗೆ ಎಂಬ ಚಿಂತೆ ಡಾ. ನಾರಾಯಣ ಅವರನ್ನು ಕಾಡುತ್ತಿತ್ತು. ಕಿರಣ ವೈದ್ಯರ ಆದೇಶದ ಮೇರೆಗೆ ಸಾಬೂನು, ಟೆರಿಲೀನ್ ಬಟ್ಟೆಗಳು ಮತ್ತು ಚಪ್ಪಲಿ ಮುಂತಾದ ಚರ್ಮದ ಪದಾರ್ಥಗಳನ್ನು ಉಪಯೋಗಿಸುವುದನ್ನು ಸಹ ಬಿಟ್ಟಿದ್ದನು. ಕೇವಲ ಸೀಗೇ ಪುಡಿ ಉಪಯೋಗಿಸಿ ಸ್ನಾನ ಮಾಡಿದಾಗಲೂ ಅವನ ಅಲರ್ಜಿ ಸ್ನಾನ ಮಾಡಿದ ಕೂಡಲೆ ಹೆಚ್ಚಾಗುತ್ತಿತ್ತು. ಒಂದೊಂದು ಬಾರಿ ಮನಸ್ಸಿಗೆ ಬೇಜಾರಾದಾಗ ಅಲರ್ಜಿ ಹೆಚ್ಚುತ್ತಿತ್ತೆಂದು ತಿಳಿದುಬಂದಿತು. ಆದರೆ ಅಲರ್ಜಿಗೂ ಮತ್ತು ಮಾನಸಿಕ ಚಿಂತೆಗೂ ಸಂಬಂಧವಿದೆಯೆಂದು ಖಚಿತವಾಗಿ ತಿಳಿದುಬರಲಿಲ್ಲ. ಹೆಚ್ಚಿನ ಮಾನಸಿಕ ದುಗುಡ ಮತ್ತು ಚಿಂತೆಗಳಾವುವೂ ಇಲ್ಲವೆಂದೂ, ಹೊಟ್ಟೆಯ ಹಸಿವು ನಿದ್ರೆ ಮುಂತಾದವುಗಳೆಲ್ಲಾ ಮಾಮೂಲಾಗಿದೆಯೆಂದೂ ಕಿರಣ ಹೇಳಿದ.

ಕಿರಣ ಬಡತನದಲ್ಲಿ ಬೆಳೆದುಬಂದವನು. ಸರಿಯಾಗಿ ತಿನ್ನಲು ಮತ್ತು ಉಡಲು ಸಹ ಇಲ್ಲದಂತಹ ಕಷ್ಟಮಯ ವಾತಾವರಣದಲ್ಲಿ ಬೆಳೆದಿದ್ದನು. ಓದು ಮುಗಿಸಿದ ನಂತರ ನಿರುದ್ಯೋಗದ ಸಮಸ್ಯೆಯಾಯಿತು. ನಿರುದ್ಯೋಗದಿಂದ ಆತ್ಮಹತ್ಯೆ ಮಾಡಿಕೊಳ್ಳಬೇಕೆನ್ನುವಷ್ಟು ಬೇಸತ್ತಿದ್ದನು. ಕಡೆಗೆ ಬೆಂಗಳೂರಿನಲ್ಲಿ ಉದ್ಯೋಗ ದೊರಕಿದಾಗ ತನ್ನ ತಂದೆ, ತಾಯಿ, ಸಹೋದರ, ಸಹೋದರಿಯರನ್ನು ತನ್ನಲ್ಲಿಗೇ ಕರೆಸಿಕೊಂಡನು. ಸಹೋದರ ಸಹೋದರಿಯರ ವಿದ್ಯಾಭ್ಯಾಸಕ್ಕೆ ತನ್ನ ಕೈಮೀರಿ ಸಹಾಯ ಮಾಡಿದನು. ಕಾರ್ಖಾನೆಯಲ್ಲಿ ಮೇಲಧಿಕಾರಿಗಳಿಂದ ಒಳ್ಳೆಯ ಕೆಲಸಗಾರನೆಂದು ಮೆಚ್ಚುಗೆ ಪಡೆದಿದ್ದರೆ, ಸಹೋದ್ಯೋಗಿಗಳಿಂದ ಒಳ್ಳೆಯ ಗೆಳೆಯನೆಂಬ ಹೆಸರು ಪಡೆದಿದ್ದನು. ಮದುವೆಯಾದರೆ ಅಲರ್ಜಿ ಹೋಗುವುದೆಂದು ಯಾರೋ ಸಲಹೆ ಕೊಟ್ಟಿದ್ದರಿಂದ ಅವನ ತಂದೆ-ತಾಯಿಗಳು ಅವನಿಗೆ ಮದುವೆಯನ್ನೂ ಮಾಡಿದರು. ಮದುವೆಯಾಗಿ ಹತ್ತು ತಿಂಗಳಾದರೂ ಅಲರ್ಜಿಯಿಂದ ಬಿಡುಗಡೆಯಾಗಲಿಲ್ಲ. ಆ ದಿನ ಪರೀಕ್ಷೆ ಮುಗಿಯುವ ಹೊತ್ತಾದರೂ ಕಿರಣನ ಅಲರ್ಜಿ ಮಾನಸಿಕ ಅಸ್ವಾಸ್ಥ್ಯದ ಪರಿಣಾಮವೋ ಅಲ್ಲವೋ ಎಂಬ ತೀರ್ಮಾನಕ್ಕೆ ಬರಲಾಗಲಿಲ್ಲ. ಒಮ್ಮೊಮ್ಮೆ ಮನಸ್ಸಿಗೆ ಬೇಜಾರಾವುದು ಮತ್ತು ಒಂದೊಂದು ಬಾರಿ ಆ ರೀತಿ ಬೇಜಾರಾದಾಗ ಅಲರ್ಜಿ ಹೆಚ್ಚುವುದೆಂದು ಹೇಳಿದ್ದರೂ ಅವನ ತೊಂದರೆ ಮಾನಸಿಕವೆಂದು ಹೇಳುವಷ್ಟು ಅಧಿಕಾರವಿರಲಿಲ್ಲ. ಮಾನಸಿಕ ಪರೀಕ್ಷೆಗಳಲ್ಲಿ ಒಂದಾದ ಟಿ.ಎ.ಟಿ. ಸಹ ಇಲ್ಲಿ ಅಷ್ಟಾಗಿ ಸಹಾಯವಾಗಲಿಲ್ಲ. ಈ ಪರೀಕ್ಷೆಯಲ್ಲಿ ಅವನು ಕೋಪವನ್ನು ಹೊರಗೆಡವದೇ ನುಂಗಿಕೊಳ್ಳುವಂಥವನೆಂದು ತಿಳಿಯಿತು. ಇಂತಹ ವ್ಯಕ್ತಿತ್ವ ಬಹಳಷ್ಟು ಜನಗಳಿಗಿರುತ್ತದೆ. ಅಂದಾಕ್ಷಣ ಆ ವ್ಯಕ್ತಿಗೆ ಮಾನಸಿಕ ಅಸ್ವಾಸ್ಥ್ಯವಿದೆಯೆಂಬ ನಿರ್ಧಾರಕ್ಕೆ ಬರಕೂಡದು.

ಮಾನಸಿಕ ಅಸ್ವಾಸ್ಥ್ಯ ಇದೆಯೇ ಇಲ್ಲವೇ ಎಂದು ತಿಳಿಯಲು ವಶೀಕರಣ ಒಂದು ವಿಧಾನ. ಹಿಂದಿನ ಕಾಲದಲ್ಲಿ ವಶೀಕರಣವನ್ನು ಚಿಕಿತ್ಸೆಯಲ್ಲಿ ಬಹಳವಾಗಿ ಬಳಸಲಾಗುತ್ತಿತ್ತು. ವಶೀಕರಣವು ರೋಗಿಯ ಬಾಹ್ಯ ಮನಸ್ಸಿಗೆ ಅರಿವಿಲ್ಲದಂತೆ ಆಗುವುದರಿಂದ ಅದರ ಪರಿಣಾಮ ತಾತ್ಕಾಲಿಕ. ರೋಗಿಯ ತೊಂದರೆ ವಶೀಕರಣ ಚಿಕಿತ್ಸೆಯ ನಂತರ ಕೂಡಲೆ ವಾಸಿಯಾದರೂ ಕೆಲವು ದಿನಗಳ ನಂತರ ಮರುಕಳಿಸಬಹುದು. ಈ ಕಾರಣದಿಂದಲೇ ಸಿಗ್ಮಂಡ್ ಫ್ರಾಯ್ಡ್ ವಶೀಕರಣವನ್ನು ಬಿಟ್ಟು

ಮನೋವಿಶ್ಲೇಷಣೆಯನ್ನು ಕಂಡುಹಿಡಿದನು. ರೋಗಿಯ ಮಾನಸಿಕ ತುಮುಲವು ತಾತ್ಕಾಲಿಕವಾಗಿದ್ದಲ್ಲಿ (ಉದಾ : ಕದನಗಳಲ್ಲುಂಟಾಗುವ ಸಮಸ್ಯೆಗಳು-War neurosis) ವಶೀಕರಣ ಚಿಕಿತ್ಸೆಯನ್ನು-ಈಗಲೂ ಉಪಯೋಗಿಸಲಾಗುವುದು. ವಶೀಕರಣವನ್ನು ಕೇವಲ ಚಿಕಿತ್ಸೆಗಳಿಲ್ಲದೆ ಮಾನಸಿಕ ಸ್ಥಿತಿಯನ್ನು ತಿಳಿಯಲು ಸಹ ಪರೀಕ್ಷಾ ವಿಧಾನವಾಗಿ ಉಪಯೋಗಿಸಬಹುದು.

ವಶೀಕರಣದಲ್ಲಿ ಕಿರಣನನ್ನು ಪರೀಕ್ಷಿಸಲು ನಿರ್ಧಾರ ಮಾಡಿದೆ. ವಶೀಕರಣವನ್ನು ಎಲ್ಲರ ಮೇಲೂ ಬಳಸಲಾಗುವುದಿಲ್ಲ. ಇದಕ್ಕೆ ರೋಗಿಯ ಸಹಕಾರ ಬಹಳ ಮುಖ್ಯ ಮತ್ತು ಅವನಿಗೆ ಮಾನಸಿಕ ಏಕಾಗ್ರತೆ ಇರಬೇಕು. ಇವೆರಡೂ ಕಿರಣನಲ್ಲಿದ್ದುದರಿಂದ ವಶೀಕರಣ ಶೀಘ್ರವಾಗಿ ಯಶಸ್ವಿಯಾಯಿತು. ವಶೀಕರಣದಲ್ಲಿ ರೋಗಿಗೆ ಒಂದು ಪದಾರ್ಥದ ಮೇಲೋ ಅಥವಾ ಒಂದು ವಿಷಯದ ಮೇಲೋ ಏಕಾಗ್ರತೆಯಿಡಲು ತಿಳಿಸಿ ಸಲಹೆಗಳನ್ನು ಕೊಡುತ್ತಾ ಹೋಗುತ್ತೇವೆ. ಈ ಸಲಹೆಗಳನ್ನು ಚಾಚೂ ತಪ್ಪದೆ ಅನುಸರಿಸಿದಲ್ಲಿ ವಶೀಕರಣ ಉಂಟಾಗುವುದು. ವಶೀಕರಣದಲ್ಲಿ ಪ್ರಜ್ಞೆಯನ್ನು ನಿದ್ರೆ ಹೋಗುವಂತೆ ಮಾಡುವೆವು. ಆಗ ಅವ-ಪ್ರಜ್ಞೆ ಪ್ರಜ್ಞೆಯ ತಡೆಯಿಲ್ಲದೇ ಹೊರ ಬರುವುದು. ನಾವು ಕೇಳಿದ್ದಕ್ಕೆಲ್ಲಾ ರೋಗಿ ಉತ್ತರ ಕೊಡುವನು. ಅವನಿಗೆಚ್ಚರವಾದ ಮೇಲೆ ನಾವೇನು ಕೇಳಿದೆವು ಮತ್ತು ತಾನೇನು ಹೇಳಿದೆನೆಂಬುದರ ನೆನಪಿರುವುದಿಲ್ಲ ಅವನಿಗೆ. ವಶೀಕರಣ ಪರೀಕ್ಷೆಯಲ್ಲಿ ಒಂದು ಮುಖ್ಯವಾದ ವಿಷಯ ತಿಳಿಯಿತು. ಎರಡು ವರ್ಷಗಳ ಹಿಂದೆ ಒಂದು ದಿನ ಕಿರಣನ ತಮ್ಮ ಅಗಸನಿಂದ ಬಟ್ಟೆಗಳನ್ನು ತರಲಿಲ್ಲವೆಂಬ ಕಾರಣಕ್ಕಾಗಿ ತನ್ನ ತಂಗಿಗೆ ಹೊಡೆದನು. ಈ ತಂಗಿಯನ್ನು ಕಂಡರೆ ಕಿರಣನಿಗೆ ಬಹಳ ವಾತ್ಸಲ್ಯ. ಅವಳನ್ನು ಹೊಡೆದಿದ್ದಕ್ಕಾಗಿ ತನ್ನ ತಮ್ಮನ ಮೇಲೆ ಎಲ್ಲಿಲ್ಲದ ಕೋಪ ಬಂದಿತು. ಆದರೆ ಕೋಪವನ್ನು ಹೊರಗೆಡವದೆ ಹಾಗೆಯೇ ನುಂಗಿಕೊಂಡನು. ಆಗ ಮೊದಲ ಬಾರಿ ಅವನಿಗೆ ಕಡಿತ ಪ್ರಾರಂಭವಾಯಿತು. ತನ್ನ ತಂದೆ-ತಾಯಿಗಳು ಒಡಹುಟ್ಟಿದವರು ಎಷ್ಟು ಮಾಡಿದರೂ ಸಾಲದೆಂಬಂತೆ ತನ್ನನ್ನೇ ಹಂಗಿಸುವರು. ಇದರಿಂದೆಲ್ಲಾ ಜೀವನ ಬೇಸರವಾಗಿದೆಯೆಂದು ಹೇಳಿದನು. ಯಾವ ವಿಷಯದ ಬಗ್ಗೆಯೇ ಆಗಲಿ ತನಗೆ ವಿಪರೀತ ಕೋಪ ಬಂದು ಅದನ್ನು ಹೊರಗೆಡವದಿದ್ದಾಗ ಅಲರ್ಜಿಯುಂಟಾಗುವುದೆಂದು ತಿಳಿಸಿದನು. ಒಟ್ಟಿನಲ್ಲಿ ವಶೀಕರಣದಿಂದ ಬಹಳ ಮುಖ್ಯ ವಿಷಯಗಳು ತಿಳಿದವು. ಯಾವ ಪದಾರ್ಥವನ್ನು ಉಪಯೋಗಿಸಿದರೂ ಇನ್ನು ಮೇಲೆ ಅಲರ್ಜಿಯಾಗುವುದಿಲ್ಲವೆಂದು ಸಲಹೆಯನ್ನು ಕೊಟ್ಟೆ.

ವಶೀಕರಣದಿಂದ ಹೊರಗೆ ಬಂದ ನಂತರ, ನನ್ನ ಅನುಮತಿ ಪಡೆದು ನೀರು ಕುಡಿಯಲು ಹೋಗಬೇಕೆಂದೂ, ಮತ್ತು ಅಲ್ಲಿಗೆ ಹೋದಾಗ ನೀರು ಕುಡಿಯದೇ ಸಾಬೂನು ಉಪಯೋಗಿಸಿ ಮುಖ ತೊಳೆಯಬೇಕೆಂಬ ಆದೇಶವನ್ನಿತ್ತೆ. ನಂತರ ಕಿರಣನನ್ನು ವಶೀಕರಣದಿಂದ ಹೊರ ಬರಿಸಿದೆ. ಅವನು ನಿಧಾನವಾಗಿ ಕಣ್ಣು ಬಿಟ್ಟು ಮೆಲ್ಲಗೆದ್ದೇಳುತ್ತಾ ತನಗೆ ಕುಡಿಯಲು ನೀರು ಬೇಕೆಂದು ಕೇಳಿದ. ಅಲ್ಲಿಯೇ ಇರುವ ಕೊಳಾಯಿಯಲ್ಲಿ ನೀರು ಕುಡಿಯಲು ಅನುಮತಿ ಕೊಟ್ಟೆ. ಅಲ್ಲಿಗೆ ಹೋಗಿ ನೀರು ಕುಡಿಯದೇ ಸಾಬೂನು ಉಪಯೋಗಿಸಿ ಮುಖ ತೊಳೆದು ಕೊಂಡು ಬಂದ. ಈ ರೀತಿ ಏಕೆ ಮಾಡಿದೆ ಎಂದು ಕೇಳಿದರೆ ತನಗೆ ಗೊತ್ತಿಲ್ಲವೆಂದು ಹೇಳಿದನು. ಸಾಬೂನು ಉಪಯೋಗಿಸಿದರೂ ಈ ಬಾರಿ ಕಡಿತವುಂಟಾಗಲಿಲ್ಲ. ವಶೀಕರಣದಲ್ಲಿ ನಾವು ಹೇಳಿದ್ದನ್ನು ಚಾಚೂ ತಪ್ಪದೆ ಮಾಡುತ್ತಾರೆ. ಮತ್ತು ತಾವು ಆ ರೀತಿ ಏಕೆ ಮಾಡಿದರೆಂದು ಅವರಿಗೇ ತಿಳಿದಿರುವುದಿಲ್ಲ. ಅಲರ್ಜಿಯ ಚುಚ್ಚು ಮದ್ದುಗಳನ್ನು ಇನ್ನು ತೆಗೆದುಕೊಳ್ಳಕೂಡದೆಂದು ಹೇಳಿ ಕಿರಣನನ್ನು ಕಳುಹಿಸಿಕೊಟ್ಟೆ.

ಇದಾದ ಕೆಲವು ದಿನಗಳಲ್ಲೇ ಕಿರಣನಿಗೆ ಮತ್ತೆ ಅಲರ್ಜಿಯುಂಟಾಗಿ ನನ್ನಲ್ಲಿಗೆ ಬಂದನು. ಇನ್ನೊಂದು ಬಾರಿ ವಶೀಕರಣವನ್ನುಪಯೋಗಿಸಿ ಅವನ ತೊಂದರೆಯನ್ನು ನಿವಾರಿಸಿದೆನು. ವಶೀಕರಣದ ಪ್ರಭಾವ ಬಹಳ ದಿನಗಳಿರುವುದಿಲ್ಲ. ಅದರ ಪ್ರಭಾವ ಹೋದ ಕೂಡಲೆ ರೋಗಿಯ ತೊಂದರೆ ಮರುಕಳಿಸುವುದು. ಕಿರಣನ ತೊಂದರೆ ಮರುಕಳಿಸಿದುದು ಅದೇ ಕಾರಣದಿಂದ. ಮನೋವಿಶ್ಲೇಷ

ಣೆಯ ಪ್ರಭಾವ ತಾತ್ಕಾಲಿಕವಲ್ಲ. ವಶೀಕರಣದ ಚಿಕಿತ್ಸೆ ಅವಪ್ರಜ್ಞೆಯಲ್ಲಿ ನಡೆದರೆ ಮಾತಿನ ಚಿಕಿತ್ಸೆ ಪ್ರಜ್ಞೆಯಲ್ಲಿ ನಡೆಯುತ್ತದೆ. ಆದುದರಿಂದ ಅದರ ಪ್ರಭಾವ ಚಿರಕಾಲ ಉಳಿಯುತ್ತದೆ. ಮನೋ ವಿಶ್ಲೇಷಣೆಗೆ ವಾರಕ್ಕೊಮ್ಮೆ ಅವನಿಗೆ ಬರಲು ತಿಳಿಸಿ ಕಳುಹಿಸಿದೆ. ಈ ರೀತಿ ಹನ್ನೊಂದು ವಾರ ಅವನನ್ನು ಚಿಕಿತ್ಸೆಗೆ ಒಳಪಡಿಸಬೇಕಾಯಿತು. ಈ ಹನ್ನೊಂದು ವಾರಗಳಲ್ಲಿ ಸುಮಾರು ನಾಲ್ಕು ಬಾರಿ ಅವನಿಗೆ ಅಲರ್ಜಿಯುಂಟಾಯಿತು. ಅದರಲ್ಲಿ ಎರಡು ಬಾರಿ ಅತಿ ಹೆಚ್ಚಾಗಿಯೇ ಆಗಿತ್ತು. ಮನೋ ವಿಶ್ಲೇಷಣೆಯಲ್ಲಿ ಅಲರ್ಜಿಯುಂಟಾದ ಸಂದರ್ಭ ಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಆ ಸಮಯದಲ್ಲಿ ನಡೆದ ಆಗುಹೋಗುಗಳನ್ನೆಲ್ಲಾ ಬಹು ತಾಳ್ಮೆಯಿಂದ ಪರಿಶೀಲಿಸಬೇಕು. ರೋಗಿಗೆ ಆ ಘಟನೆಗೂ ಮತ್ತು ತೊಂದರೆಗೂ ಇರುವ ಸಂಬಂಧ ತಿಳಿದೇ ಇರುವುದಿಲ್ಲ. ಇಷ್ಟಲ್ಲದೇ, ಪ್ರಜ್ಞೆಗೆ ಈ ಸಂಬಂಧವನ್ನು ತಿಳಿಯುವ ಇಚ್ಛೆ-ಯೂ ಇರುವುದಿಲ್ಲ. ಆದುದರಿಂದ ಈ ಮನಸ್ಸು ನಿಜವಾದ ಕಾರಣ ರೋಗಿಗೆ ತಿಳಿಯದಂತೆ ಮಾಡಲು ಎಲ್ಲಾ ತರಹ ಅಡ್ಡಿಯನ್ನುಂಟುಮಾಡುವುದು. ಇದಕ್ಕೆ ಪ್ರತಿರೋಧ (Resistance) ಎಂದು ಕರೆಯುತ್ತೇವೆ. ಈ ಕಾರಣದಿಂದ ಆ ಸಂದರ್ಭದಲ್ಲಿ ಯಾವ ಘಟನೆಯಾಯಿತೆಂದು ಕೇಳಿದರೆ ಸಾಧಾರಣ ವಾಗಿ ಏನೂ ಆಗಿಲ್ಲವೆಂಬ ಉತ್ತರ ಸಿಗುವುದು. ಮನೋವಿಶ್ಲೇಷಣಾ ತಜ್ಞರು ತಾಳ್ಮೆಯಿಂದ ಎಲ್ಲ ವನ್ನೂ ಪರಿಶೀಲಿಸಬೇಕು. ಕೆಲವೊಮ್ಮೆ ನಾವೆಷ್ಟೇ ಪ್ರಯತ್ನಿಸಿದರೂ ಸಿಗದ ಉತ್ತರ ಕೆಲವು ಭೇಟಿ ಗಳಾದ ನಂತರ ಅಕಸ್ಮಾತ್ತಾಗಿ ಹೊರಗೆ ಬರುತ್ತದೆ. ಪ್ರತಿಯೊಂದು ಭೇಟಿಯಲ್ಲಿ ಹೇಳಿದ್ದನ್ನು ಜ್ಞಾಪಕ ವಿಟ್ಟುಕೊಂಡು ಒಂದಕ್ಕೊಂದು ಸಂಬಂಧವಿದೆಯೇ ಎಂದು ತಿಳಿಯಲು ಮನೋವಿಶ್ಲೇಷಣಾ ತಜ್ಞರ ಮಿದುಳಿಗೆ ಸಾಕಷ್ಟು ಕೆಲಸವೇ ಆಗುತ್ತದೆ. ಇಲ್ಲಿ

ಮನೋವಿಶ್ಲೇಷಣೆಯ ಎರಡು ಘಟನೆಗಳನ್ನು ವಿವರಿಸುತ್ತೇನೆ. ಒಂದು ಬಾರಿ ಕಿರಣನ ಅಲರ್ಜಿ ಹೆಚ್ಚಾದ ಕೂಡಲೆ ನನ್ನ ಬಳಿ ಬಂದಿದ್ದನು. ಆ ಸಮಯದಲ್ಲಿ ಮತ್ತು ಅದರ ಹಿಂದಿನ ಕೆಲವು ದಿನಗಳ ಆಗುಹೋಗುಗಳನ್ನೆಲ್ಲಾ ಸ್ಮರಿಸಿಕೊಳ್ಳಲು ಅವನಿಗೆ ತಿಳಿಸಿದೆ. ಅದು ನಿಷ್ಪ್ರಯೋಜಕವಾಯಿತು. ತನಗೆ ತಿಳಿದಂತೆ ಮನಸ್ಸಿಗೆ ಬೇಜಾರಾಗುವ ಘಟನೆಗಳೇನೂ ನಡೆದಿಲ್ಲವೆಂದು ಹೇಳಿದನು. ಅವನ ಸಹೋದ್ಯೋಗಿಗಳು, ಸ್ನೇಹಿತರು ಮತ್ತು ಅವನ ಕುಟುಂಬದವರ ವಿಷಯಗಳನ್ನೆಲ್ಲಾ ಕೇಳಿದರೂ ಪ್ರಯೋಜನವಾಗಲಿಲ್ಲ. ನನ್ನ ಯೋಚನೆಗೆ ಎಟಕುವವರನ್ನೆಲ್ಲಾ ಮತ್ತು ಆಗುಹೋಗುಗಳನ್ನೆಲ್ಲಾ ವಿಚಾರಿಸಿದರೂ ಪ್ರಯೋಜನವಾಗಲಿಲ್ಲ. ಇದೊಂದು ನಿಷ್ಪ್ರಯೋಜಕ ಭೇಟಿಯೆಂಬ ನಿರ್ಧಾರಕ್ಕೆ ಬಂದಿದ್ದೆ. ಅಲ್ಲಿಯೂ ಬಿಡದೇ ಕಡೆಯ ಪ್ರಯತ್ನವನ್ನು ಮಾಡಿಯೇ ಬಿಡೋಣವೆಂದುಕೊಂಡೆ. 'ಈ ರೀತಿ ಅಲರ್ಜಿ ಹೆಚ್ಚಾಗಲು ಏನೋ ಪ್ರಬಲವಾದ ಕಾರಣವಿರಬೇಕು. ಯಾವುದೇ ಆಗಲಿ ಕಾರಣವಿಲ್ಲದೇ ಆಗಲು ಸಾಧ್ಯವಿಲ್ಲ. ಆ ವಿಷಯ ದೊಡ್ಡದೇ ಆಗಿರಬಹುದು ಅಥವಾ ಸಣ್ಣದೇ ಆಗಿರಬಹುದು. ಇನ್ನೊಮ್ಮೆ ನಿನ್ನ ಆಗುಹೋಗುಗಳನ್ನು ತೀವ್ರವಾಗಿ ಯೋಚನೆಮಾಡು' ಎಂದು ಕಿರಣನಿಗೆ ಹೇಳಿದೆ. ಕಿರಣ ಸ್ವಲ್ಪ ಹೊತ್ತು ಯೋಚಿಸಿದ ನಂತರ ತನ್ನ ಹೆಂಡತಿಯಿಂದ ಕಾಗದ ಬಂದಿತ್ತೆಂದು ತಿಳಿಸಿದನು. ಆದರೆ ಕಾಗದಕ್ಕೂ ಮತ್ತು ಅವನ ತೊಂದರೆಗೂ ಏನೂ ಸಂಬಂಧವಿಲ್ಲವೆಂದು ತಿಳಿಸಿದನು. ಅಷ್ಟೆಲ್ಲದೇ, 'ಸಾರ್, ನೀವು ತೀವ್ರವಾಗಿ ಇನ್ನೊಮ್ಮೆ ಯೋಚನೆ ಮಾಡು ಎಂದು ತಿಳಿಸಿದಿರಿ. ನಿಮ್ಮ ಒತ್ತಾಯಕ್ಕೋಸ್ಕರ ಸುಮ್ಮನೆ ಯೋಚನೆ ಮಾಡಿದೆ. ಆಗ ನನ್ನ ಮನಸ್ಸಿಗೆ ಬಂದುದು ಕಾಗದದ ವಿಷಯ. ಏನೂ ಹೇಳದಿದ್ದರೆ ನೀವೆಲ್ಲಿ ಬೇಜಾರು ಮಾಡಿಕೊಳ್ಳುವಿರೋ ಎಂದು ಅದನ್ನೇ ಹೇಳಿದೆನು' ಎಂದ. ಹಿಂದೆಯೇ ತಿಳಿಸಿದಂತೆ ಮನೋವಿಶ್ಲೇಷಣಾ ತಜ್ಞರಿಗೆ ಬಹಳ ಸಹನೆ ಬೇಕು ಮತ್ತು ಪ್ರತಿಯೊಂದನ್ನೂ ಕೂಲಂಕಷವಾಗಿ ವಿಚಾರಿಸಬೇಕು. ಹಾಗಾದರೆ ಕಿರಣ ಕೇವಲ ನನ್ನ ಒತ್ತಾಯಕ್ಕೋಸ್ಕರ ಒಂದು ಕ್ಷುಲ್ಲಕ ಘಟನೆಯನ್ನು ಸ್ಮರಿಸಿಕೊಂಡಿರಬಹುದೇ? ಹಿಂದಿನ ಕೆಲವು ದಿನಗಳಲ್ಲಿ ಹಲವಾರು ಕ್ಷುಲ್ಲಕ ಘಟನೆಗಳು ಸಂಭವಿಸಿಯೇ ಇರುತ್ತವೆ. ಆದರೆ ಎಲ್ಲವನ್ನೂ ಬಿಟ್ಟು ಇದನ್ನು ಸ್ಮರಿಸಿಕೊಳ್ಳಲು ಏನಾದರೂ ಪ್ರಬಲವಾದ ಕಾರಣವಿರಬಹುದೇ ಎಂಬ ಯೋಚನೆ ನನ್ನ ಮನಸ್ಸಿನಲ್ಲಿ ಸುಳಿಯಿತು. ಕೆಲವೊಮ್ಮೆ ನಕಾರಾತ್ಮಕ ಉತ್ತರಗಳ ಮೂಲಕ ನಮಗೆ ಬೇಕಾಗಿರುವ ಉತ್ತರ ಹೊರಬರಬಹುದು. ಒಟ್ಟಿನಲ್ಲಿ ಅದನ್ನು ಅಲ್ಲಿಗೆ ಬಿಡದೆ ಕಾಗದದ ವಿಷಯವನ್ನು ತಿಳಿಸಲು ಹೇಳಿದೆ. ಆಗ ಕಿರಣ ಅದೆಲ್ಲಾ ಮಾಮೂಲು ಸಂಸಾರದ ವಿಷಯಗಳೆಂದು ತಿಳಿಸಿದನು. ನಂತರ ತನ್ನ ಹೆಂಡತಿ ಆರು ತಿಂಗಳ ಬಸುರಿಯೆಂದೂ ತನ್ನನ್ನು ಕರೆದುಕೊಂಡು ಹೋಗಲು ಬರೆದಿದ್ದಳೆಂದು ತಿಳಿಸಿದನು. 'ನಿನ್ನ ಹೆಂಡತಿಗೆ ನಿನ್ನನ್ನು ಬಿಟ್ಟಿರಲು ಕಷ್ಟವಾಗಿರಬೇಕು. ಅದಕ್ಕೆ ಆ ರೀತಿ ಬರೆದಿರಬೇಕು,' ಎಂದು ಸ್ವಲ್ಪ ತಮಾಷೆಯಾಗಿ ಕಿರಣನಿಗೆ ಹೇಳಿದೆ. ಅದು ನಿಜವಿರಬಹುದು, ಆದರೆ ಅದು ತನಗೆ ಪ್ರಾಣ ಸಂಕಟವೆಂದೂ ತನ್ನ ಹೆಂಡತಿಯನ್ನು ಕರೆಸಿಕೊಳ್ಳಲು ಕಷ್ಟವಾಗಿದೆಂದೂ ಕಿರಣ ತಿಳಿಸಿದನು. ಅವನ ತಂದೆ ತಾಯಿಗಳಿಗೆ ಅವನ ಹೆಂಡತಿಯೆಂದರೆ ಆಗುವುದಿಲ್ಲ. ಅವರು ಅವಳನ್ನು ಮನೆಗೆ ಕರೆತರಕೂಡದೆಂದೂ, ಅವಳನ್ನು ಕರೆದುಕೊಂಡು ಬರುವ ಇಷ್ಟವಿದ್ದರೆ ಕಿರಣನೇ ಬೇರೆ ಮನೆಗೆ ಹೋಗಬೇಕೆಂದೂ ತಿಳಿಸಿದ್ದರು. ಹಾಗೆಯೇ ಹೊಸ ಮನೆಯಲ್ಲಿ ಬಸುರಿ ಹೆಂಗಸು ಒಲೆ ಹೊತ್ತಿಸಿದರೆ ಕೆಟ್ಟದ್ದಾಗುವುದೆಂಬ ಶಕುನವನ್ನು ಮನದಟ್ಟುಮಾಡಿಕೊಟ್ಟಿದ್ದರು. ಅವನಿಗೆ ತಿಳಿದವರ ಪೈಕಿ ಯಾವುದೋ ಮನೆಯಿದೆಯೆಂದೂ ಅದನ್ನು ಅವನಿಗೇ ಬಾಡಿಗೆಗೆ ಕೊಡುವರೆಂದು ಸಹ ತಿಳಿಸಿದನು. ಅವನಿಗೆ ಶಾಸ್ತ್ರದಲ್ಲಿ ನಂಬಿಕೆ ಇರುವುದರಿಂದ ಹೊಸ ಮನೆಗೆ ಹೆಂಡತಿಯನ್ನು ಕರೆದುಕೊಂಡು ಹೋಗಲು ಹಿಂಜರಿದನು. ಹೆಂಡತಿ ಬಂದರೂ ಇರುವುದು ಮೂರು ತಿಂಗಳು ಮಾತ್ರ. ಆಕೆ ಆಗಲೇ ಆರು ತಿಂಗಳ ಬಸುರಿಯಾಗಿದ್ದು ಇನ್ನೆರಡು ಮೂರು ತಿಂಗಳಲ್ಲಿ ಹೆರಿಗೆಗೆ ಮತ್ತೆ ತೌರಿಗೆ ಹೋಗುವದಿತ್ತು. ಎರಡು ತಿಂಗಳಿಗೋಸ್ಕರ ಹೆಂಡತಿ ಇಷ್ಟು ಹಠ ಮಾಡುತ್ತಾಳಲ್ಲ ಎಂದು ಒಂದು ತರಹ ಬೇಸರ. ತಂದೆ ತಾಯಿಗಳನ್ನು ಇಲ್ಲಿಗೇ ಕರೆಸಿ

ಮನೆಯ ಬಾಡಿಗೆ ಮತ್ತು ಸಂಸಾರದ ಖರ್ಚಿಗೆ ಹೊಣೆ ಅವನಾದರೂ ಅವನನ್ನೇ ಬೇರೆ ಮನೆ ಮಾಡೆಂದು ಹೇಳುತ್ತಾರಲ್ಲ ಎಂದು ಇನ್ನೊಂದು ರೀತಿಯ ಬೇಸರ. ಕಡೆಗೆ ಮೂರು ತಿಂಗಳಾದರೂ ಅವಳ ಜೊತೆ ಅನುಸರಿಸಿಕೊಂಡು ಹೋಗಿ ಆ ಮೇಲೆ ಬೇರೆ ಮನೆ ಮಾಡುವೆನು. ಎಂದು ತಂದೆ ತಾಯಿಗಳಲ್ಲಿ ಬೇಡಿಕೊಂಡನು. ಅದಕ್ಕೆ ಅವರಿಂದ ನಕಾರಾತ್ಮಕ ಉತ್ತರ ಬಂದಿತು. ಅವನಿಗೂ ತೋಚದೆ ಬಹಳ ಬೇಸರವಾಯಿತು. ಆಗಲೇ ಅವನಿಗೆ ಕದಿತ ಪ್ರಾರಂಭವಾಯಿತು. ಕಡೆಗೆ ತನ್ನ ಹೆಂಡತಿಯ ಚಿಕ್ಕಪ್ಪನ ಮೊರೆಹೊಕ್ಕು ಅವಳಿಗೆ ಅಲ್ಲೇ ಇರುವಂತೆ ಬುದ್ಧಿ ಹೇಳಿಸಲು ನಿರ್ಧರಿಸಿದ್ದನು. ಕಿರಣ ತನ್ನ ಹೆಂಡತಿ ಮತ್ತು ತಂದೆ ತಾಯಿಗಳ ಮೇಲೆ ಬೇಸರ ಎಂದು ಹೇಳಿದನೇ ಹೊರತು ಕೋಪವೆಂದು ಹೇಳಲಿಲ್ಲ. ಅವನಿಗೆ ಹಿರಿಯರ ಮೇಲೆ ಕೋಪ ಮಾಡಿಕೊಳ್ಳುವುದು ತಪ್ಪು ಎಂಬ ಭಾವನೆ, ಹಾಗೂ ಹೀಗೂ ಕಡೆಗೆ ಈ ಬೇಸರದ ಮೂಲ ಕೋಪವಲ್ಲದೆ ಮತ್ತೇನೂ ಅಲ್ಲ ಎಂಬುದನ್ನು ಒಪ್ಪಿಕೊಂಡನು. ಈ ಕೋಪವನ್ನು ಹೊರಗೆಡವದೇ ಇರುವುದರಿಂದ ಕಡಿತವುಂಟಾಗಿರಬಹುದೆಂದು ಹೇಳಿದನು. ಆಗ ಕಿರಣ 'ನಾನು ಏನು ಮಾಡ್ಲಿ ಸಾರ್? ಇಬ್ಬರೂ ಹಠಮಾರಿಗಳು. ಅವಳ ಚಿಕ್ಕಪ್ಪ ಏನು ಬೇಕಾದರೂ ಮಾಡಲಿ. ನಾನು ಅವರಿಗೇ ಬಿಟ್ಟು ಬಿಡುತ್ತೇನೆ' ಎಂದು ಹೇಳಿದನು. ಅಲ್ಲಿಗೆ ಈ ಸಮಸ್ಯೆಯನ್ನು ಬಗೆಹರಿಸಲು ತಾನು ಅಸಮರ್ಥನೆಂದು ಒಪ್ಪಿಕೊಂಡನು. ಆಗ ನಾನು ಕಿರಣನಿಗೆ ಅವನೇ ಈ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬಂದಿಲ್ಲವೆಂದೂ, ಅವನ ಈ ಹೊಯ್ದಾಟವನ್ನು ಅವರಿಬ್ಬರೂ ಉಪಯೋಗಿಸಿಕೊಳ್ಳುತ್ತಿರುವರೆಂದೂ ಹೇಳಿದನು. ಹೆಂಡತಿಯ ಚಿಕ್ಕಪ್ಪ ಸಹಾಯಕನಾಗಿದ್ದರೆ ಕಿರಣ ಏನು ಮಾಡುತ್ತಾನೆಂಬ ಪ್ರಶ್ನೆ ಮುಂದಿಟ್ಟೆ. ಆಗ ಇಬ್ಬರ ಹತ್ತಿರವೂ ಜಗಳವಾಡಿ ಹೆಂಡತಿಗೆ ತೌರಿನಲ್ಲೇ ಇನ್ನು ಹೆರಿಗೆ ಮುಗಿಸಿಕೊಂಡು ಬರಲು ತಿಳಿಸುವೆನೆಂದು ಹೇಳಿದನು. ಇನ್ನೊಬ್ಬರ ಸಹಾಯ ಕೇಳುವ ಬದಲು ನೇರವಾಗಿ ತಾನೇ ಅದನ್ನು ಆ ರೀತಿ ಯಾಕೆ ಎದುರಿಸಕೂಡದು ಎಂಬ ಸಲಹೆಗೆ ಅವನು ಒಪ್ಪಿಗೆ ನೀಡಿದ. ಅದೇ ರೀತಿ ಮಾಡಿದ ನಂತರ ಕಿರಣನ ಅಲರ್ಜಿ ಹೊರಟುಹೋಯಿತು.

ಇನ್ನೊಮ್ಮೆ ಕಿರಣನ ಅಲರ್ಜಿ ಹೆಚ್ಚಾಯಿತು. ಇಷ್ಟು ಚಿಕಿತ್ಸೆ ಪಡೆದ ನಂತರ ಪ್ರತಿ ದಿನದ ಆಗುಹೋಗುಗಳ ಮೇಲೆ ಗಮನವಿಡಬೇಕೆಂಬುದು ರೋಗಿಗೆ ತಿಳಿದುಹೋಗಿರುತ್ತದೆ. ಕಿರಣನೇ ನಡೆದ ಘಟನೆಯನ್ನು ವಿವರಿಸಿದ. ಮಧ್ಯರಾತ್ರಿಯಲ್ಲಿ ಏನೋ ಅಚಾತುರ್ಯ ನಡೆದಿದೆಯೆಂದೂ, ಕೂಡಲೆ ಬರಲು ಚಿಕ್ಕಪ್ಪನ ಮನೆಯಿಂದ ಕಿರಣನಿಗೆ ಕರೆ ಬಂದಿತು. ಚಿಕ್ಕಪ್ಪ ಕಂಠಪೂರ್ತಿ ಕುಡಿದು ಯಾರೊಂದಿಗೋ ಹೊಡೆದಾಡುತ್ತಿದ್ದನು. ಕಿರಣ ಚಿಕ್ಕಪ್ಪನನ್ನು ಬಿಡಿಸಿಕೊಂಡು ಅವರ ಮನೆಗೆ ತಲುಪಿಸಿ ಬರುತ್ತಿರಲು ಚಿಕ್ಕಪ್ಪನ ಜೊತೆ ಜಗಳವಾಡುತ್ತಿದ್ದವರು ಗುಂಪುಗೂಡಿ ಬಂದು ಕಿರಣನನ್ನು ರಕ್ತ ಬರುವಂತೆ ಹೊಡೆದರು. ಪೋಲೀಸರಿಗೆ ದೂರು ಕೊಡಲು ಠಾಣೆಗೆ ಹೋದರೆ ಅವರೇ ಇವನಿಗಿಂತ ಮುಂಚೆ ದೂರು ಕೊಟ್ಟಿದ್ದುದರಿಂದ ಕಿರಣನನ್ನೆ ಜೈಲಿನಲ್ಲಿಟ್ಟರು. ಬೆಳಗಿನ ಜಾವದ ಹೊತ್ತಿಗೆ ಪೋಲೀಸರಿಗೆ ನಿಜಾಂಶ ತಿಳಿದ ನಂತರ ಅವನನ್ನು ಬಿಟ್ಟರು. ಚಿಕ್ಕಪ್ಪ ಎಂತಹ ತೊಂದರೆ ಮಾಡಿಕೊಂಡನಲ್ಲ ಮತ್ತು ಆತನಿಂದ ತಾನು ಎಂತಹ ತೊಂದರೆಗೆ ಸಿಲುಕಿದೆನಲ್ಲಾ ಎಂದು ಚಿಕ್ಕಪ್ಪನ ಮೇಲೆ ಅವನಿಗೆ ಎಲ್ಲಿಲ್ಲದ ಕೋಪ ಬಂದಿತು. ಆಗಲೇ ಅವನಿಗೆ ಅಲರ್ಜಿ ಪ್ರಾರಂಭವಾಯಿತು. ನನ್ನ ಹತ್ತಿರ ಕೋಪದಿಂದಲೇ ಆಗಿದ್ದನ್ನೆಲ್ಲಾ ಹೇಳಿದನು. ಮಾತಿನ ಧಾಟಿಯಿಂದ ಅವನು ಕೋಪದಿಂದ ಕುದಿಯುತ್ತಿದ್ದಾನೆಂದು ಸುಲಭವಾಗಿ ಹೇಳಬಹುದಾಗಿತ್ತು. ಎಲ್ಲವನ್ನೂ ಹೊರಗೆಡಹಿದ ಮೇಲೆ ಅವನ ಅಲರ್ಜಿ ಕಡಿಮೆಯಾಯಿತು. ಇದೇ ರೀತಿ ಅಲರ್ಜಿಯುಂಟಾದ ಪ್ರತಿಯೊಂದು ಸಂದರ್ಭವನ್ನೂ ಕೂಲಂಕಷವಾಗಿ ವಿಶ್ಲೇಷಿಸಿದ ನಂತರ ಕಿರಣನಿಗೆ ಹೊರಗೆಡವದೇ ಒಳಗೇ ನುಂಗಿಕೊಂಡ ಕೋಪವೇ ಇದರ ಮೂಲ ಎಂದು ಮನದಟ್ಟಾಯಿತು. ಕೋಪ

ವನ್ನು ನುಂಗಿಸಿಕೊಳ್ಳದೇ ಹೊರಗೆಡಹಲು ಕ್ರಮೇಣ ಕಿರಣ ಕಲಿತನು. ಚರ್ಮದ ವಸ್ತುಗಳು, ಸಾಬೂನು ಮತ್ತು ಟೆರಿಲೀನ್ ಬಟ್ಟೆಗಳನ್ನೆಲ್ಲಾ ಉಪಯೋಗಿಸಿದರೂ ಈಗ ಅವನಿಗೆ ಅಲರ್ಜಿಯಿಲ್ಲ. ಯಾವ ಔಷಧಗಳನ್ನೂ ತೆಗೆದುಕೊಳ್ಳುತ್ತಿಲ್ಲ. ಚಿಕಿತ್ಸೆ ಮುಗಿಸಿ ಎರಡು ವರ್ಷಗಳಾಗಿವೆ. ಆಗಿಂದಾಗ್ಗೆ ತನ್ನ ಪರಿಚಯದವರನ್ನು ನನ್ನ ಬಳಿ ಚಿಕಿತ್ಸೆಗೋಸ್ಕರ ಕಳುಹಿಸುತ್ತಿರುತ್ತಾನೆ. ಅವರ ಮೂಲಕ ತನ್ನ ಕಾಯಿಲೆ ವಾಸಿ ಮಾಡಿರುವುದಕ್ಕೆ ಕೃತಜ್ಞತೆಗಳನ್ನು ಹೇಳಿ ಕಳುಹಿಸುತ್ತಾನೆ. ಅವನ ಚಿಕಿತ್ಸೆಗೆ ಒಟ್ಟು ಹನ್ನೊಂದು ವಾರಗಳು ಹಿಡಿದವು.

ಎಲ್ಲಾ ಅಲರ್ಜಿಗಳ ಮೂಲವೂ ಮಾನಸಿಕವೇ ಎಂಬ ಪ್ರಶ್ನೆಯೇಳುವುದು ಸಹಜ. ಕೆಲವು ಅಲರ್ಜಿಗಳ ಮೂಲ ದೈಹಿಕವಾದರೆ ಇನ್ನು ಕೆಲವು ಅಲರ್ಜಿಗಳ ಮೂಲ ಮಾನಸಿಕವಾಗಿರಲೂಬಹುದು. ಹಾಗಾದರೆ ಅಲರ್ಜಿಯ ಮೂಲ ಯಾವುದು ಎಂದು ಗುರುತಿಸುವುದು ಹೇಗೆ? ಇದು ನಿಜವಾಗಿಯೂ ಬಹಳ ಕಷ್ಟಕರವಾದುದೇ. ಈ ವಿಷಯದಲ್ಲಿ ನುರಿತ ತಜ್ಞರಿಗೂ ಕೆಲವೊಮ್ಮೆ ಕಷ್ಟವಾಗುವುದೆಂದರೆ ಇತರರಿಗೆ ಅದು ಅಸಾಧ್ಯದ ಮಾತೇ ಸರಿ. ನುರಿತ ತಜ್ಞರು ಈ ಮೂಲವನ್ನು ಅಲರ್ಜಿಯ ವಿವರಗಳ ಪರೀಕ್ಷೆ ಮತ್ತು ಪ್ರಯೋಗಶಾಲೆಯ ಪರೀಕ್ಷೆಗಳಿಂದ ತಿಳಿಯಬಹುದು. ಅಲರ್ಜಿ ದೈಹಿಕವಾದಲ್ಲಿ ಸಾಧಾರಣವಾಗಿ ಯಾವುದೋ ನಿಶ್ಚಿತವಾದ ಪದಾರ್ಥಗಳಿಂದುಂಟಾಗಿರುತ್ತದೆ. ಇವು ಒಂದು ರೀತಿಯ ಸಸಾರಜನಕ ಪದಾರ್ಥಗಳು ಮತ್ತು ಇವನ್ನು ಅಲರ್ಜನ್ ಎಂದು ಕರೆಯುತ್ತೇವೆ. ಪ್ರಾಯೋಗಿಕ ಪರೀಕ್ಷೆಗಳಲ್ಲಿ ಪ್ಯಾಚ್, ಸ್ಕ್ರ್ಯಾಚ್ ಮತ್ತು ಇಂಟ್ರಾಡರ್ಮಲ್ ಪರೀಕ್ಷೆಗಳು ಮುಖ್ಯವಾದುವು. ಈ ಪರೀಕ್ಷೆಗಳಲ್ಲಿ ವ್ಯಕ್ತಿಗೆ ಯಾವ ಪದಾರ್ಥಗಳ ಅಲರ್ಜಿಯಿರಬಹುದೆಂದು ತಿಳಿಯಲು ಸಾಧ್ಯ-

ವಾಗುವುದು. ಈ ಪರೀಕ್ಷೆಗಳ ಮೇಲೂ ಮನಸ್ಸು ತನ್ನ ಪ್ರಭಾವವನ್ನು ಬೀರಬಹುದೆಂದು ಇಕೆಮಿ ಮತ್ತು ಇತರರು ತೋರಿಸಿಕೊಟ್ಟಿದ್ದಾರೆ. ಇವರು ಎಂಟು ಮಂದಿಯನ್ನು ತಮ್ಮ ಪ್ರಯೋಗಕ್ಕೆ ಒಳಪಡಿಸಿದರು. ಈ ಎಂಟು ಮಂದಿ ಯಾವುದೋ ಒಂದು ಬಗೆಯ ಎಲೆಗಳಿಗೆ ಖಚಿತವಾದ ಅಲರ್ಜಿಯನ್ನು ತೋರಿಸಿದ್ದರು. ಅವರು ಆ ಎಲೆಗಳನ್ನು ಮುಟ್ಟಿದರೆ ಸಾಕು, ಅಲರ್ಜಿಯುಂಟಾಗುತ್ತಿತ್ತು. ಆದರೆ ಅವರಿಗೆ ಚೆಸ್ಟ್‌ನಟ್ ಎಲೆಗಳಿಗೆ ಅಲರ್ಜಿಯಿರಲಿಲ್ಲ. ಅವರ ಕಣ್ಣಿಗೆ ಬಟ್ಟೆ ಕಟ್ಟಿ ಚೆಸ್ಟ್‌ನಟ್ ಎಲೆಗಳನ್ನು ಮುಟ್ಟಿಸುತ್ತಿದ್ದೇವೆಂದು ಹೇಳಿ ಅಲರ್ಜಿಯಿರುವ ಎಲೆಗಳನ್ನು ಮುಟ್ಟಿಸಿದರು. ಎಂಟು ಮಂದಿಯಲ್ಲಿ ಏಳು ಜನರಿಗೆ ಇದರಿಂದ ಅಲರ್ಜಿ ಉಂಟಾಗಲಿಲ್ಲ. ಅದೇ ಅವರಿಗೆ ತಿಳಿದಂತೆ ಅಲರ್ಜಿಯಿರುವ ಎಲೆಗಳನ್ನು ಮುಟ್ಟಿಸಿದಲ್ಲಿ ಎಂಟು ಮಂದಿಗೂ ಅಲರ್ಜಿಯುಂಟಾಗುತ್ತಿತ್ತು. ಈ ಪ್ರಯೋಗದಿಂದ ಮನಸ್ಸು ಅಲರ್ಜಿಯ ಮೇಲೆ ತನ್ನ ಪ್ರಭಾವವನ್ನು ಎಷ್ಟರ ಮಟ್ಟಿಗೆ ಬೀರಬಲ್ಲದು ಎಂಬುದನ್ನು ಇಕೆಮಿ ಮತ್ತು ಇತರರು ತೋರಿಸಿಕೊಟ್ಟಿದ್ದಾರೆ.

ಅಲರ್ಜಿಯಿಂದ ನರಳುತ್ತಿರುವವರ ಪೈಕಿ ಅನೇಕರಲ್ಲಿ ಯಾವುದೇ ಒಂದು ಪದಾರ್ಥಕ್ಕೆ ಖಚಿತವಾದ ಅಲರ್ಜಿಯಿದೆಯೆಂದು ತಿಳಿದು ಬರುವುದಿಲ್ಲ. ಇಂತಹವರ ಅಲರ್ಜಿಯು ಮಿಹಾಲ ಮಿಚೆಲ್ಸ ಪ್ರಕಾರ ಮಾನಸಿಕವೆಂದು ಹೇಳಬಹುದು. ವಿಟ್‌ಕೋವರ್ ಮತ್ತು ಇಂಗೆಲ್ ಎಂಬಿಬ್ಬರು ಮಾನಸಿಕ ಆಘಾತಗಳಿಗೂ ಅಲರ್ಜಿಗೂ ಇರುವ ಸಂಬಂಧವನ್ನು ಕಂಡು ಹಿಡಿಯಲು ಅಲರ್ಜಿಯಿರುವ ೯೦ ಜನಗಳ ಜೀವನದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ಅದರಲ್ಲಿ ೭೭ ಜನಗಳಲ್ಲಿ ಮಾನಸಿಕ ಆಘಾತದ ನಂತರ ಅಲರ್ಜಿಯುಂಟಾದೆಂದು ಖಚಿತವಾಗಿ ತಿಳಿದುಬಂದಿತು. ಕೋಪ ಮತ್ತು ಕೊರಗುಂಟಾಗುವ ಘಟನೆಗಳಾದಾಗ ಅಲರ್ಜಿ ಹೆಚ್ಚಾಯಿತು.

ಒಟ್ಟಿನಲ್ಲಿ ಮನಸ್ಸು ಒಂದು ಅದ್ಭುತ. ಈ ವಿಷಯದ ಬಗ್ಗೆ ನಮಗೆ ಹೆಚ್ಚಿಗೆ ತಿಳಿದಷ್ಟು ಅದರ ಪ್ರಭಾವ ಇಷ್ಟರ ಮಟ್ಟಿಗಿದೆಯೇ ಎಂದು ವಿಸ್ಮಯಪಡುವಂತಾಗುತ್ತದೆ. ✿

(ಇದು ೧-೧-೧೯೮೦ ರ ಜರ್ನಲ್ ಆಫ್ ಇಂಡಿಯನ್ ಮೆಡಿಕಲ್ ಅಸೋಸಿಯೇಶನ್ ಸಂಪುಟ ೭೪, ನಂ. ೧ ರಲ್ಲಿ ಪ್ರಕಟವಾಗಿದ್ದು, ಅದರ ಸಂಪಾದಕರ ಅನುಮತಿಯನ್ನು ಪಡೆದು ಇಲ್ಲಿ ಪ್ರಕಟಿಸಿದೆ)

---

ಮಹಮದೀಯರು ದಿನಕ್ಕೆ ಅನೇಕ ಬಾರಿ ನಮಾಜು (ಪ್ರಾರ್ಥನೆ) ಮಾಡುತ್ತಾರೆ. ಹಾಗೆ ಮಾಡುವಾಗಲೆಲ್ಲ ತಮ್ಮ ಮುಖ ಮಕ್ಕಾದೆಡೆ ಇರುವಂತೆ ನೋಡಿಕೊಳ್ಳುತ್ತಾರೆ. ಆದರೆ ಪ್ರಮಾಣದಲ್ಲಿದ್ದಾಗ ಹೇಗೆ? ಮಕ್ಕಾ ಯಾವ ದಿಕ್ಕಿಗೆ ಬರುತ್ತದೆ ಎಂಬುದೇ ಅವರಿಗೆ ಸಮಸ್ಯೆಯಾಗಿ ಬಿಡುತ್ತದೆ.

ಈ ಸಮಸ್ಯೆಗೊಂದು ಪರಿಹಾರ ಕಂಡುಹಿಡಿದಿದ್ದಾನೆ, ಮಹಮ್ಮದೀಯನಲ್ಲದ ಸ್ವಿಝರ್‌ಲ್ಯಾಂಡ್ ನಿವಾಸಿ ಜೊಸೆಫ್ ಕಾಮೂ ಎಂಬ ಒಬ್ಬ ಇರಾಕಿ ವ್ಯಾಪಾರಿ. ಆತ ಒಂದು ರಗ್ ಕಂಡುಹಿಡಿದಿದ್ದಾನೆ. ಈ ರಗ್ಗಿನಲ್ಲಿ ಒಂದು ದಿಕ್ಸೂಚಿ ಮತ್ತು ಇತರ ವಿವರಗಳಿವೆ. ಈ ದಿಕ್ಸೂಚಿ ಯಾವ ಯಾವ ದೇಶದಿಂದ ಮಕ್ಕಾ ಯಾವ ದಿಕ್ಕಿಗೆ ಆಗುತ್ತದೆ ಎಂಬುದನ್ನು ತೋರಿಸುತ್ತದೆ. ತನ್ನ ಹೊಸ ಶೋಧದ ಪೇಟೆಂಟ್ ಪಡೆದ ಕಾಮೂ ಇಂಥ ರಗ್ಗುಗಳನ್ನು ತಯಾರಿಸುವ ಒಂದು ಕಾರಖಾನೆ ತೆರೆದಿದ್ದಾನೆ. ಪರ್ಶಿಯನ್ ಅಖಾತ ದೇಶಗಳಲ್ಲಿ ಈ ಬಗ್ಗೆ ಸಾಕಷ್ಟು ಪ್ರಚಾರ ಮಾಡಲು ಹೋದಾಗ ಇಮಾಮರ ಇಮಾಮ ಮೊಹಮ್ಮದ ಅಬ್ದುಲ್ ರೆಹಮಾನ ಬಿಸ್ಸಾರ್ ಎಂಬಾತನಿಂದ ಪ್ರೋತ್ಸಾಹ ಸಿಕ್ಕಿತು. ಮೊದಲ ವರ್ಷದಲ್ಲಿಯೇ ೩೦ ಲಕ್ಷ ರಗ್ಗುಗಳನ್ನು ಮಾರಿದ್ದಾನೆ.

'ನೀವು ಮಹಮ್ಮದೀಯರಲ್ಲ–ಪಕ್ಕಾ ಕೆಥೋಲಿಕ್. ಆದರೂ ಇಂಥ ಶೋಧ ಹೇಗೆ ಸಾಧ್ಯವಾಯಿತು?' ಎಂದು ಯಾರಾದರೂ ಕೇಳಿದರೆ ಆತ, 'ವ್ಯಾಪಾರ ವ್ಯಾಪಾರವೇ ಸ್ವಾಮಿ. ಅದಕ್ಕೆ ಧರ್ಮಗಳ ಭೇದವಿಲ್ಲ' ಎಂದುತ್ತರಿಸುತ್ತಾನೆ.



## ಅವನಿಗೆ 3 ತಿಂಗಳಾದಾಗ, ಹಾಲು ಒಂದೇ ಸಾಕಾಗುವುದಿಲ್ಲ

# ನಿಮ್ಮ ಮಗುವಿಗೆ ಬೇಕು ಫೆರೆಕ್ಸ್

## ಮಗುವಿನ ಆದರ್ಶ ಘನ ಆಹಾರ

### 3 ತಿಂಗಳು—ಘನ ಆಹಾರ ಕೊಡಲು ಸಮಯ.

3 ತಿಂಗಳಾದಾಗ, ಮಗುವಿನ ಬೆಳೆಯುತ್ತಿರುವ ಬೇಡಿಕೆಗಳಿಗೆ ಹಾಲು ಒಂದೇ ಸಾಕಾಗುವದಿಲ್ಲ. ಮಗು ನಲಿದಾಡುತ್ತದೆ ಮತ್ತು ತ್ವರಿತಗತಿಯಿಂದ ಬೆಳೆಯುತ್ತದೆ. ಹಾಲು ಒದಗಿಸುವದಕ್ಕಿಂತ ಹೆಚ್ಚು ಕ್ಯಾಲೊರಿಗಳು ಮತ್ತು ಕಬ್ಬಿಣ ಸತ್ವ ಬೇಕಾಗುತ್ತವೆ. ನಿಮ್ಮ ಮಗುವಿಗೆ ದ್ರವರೂಪಿ ಆಹಾರ ಕಡಿಮೆಗೊಳಿಸುವಂತಹ, ಕೇಂದ್ರೀಕೃತ ರೂಪದಲ್ಲಿ ಹೆಚ್ಚು ಕ್ಯಾಲೊರಿ ಕೊಡುವಂತಹ ಮತ್ತು ಅಗಿದು ತಿನ್ನಲು ಕಲಿಸುವಂತಹ ಘನ ಆಹಾರದ ಅವಶ್ಯಕತೆ ಇರುತ್ತದೆ.

### ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲಿಕ್ಕಾಗಿ ವಿಶೇಷವಾಗಿ ತಯಾರಿಸಿದ ಘನ ಆಹಾರ ಫೆರೆಕ್ಸ್. ಇದರಲ್ಲಿ ಕಾರ್ಬೊಹೈಡ್ರೇಟ್ಸ್, ಫ್ಯಾಟ್ಸ್, ಕ್ಯಾಲ್ಸಿಯಮ್, ಫಾಸ್ಫರಸ್ ಹಾಗೂ ವಿಟಮಿನ್‌ಗಳಿವೆ. ಫೆರೆಕ್ಸ್‌ನಲ್ಲಿ ಮಗುವಿನ ಬೆಳವಣಿಗೆಗೆ ಅಗತ್ಯವಾದ ಕಬ್ಬಿಣ ಸತ್ವವೂ ತುಂಬಿದೆ. ಈ ಕಾರಣಗಳಿಂದ, ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೆರೆಕ್ಸ್ ಆದರ್ಶ ಘನ ಆಹಾರವಾಗಿದೆ.

**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ. ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪಿನೊಂದಿಗೆ ಬರೆಯಿರಿ:

**ಪಿ. ಓ. ಬಾಕ್ಸ್ ನಂ. 19119,**
**(FAR 93 T)**
**ಬೊಂಬಾಯಿ-400 025.**




**ಡಾಕ್ಟರರು ಶಿಫಾರಸು ಮಾಡುತ್ತಾರೆ–ಫೆರೆಕ್ಸ್**
**ಮಗುವಿನ ಆದರ್ಶ ಘನ ಆಹಾರ– ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF-10-163 Kan

# ಅಂಚೆ ಚೀಟಿಯ ಅದ್ಭುತಗಳು

ಎಂ. ಎಂ. ಇನಾಮದಾರ

ಒಂದು ಸೆಂಟ್ ಅಂಚೆ ಚೀಟಿಯ (ಸಾಧಾರಣ ೨೦ಪೈಸೆ ತಿಕೀಟಿನ) ಬೆಲೆ ೬೬ ಲಕ್ಷ ರೂಪಾಯಿಗಳು. ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಗುವುದು ಸ್ವಾಭಾವಿಕ. ಅಮೇರಿಕದಲ್ಲಿ ದಿನಾಂಕ ೬–೪–೧೯೮೦ ರಂದು ೧೮೫೬ ರ ಬ್ರಿಟಿಶ್ ಗಯಾನಾದ ಒಂದು ಸೆಂಟ್ ಅಂಚೆ ಚೀಟಿಯು ಲಿಲಾವಿನಿಂದ ಮಾರಲ್ಪಟ್ಟಿತು. ಅದಕ್ಕೆ ೮.೫೦ ಲಕ್ಷ ಡಾಲರುಗಳು ಅಂದರೆ ಸುಮಾರು ೬೬ ಲಕ್ಷ ರೂಪಾಯಿ ಬೆಲೆ ಬಂದಿತು. ಇದು ಪ್ರಪಂಚದಲ್ಲಿಯೇ ಅತಿ ಹೆಚ್ಚು ಬೆಲೆಯ ಅಂಚೆ ತಿಕೀಟು. ಜಗತ್ತಿನಲ್ಲಿ ಈ ತಿಕೀಟಿನ ಒಂದೇ ಒಂದು ಪ್ರತಿ ಇರುವುದೇ ಅದರ ಬೆಲೆ ಇಷ್ಟೊಂದು ಹೆಗ್ಗಲು ಕಾರಣ. ೧೯೮೦ ರ ಜನವರಿಯಲ್ಲಿ ದಿಲ್ಲಿಯ ಪ್ರಗತಿ ಮೈದಾನದಲ್ಲಿರುವ ರಾಷ್ಟ್ರಗಳ ಸಭಾಗೃಹದಲ್ಲಿ ನಡೆದ ಅಂತಾರಾಷ್ಟ್ರೀಯ ಅಂಚೆ ಚೀಟಿ ಪ್ರದರ್ಶನದಲ್ಲಿ ಇದನ್ನು ಪ್ರದರ್ಶಿಸಲಾಗಿತ್ತು. ಇದನ್ನು ಗುಂಡು ತಾಗಿದರೂ ಅಪಾಯವಾಗದಂತಹ ಗೋಲಾಕಾರದ ಪಾರದರ್ಶಕ ಪೆಟ್ಟಿಗೆಯಲ್ಲಿ ಇಡಲಾಗಿತ್ತು. ಸಶಸ್ತ್ರ ಪೋಲೀಸರು ಇದನ್ನು ೨೪ ಗಂಟೆ ಕಾಯುತ್ತಿದ್ದರು. ಅದರ ಮಾಲಕರು ಅದನ್ನು ಹೊರಗೆ ಒಯ್ಯುವಾಗ ಇಬ್ಬರು ಸಶಸ್ತ್ರ ಕಾವಲುಗಾರರು ಅವರ ಜೊತೆ ಇರುತ್ತಿದ್ದರು. ಈ ಅಂಚೆ ಚೀಟಿಯನ್ನು ಕೆಲವೇ ಪ್ರಮುಖ ದೇಶಗಳ ಅಂಚೆ ಚೀಟಿ ಪ್ರದರ್ಶನದಲ್ಲಿ ಪ್ರದರ್ಶಿಸಲಾಯಿತು. ಅದನ್ನು ಪ್ರದರ್ಶಿಸುವುದೆಂದರೆ, ಆ ದೇಶದ ಅಂಚೆ ಚೀಟಿ ಪ್ರದರ್ಶನಕ್ಕೇ ಒಂದು ದೊಡ್ಡ ಗೌರವ ದೊರೆತ ಹಾಗೆಂದು ಭಾವಿಸಲಾಗುತ್ತಿದೆ. ಇದುವರೆಗೆ ಸ್ವಿಜರ್ಲಂಡ್, ಸ್ಪೇನ್, ಜೆಕೋಸ್ಲಾವಾಕಿಯಾ, ಫ್ರಾನ್ಸ್, ಜಪಾನ್, ಅಮೇರಿಕ ಮತ್ತು ಕೆನಡಾಗಳಲ್ಲಿ ಮಾತ್ರ ಇದನ್ನು ಪ್ರದರ್ಶಿಸಲಾಗಿದ್ದು ಭಾರತವು ಎಂಟನೇ ರಾಷ್ಟ್ರವಾಗಿದೆ.

ಎಪ್ರಿಲ್–೮೦ ರಲ್ಲಿ ಹರಾಜಾಗುವ ಮೊದಲು ಈ ಅಂಚೆ ಚೀಟಿಯ ಮಾಲಕರಾದ ಅಮೇರಿಕೆಯ ಇರ್ವಿನ್ ವಿನ್‌ಬರ್ಗ್ ಎಂಬವರು ೧೯೭೦ ರಲ್ಲಿ ನ್ಯೂಯಾರ್ಕಿನ ಹರಾಜಿನಲ್ಲಿ ೨೮೦೦೦೦ ಡಾಲರುಗಳಿಗೆ (೨೨.೪ ಲಕ್ಷ ರೂಪಾಯಿಗಳಿಗೆ) ಕೊಂಡುಕೊಂಡಿದ್ದರು. ಎಲ್ಲಕ್ಕೂ ಮೊದಲು ಈ ಅಂಚೆ ಚೀಟಿಯನ್ನು ಸಂಗ್ರಹಿಸಿದ ಇಂಗ್ಲಂಡಿನ ಒಬ್ಬ ತರುಣ ಸಂಗ್ರಹಕಾರನಾದ ವಾಹ್ನ್ ಎಂಬವನು ಅದರ ಮಹತ್ವವನ್ನು ಅರಿಯದೇ ಕೇವಲ ೬ ಶಿಲ್ಲಿಂಗುಗಳಿಗೆ ಎನ್. ಆರ್. ಮ್ಯಾಕಿನ್ ಎಂಬುವವರಿಗೆ ಮಾರಿದ್ದನು. ಆ ಮೇಲೆ ಈ ಚೀಟಿ ಪ್ರತಿ ಸಾರೆ ಹಸ್ತಾಂತರವಾದಾಗ ಹೆಚ್ಚು ಹೆಚ್ಚು ಬೆಲೆ ಏರುತ್ತಾ ಹೋಯಿತು. ಮುಂದೆ ಅದು ಜಗತ್ಪ್ರಸಿದ್ಧ ಅಂಚೆ ಚೀಟಿ ಸಂಗ್ರಹಕಾರನಾದ ಫಿಲಿಪ್ ವಿ. ಫೆರಾರಿಯ ಕೈಗೆ ಬಂದಿತು. [illegible]

ರಲ್ಲಿ ಸ್ವಿಟ್ಜರ್ಲೆಂಡಿನಲ್ಲಿ ತೀರಿಕೊಂಡನು. ಇವನ ಅಂಚೆ ಚೀಟಿ ಸಂಗ್ರಹವು ಫ್ರಾನ್ಸಿನಲ್ಲಿತ್ತು. ಆಗ ಮೊದಲನೇ ಮಹಾಯುದ್ಧದ ಕಾಲವಾದ್ದರಿಂದ ಅವನ ಅಂಚೆ ಚೀಟಿ ಸಂಗ್ರಹವು ವೈರಿಯ ಆಸ್ತಿಯೆಂದು ಫ್ರೆಂಚ್ ಸರಕಾರ ಮಾರಾಟ ಮಾಡಿದಾಗ ಇಪ್ಪತ್ತು ಲಕ್ಷ ಡಾಲರು (ಸುಮಾರು ಒಂದೂವರೆ ಕೋಟಿ ರೂಪಾಯಿ) ಸಂಗ್ರಹವಾಯಿತು. ಈ ಅಂಚೆ ಚೀಟಿ ಸಂಗ್ರಹದಲ್ಲಿದ್ದ ಬ್ರಿಟಿಶ್ ಗಯಾನಾ ಸ್ಟಾಂಪನ್ನು ಕೊಂಡುಕೊಳ್ಳಲು ಇಂಗ್ಲೆಂಡಿನ ರಾಜನಾದ ಐದನೇ ಜಾರ್ಜ್ ಬಂದಿದ್ದರು. ಯಾಕೆಂದರೆ ಅವರೇ ಸ್ಥಾಪಿಸಿದ ಇಂಗ್ಲೆಂಡಿನ ರಾಯಲ್ ಫಿಲಿಟೆಲಿಕ್ ಸೊಸೈಟಿಯ ಸಂಗ್ರಹದಲ್ಲಿ ಬ್ರಿಟಿಶ್ ಕಾಮನ್‌ವೆಲ್ತ್ ದೇಶಗಳ ಎಲ್ಲ ಸ್ಟಾಂಪುಗಳೂ ಇದ್ದು, ಇದೊಂದು ಮಾತ್ರ ಇರಲಿಲ್ಲ. ಆದರೆ ಹರಾಜಿನಲ್ಲಿ ಅಮೇರಿಕದ ಆರ್ಥರ್ ಹಿಂದ್ ಎಂಬುವನು ಬ್ರಿಟಿಶ್ ರಾಜನಿಗಿಂತ ಹೆಚ್ಚಿಗೆ ಸವಾಲು ಮಾಡಿ ೩೫ ಸಾವಿರ ಡಾಲರುಗಳಿಗೆ ಇದನ್ನು ಕೊಂಡುಕೊಂಡನು. ಕಳೆದ ಏಪ್ರಿಲ್ ತಿಂಗಳಿನಲ್ಲಿ ೮.೫ ಲಕ್ಷ ಡಾಲರುಗಳಿಗೆ ಇದು ಮಾರಾಟವಾಗಿದ್ದು ಇದನ್ನು ಕೊಂಡುಕೊಂಡವರು ತಮ್ಮ ಹೆಸರನ್ನು ಇನ್ನೂ ಬಹಿರಂಗಪಡಿಸಿಲ್ಲ. ಆದರೆ ಜಗತ್ತಿನಲ್ಲಿ ಅದ್ವಿತೀಯವಾದ ಮತ್ತು ಅಪೂರ್ವವಾದ ಒಂದು ವಸ್ತುವನ್ನು ತನ್ನದಾಗಿಸಿಕೊಂಡ ತೃಪ್ತಿ ಮಾತ್ರ ಅವರಿಗಿದೆ.

ಇನ್ನು ಜಗತ್ತಿನಲ್ಲಿ ಅತಿ ಹೆಚ್ಚು ಬೆಲೆಯ ಎರಡನೆಯ ಅಂಚೆ ಚೀಟಿಯೆಂದರೆ ೧೮೪೭ರಲ್ಲಿ ಬಿಡುಗಡೆಯಾದ ಮಾರಿಶಸ್ ದೇಶದ ಒಂದು ಪೆನ್ನಿ ಹಾಗೂ ಎರಡು ಪೆನ್ನಿ ಟಿಕೇಟುಗಳು. ಇವು ಪ್ರಸಿದ್ಧಿಗೆ ಬರುವುದಕ್ಕೆ ಒಂದು ಘಟನೆ ಕಾರಣ-




ಅತಿ ಹೆಚ್ಚು ಬೆಲೆಯ ಅತ್ಯಪರೂಪದ ಏಕೈಕ ಅಂಚೇ ಚೀಟಿಯನ್ನು ಒಳಗೊಂಡಂತೆ ಗಯಾನಾ ಇತ್ತೀಚೆ ಹೊರಡಿಸಿದ ಐದು ಸೆಂಟುಗಳ ಅಂಚೆ ಚೀಟಿ

ಮಾಡಿತು. ೧೮೪೭ ರ ಸೆಪ್ಟೆಂಬರ್ ೨೧ ರಂದು ಬಿಡುಗಡೆ ಮಾಡಬೇಕೆಂಬ ಕಾರ್ಯಕ್ರಮದ ಪ್ರಕಾರ ಮಾರಿಶಸ್ ದೇಶದ ಗವ್ಹರ್ನರರು ಇಂಗ್ಲೆಂಡಿನ ಒಂದು ಸಂಸ್ಥೆಗೆ ಈ ಅಂಚೆ ಚೀಟಿ ಮುದ್ರಿಸಲು ಆಜ್ಞಾಪಿಸಿದರು. ಈ ಅಂಚೆ ಚೀಟಿಗಳು ಸಕಾಲದಲ್ಲಿ ಬರಲಿಲ್ಲ. ಮಾರಿಶಸ್ ಗವ್ಹರ್ನರರ ಹೆಂಡತಿಗೆ ಹೇಗಾದರೂ ಮಾಡಿ ೨೧-೯-೧೮೪೭ ರಂದೇ ಹೊಸ ಅಂಚೆ ಚೀಟಿಗಳನ್ನು ಅಂಟಿಸಿ ಆಮಂತ್ರಣ ಪತ್ರಿಕೆಗಳನ್ನು ಕಳಿಸಬೇಕಾಗಿತ್ತು. ಆದ್ದರಿಂದ ಒಬ್ಬ ಸ್ಥಾನಿಕ ಕಲಾವಿದನನ್ನು ಕರೆದು ಇದೇ ತರಹದ ಅಂಚೆ ಚೀಟಿಯನ್ನು ತಯಾರಿಸಿ ಮುದ್ರಿಸಲು ಕೇಳಿಕೊಳ್ಳಲಾಯಿತು. ಆ ಪ್ರಕಾರ ಅಂಚೆ ಚೀಟಿಗಳು ನಿರ್ಧಾರವಾದ ದಿನಾಂಕದಂದು ಬಿಡುಗಡೆ ಮಾಡಲ್ಪಟ್ಟವು. ಆದರೆ ಗಡಿಬಿಡಿಯಲ್ಲಿ ಆ ಅಂಚೆ ಚೀಟಿಗಳ ಮೇಲೆ Post paid ಅಂತ ಬರೆಯುವದರ ಬದಲು Post office ಎಂದು ತಪ್ಪಿ ಮುದ್ರಿತವಾಯಿತು. ಈ ತಪ್ಪು ಗಮನಕ್ಕೆ ಬಂದ ಕೂಡಲೇ ಇವುಗಳನ್ನು ಹಿಂತೆಗೆದುಕೊಳ್ಳಲಾಯಿತು. ಈಗ ಜಗತ್ತಿನಲ್ಲಿ ಇವುಗಳಲ್ಲಿ ಕೆಲವೇ ಸ್ಟ್ಯಾಂಪುಗಳು ಲಭ್ಯವಿದ್ದು, ಈ ಘಟನೆಯಿಂದ ಅವುಗಳ ಬೆಲೆ ಹೆಚ್ಚಾಗಿದೆ. ಈ ಎರಡೂ ಅಂಚೆ ಚೀಟಿಗಳನ್ನು ಅಂಟಿಸಿ (ಒಂದು ಪೆನಿ ಹಾಗೂ ಎರಡು ಪೆನ್ಸ್) ೨೧-೯-೧೮೪೭ನೇ ದಿನದ ಮುದ್ರೆಯುಳ್ಳ ಒಂದು ಪಾಕೀಟು ೧೯೬೮ ರಲ್ಲಿ ೩ ಲಕ್ಷ ೮೦ ಸಾವಿರ ಡಾಲರುಗಳಿಗೆ ಮಾರಾಟವಾಯಿತು.

ಇದರ ತರುವಾಯ ಹೆಚ್ಚಿನ ಬೆಲೆ ತಂದದ್ದು ೧೯೧೮ ರಲ್ಲಿ ಬಿಡುಗಡೆಯಾದ ಅಮೇರಿಕದ ೨೪ ಸೆಂಟುಗಳ ಏರ್‌ಮೇಲ್ ತಿಕೀಟು. ಈ ಅಂಚೆ ಚೀಟಿಯ ಮಧ್ಯದಲ್ಲಿ ತೋರಿಸಿದ ವಿಮಾನವು ತಿರುವು ಮುರುವಾಗಿ ಮುದ್ರಿತವಾಗಿತ್ತು. ಇದರಿಂದಾಗಿ ಈ ಅಂಚೆ ಚೀಟಿಯು ೧೫ ಸಾವಿರ ಡಾಲರುಗಳಿಗೆ ಮಾರಾಟವಾಯಿತು.

ಭಾರತ ದೇಶದ ಅಂಚೆ ತಿಕೀಟುಗಳಲ್ಲಿ ಹೆಚ್ಚಿನ ಕಂಡ ತಿಕೀಟುಗಳೆಂದರೆ, ಅರ್ಧ ಆಣೆಯ ಸಿಂಧ ಡಾಕ್ ಕೆಂಪು ತಿಕೀಟುಗಳು. ಇಂಥ ತಿಕೀಟುಗಳು ಈಗ ಎರಡು ಮಾತ್ರ ಉಳಿದಿರುತ್ತವೆಂದು ನಂಬಲಾಗಿದೆ. ಅದರಂತೆಯೇ ತಿರುವು ಮುರುವಾಗಿ ಮುದ್ರಿತವಾದ ಕ್ವೀನ್ ವಿಕ್ಟೋರಿಯಾ ನಾಲ್ಕಾಣೆಯ ತಿಕೀಟುಗಳು ಬಹಳ ಬೆಲೆಯನ್ನು ಕಂಡಿವೆ. ಈಗ ಇಂಥ ತಿಕೀಟಿನ ಬೆಲೆ ಎರಡು ಸಾವಿರ ಪೌಂಡಿಗಿಂತ ಹೆಚ್ಚಿಗಿದೆ.

ಈ ಎಲ್ಲ ಅಂಚೆ ಚೀಟಿಗಳು ಇಂದು ಪ್ರಪಂಚದಲ್ಲಿ ಅಂಚೆ ಚೀಟಿ ಸಂಗ್ರಹದ ವರ್ಧಿಸುತ್ತಿರುವ ಜನಪ್ರಿಯತೆಗೆ ಸಜೀವ ಸಾಕ್ಷಿಯಾಗಿವೆ. ✡



## ಬೆಲ್ಲ

ಬಡವನ ಒಡಲಿಗೆ ಕರಿಗಡಬು ಬ್ಯಾಡೇನ
ಬಾಯಾಗ ನೀರು ಬರತಾವ
ಬಾಯಾಗ ನೀರು ಬರತಾವ । ಬೆಲ್ಲದ
ಧಾರಣಿ ಕೇಳಿ ಉರಿತಾವ

## ಸಕ್ಕರೆ

ಅಕ್ಕರೆಯ ಮಕ್ಕಳು ಅತ್ತರ ಕೋಡಲೇನ!
ಸಕ್ಕರೆಯು ಇಲ್ಲ ಡಬ್ಬ್ಯಾಗ
ಸಕ್ಕರೆಯು ಇಲ್ಲ ಡಬ್ಬ್ಯಾಗ । ನಾ ಹ್ಯಾಂಗ
ಮಾಡಲಿ ಮುಂದಿನ ಹಬ್ಬಾನ

—ಎಂ. ಬಿ. ಗೋಗೇರಿ

# ಪದಾರ್ಥ ಚಿಂತಾಮಣಿ

– ೨೯ –

ನಮ್ಮ ಮಹಿಳೆಯರು ಧರಿಸುವ ಆಭರಣಗಳಲ್ಲಿ **ಓಲೆ**ಗೆ ಬಹಳ ಮಹತ್ವವಿದೆ. ಅದು ಮಾಂಗಲ್ಯದ ಚಿಹ್ನೆ. ಮುತ್ತೈದೆತನಕ್ಕೆ **ಓಲೆ ಭಾಗ್ಯ**ವೆಂದೇ ವಿಶೇಷಣ. ಅದನ್ನು ಕಳಚುವುದೆಂದರೆ ವೈಧವ್ಯ ಬಂತೆಂದೇ ಅರ್ಥ. "ಎನ್ನೋಲೆಯ, ಕಡಗದ ಅಳಿವನೇಂ ನೋಡಿದಪಾ?" ಎಂದು ಪಂಪ ಹೇಳುತ್ತಾನೆ. ಕುಮಾರವ್ಯಾಸ ಪದೇ ಪದೇ "ಹೆಂಡಿರ ಓಲೆ ಕಳಚುವ" ಮಾತಾಡುತ್ತಾನೆ. **ಮುತ್ತಿನೋಲೆ, ರನ್ನದೋಲೆ** ಮೊದಲಾದ ಓಲೆಯ ಪ್ರಭೇದಗಳು ಸಾಹಿತ್ಯದಲ್ಲಿಯೂ ವಾಸ್ತವದಲ್ಲಿಯೂ ದೊರೆಯುತ್ತವೆ. ಹೀಗೆ ಅದು ಇಂದು ಅಕ್ಕಸಾಲಿಗರ ಕೈವಾಡದ ಬೆಲೆ ಬಾಳುವ ಒಡವೆಯಾಗಿದ್ದರೂ ಮೊದಲಲ್ಲಿ ಅದು ಎಂಥ ಬಡವರಿಗೂ ಎಟುಕುವ ಸುಲಭ್ಯ ಪದಾರ್ಥದಿಂದ ತಯಾರಾಗುತ್ತಿತ್ತೆಂಬುದು ಅದರ ಹೆಸರಲ್ಲೇ ಹುದುಗಿದ ತಥ್ಯವಾಗಿದೆ. ಅದು **ತಾಡ**ವೃಕ್ಷ ಅಥವಾ **ತಾಳೇ** ಮರದ ಗರಿ (ತುಳುವಿನಲ್ಲಿ **ಒಲಿ**)ಯಿಂದ ಚಿಕ್ಕ ಗಾಲಿಯಾಕಾರದಲ್ಲಿ ಮಾಡಿದ ಒಡವೆಯಾಗಿ ಪ್ರಾರಂಭವಾದದ್ದು. ಬಂಗಾರ ಮೊದಲಾದ ಬೆಲೆಯುಳ್ಳ ಲೋಹ ಮತ್ತು ಮುತ್ತು ರತ್ನಗಳಿಂದ ಸಮೆದ ಓಲೆಗಳು ಪ್ರಸಾರಕ್ಕೆ ಬಂದ ನಂತರ ಈ ಆಭರಣದ ಮೂಲರೂಪ ಮರೆಯಬಂದಿದ್ದರೂ ಮುತ್ತೈದೆಯರಿಗೆ ಕೊಡುವ ಬಾಗಿನದಲ್ಲಿ ಇಂದಿಗೂ ಕೊಡುವುದು ತಾಳೋಲೆಯ ಓಲೆ ಜೋಡಿಯೇ. ಕೆಲವೇ ದಶಕಗಳ ಹಿಂದೆ ಬಡವರ್ಗಗಳ ಮಹಿಳೆಯರು ನಿಜವಾದ ಓಲೆಗಳನ್ನೇ ಧರಿಸುತ್ತಿದ್ದುದನ್ನು ಕಾಣಬಹುದಾಗಿತ್ತು. ಹಚ್ಚಾಗಿ ಮಲೆಯಾಳಿ ಮಹಿಳೆಯರು ತಮ್ಮ ಕಿವಿ ಹಾಲೆಯಲ್ಲಿ ದೊಡ್ಡ ಗಾಲಿಯಂಥ **ಓಲೆ**ಯನ್ನು ತೊಡುತ್ತಿದ್ದರು. ಅದು ಹಾಲೆಯ ತೂತಿನಲ್ಲಿ ಹೊಗುವಷ್ಟು ದೊಡ್ಡ ರಂಧ್ರವನ್ನು ರೂಪಿಸಿಕೊಳ್ಳುತ್ತಿದ್ದರು. ಅದು ನಿಜವಾಗಿ ಕಿವಿಯಿಂದ ಓಲಾಡುವ ಓಲೆಯೇ ಆಗಿದ್ದು ವಯಸ್ಸಾದವರ ಹಾಲೆಯ ತೂತು ಜೋಲು ಬಿದ್ದು ಹೆಗಲಿಗೆ ಮುಟ್ಟುವಂತಾಗುತ್ತಿತ್ತು!

ಕಿವಿಯಿಂದ **ಓಲಾಡು**ತ್ತಿದ್ದುದರಿಂದ ಅದನ್ನು **ಓಲೆ**ಯೆಂದು ಕರೆದಿರಬಹುದೆಂದೂ ಅದು ತಾಳೊಲೆಯಿಂದಲೇ ಮೂಲತಃ ತಯಾರಾಗುತ್ತಿತ್ತೆಂಬುದು ಅವಶ್ಯವಿಲ್ಲೆಂದೂ ವಾದಿಸಲು ಸಾಧ್ಯವಿದ್ದರೂ ಈ ಆಭರಣದ ಸಂಸ್ಕೃತ ರೂಪ ಹಾಗಲ್ಲವೆಂದೇ ಸಾಕ್ಷಿ ಹೇಳುತ್ತದೆ. ಸಂಸ್ಕೃತದಲ್ಲಿ ಅದಕ್ಕೆ **ತಾಟಂಕ** ಅಥವಾ **ತಾಡಂಕ**ವೆಂದು ಹೆಸರು. ಇದು ಸ್ಪಷ್ಟವಾಗಿ ತಾಳೇ ಮರದ ಸಂಬಂಧವನ್ನು ಉಸುರುವ ಹೆಸರು. **ತಾಡ** ಎಂದರೆ ಸಂಸ್ಕೃತದಲ್ಲಿಯೂ ತಾಳೆಯೇ. ಕಾಳಿದಾಸನದೆಂದು ಹೇಳಲಾದ ಶ್ಯಾಮಲಾ ದಂಡಕದಲ್ಲಿ ಕಾಳೀದೇವಿ "**ತಾಟಂಕ** ಭೂಷಾವಿಶೇಷಾನ್ವಿತೇ" ಎಂದು ಸಂಬೋಧಿತಳಾಗಿದ್ದಾಳೆ.

ಹೀಗೆ ಓಲೆಗರಿಯಿಂದ ಬಹುಶಃ ಊರಿನ ಗುಡಿಗಾರ ಮಾಡಿಕೊಡುತ್ತಿದ್ದ ಈ ಒಡವೆಯ ಹೆಸರು ಬರ ಬರುತ್ತ ಕಿವಿಯ ಹಾಲೆಯಲ್ಲಿ ತೊಡುವ ಹೆಂಗಸರ ಯಾವುದೇ ಲೋಹಾಭರಣಕ್ಕೂ ಅನ್ವಯವಾಯಿತು. ಆದರೂ ಅದು ಅಕ್ಕಸಾಲಿಗನ ಕೈ ಸೇರುವ ಮೊದಲು ಬಹುಕಾಲ ಗುಡಿಗಾರನ ಕೈಚಳಕದ ವಸ್ತುವೇ ಆಗಿತ್ತೆಂದು ತೋರುತ್ತದೆ. ಈಗ ಜನಪ್ರಿಯವಾಗಿರುವ **ಬೆಂಡೋಲೆ**ಯನ್ನು ಚಿನ್ನ, ಮುತ್ತು, ಪುಷ್ಯರಾಗ, ವಜ್ರ, ಕೃತಕ ವಜ್ರ (ಸೀಮೇ ಕಮಲ) ಮೊದಲಾದವುಗಳಿಂದ ತಯಾರಿಸುತ್ತಿದ್ದರೂ ಅದರ ಹೆಸರು ಈ ಅಭರಣವೂ ಆದಿಯಲ್ಲಿ ಸುಲಭ್ಯ ಮೂಲ ವಸ್ತುವಿನಿಂದಲೇ ನಿರ್ಮಿಸಲ್ಪಡುತ್ತಿತ್ತೆಂಬುದನ್ನು ಹೊರಗೆಡಹುತ್ತದೆ. ಅದು ಕಬ್ಬಿನ ಜಾತಿಗೆ ಸೇರಿದ, ಜವುಳು ನೆಲದಲ್ಲಿ ಬೆಳೆಯುವ **ಬೆಂಡಿ**ನಿಂದ ಆಗುತ್ತಿದ್ದುದರಿಂದ ಅದು **ಬೆಂಡೋಲೆ.** ಅದನ್ನು ಮೊದಲು ಬೆಂಡಿನಿಂದ ಬಾಸಿಂಗ ಮೊದಲಾದ ಅಲಂಕಾರ ವಸ್ತುಗಳನ್ನು ತಯಾರಿಸುತ್ತಿದ್ದ ಗುಡಿಗಾರನೇ ತಯಾರಿಸಿ ಬಣ್ಣ ಹಾಕಿ ಕೊಡುತ್ತಿರಬೇಕು. ತಾಳೆ ಓಲೆಯ ಬದಲು ಬೆಂಡಿನಿಂದ ತಯಾರಿಸಿದ ಗುಡಿಗಾರನ ಈ ನವ ... ಲೋಹದ ಓಲೆಗಳಲ್ಲಿ ಅನುಕರಿಸಿರಬೇಕು. —ಷಾವೆಂ.

# ನಾನು ಆಸ್ತ್ಮಾ ಅರ್ಧಷಷ್ಟ್ಯಬ್ದಿ ಆಚರಿಸಲಿದ್ದೇನೆ

**ಲಾಂಗೂಲಾಚಾರ್ಯ**

ಈ ವರ್ಷ ನಾನು ನನ್ನ ಅಸ್ತ್ಮಾ ಅಥವಾ ಗೂರಲುಬ್ಬಸದ ಅರ್ಧಷಷ್ಟ್ಯಬ್ದಿಯನ್ನು ಆಚರಿಸಲು ನಿರ್ಧರಿಸಿದ್ದೇನೆ. ನನಗೆ ಅಸ್ತ್ಮಾ ಪ್ರಾರಂಭವಾಗಿ ಈ ನವಂಬರಿಗೆ ಸರಿಯಾಗಿ ಮೂವತ್ತು ವರ್ಷಗಳು ತುಂಬುತ್ತಿವೆ. ಈ ಸಂದರ್ಭದಲ್ಲಿ ನಾನು ಈ ಮೂವತ್ತು ವರ್ಷಗಳಲ್ಲಿ ನುಂಗಿದ, ಮೂಸಿದ ಮತ್ತು ಚುಚ್ಚಿಸಿಕೊಂಡ ಹೋಮಿಯೋಪಥಿ, ಅಲ್ಲೋಪಥಿ. ಆಯುರ್‌ಪಥಿ ಮೊದಲಾದ ಪಥಿಗಳ ಒಟ್ಟು ೩೭ ಬಗೆಯ ಔಷಧಗಳ ಒಂದು ಪ್ರದರ್ಶನವನ್ನು ಏರ್ಪಡಿಸಬೇಕೆಂದಿದ್ದೇನೆ. ಮತ್ತು ಅಸ್ತ್ಮಾಕ್ಕೆ ನಾನು ಪ್ರಯೋಗಿಸಬೇಕಾದ ರಾಮಬಾಣೋಪಾಯಗಳಾವುವೆಂಬ ಬಗ್ಗೆ ನನಗೆ ವಿವಿಧ ಮಿತ್ರರಿಂದ ಬಂದ ಉಪದೇಶಗಳ ಸಂಗ್ರಹವನ್ನು ಪ್ರಕಟಿಸಬೇಕೆಂದಿದ್ದೇನೆ. ಈ ಉಪಾಯಗಳು ದೀರ್ಘಶ್ವಾಸ ಬಿಡುವುದರಿಂದ ಬೀಡಿ ಸೇದುವ ವರೆಗೆ ಮಂತ್ರ ಹಾಕಿಸಿಕೊಳ್ಳುವುದರಿಂದ ಮೀನು ನುಂಗುವುದರ ವರೆಗೆ ಬಹುಮುಖವಾಗಿವೆ. ಇದೇ ಸಂದರ್ಭದಲ್ಲಿ ನಾನು ಅಸ್ತ್ಮಾಕ್ಕಾಗಿ ಮಧ್ಯರಾತ್ರಿಯಲ್ಲಿ ಕರೆಸಿದ ಒಟ್ಟು ೨೭ ಡಾಕ್ಟರರಿಗೊಂದು ಪಾರ್ಟಿಯನ್ನೂ ಕೊಡಬೇಕೆಂದಿದ್ದೇನೆ.

ನನ್ನ ಯೋಜನೆಯನ್ನು ಕೇಳಿ ನನ್ನ ಹೆಂಡತಿ ಸ್ವಲ್ಪ ಸಿಟ್ಟುಕೊಂಡಳು. "ನನ್ನನ್ನು ಮದುವೆಯಾಗಿ ಮೂವತ್ತೈದು ವರ್ಷಗಳಾದರೂ ನೀವು ಯಾವ ಸಮಾರಂಭವನ್ನೂ ಮಾಡಲಿಲ್ಲ. ಈಗ ಅಸ್ತ್ಮಾಕ್ಕೆ ಅರ್ಧಷಷ್ಟ್ಯಬ್ದಿ ಮಾಡಬೇಕೆನ್ನುತ್ತೀರಿ! ನನಗಿಂತ ಗೂರಲೇ ಮೇಲಾಗಿ ಹೋಯಿತು ನಿಮಗೆ!" ಎಂದು ದೂರಿಕೊಂಡಳು.

"ಪ್ರಿಯೇ! ಸ್ವಲ್ಪ ನ್ಯಾಯಾನ್ಯಾಯ ನೋಡು ನಿನ್ನನ್ನು ಹೊರಗೆ ಹಾಕಲು ನಾನು ಎಂದೂ ಪ್ರಯತ್ನಿಸಲಿಲ್ಲ. ಆದರೆ ಈ ಅಸ್ತ್ಮಾ ನೋಡು. ನಾನು ಎಂಥೆಂಥ ಪ್ರಯೋಗಗಳನ್ನು ಮಾಡಿದರೂ ನನ್ನನ್ನು ಬಿಡದೇ ಈ ವಯಸ್ಸಿನಲ್ಲಿಯೂ ನನ್ನನ್ನು ಸೇವಿಸುತ್ತಿದ್ದಾಳೆ. ನಿಮ್ಮಿಬ್ಬರಲ್ಲಿ ಯಾರ ಪಾತಿವ್ರತ್ಯ ಹೆಚ್ಚು, ನೀನೇ ಹೇಳು. ಸವತಿ ಮತ್ಸರ ಬೇಡ" ಎಂದು ಸಮಾಧಾನ ಹೇಳಿದೆ. ಇದಕ್ಕೆ ಅವಳ ಹೆಣ್ಣು ಬುದ್ಧಿಯಲ್ಲಿಯೂ ಯಾವ ಪ್ರತ್ಯುತ್ತರ ಇರಲಿಲ್ಲ. ಪ್ರಥಮ ಸಲ ನನಗೆ ಅಸ್ತ್ಮಾ ಬಂದದ್ದು ೧೯೪೨ರ ಅಕ್ಟೋಬರ್ ೧೪ರ ರಾತ್ರಿ. ಅಂದಿನಿಂದ ಈ ವರೆಗೂ ಬಂದ ನಾರಿ ವರ್ಷಕ್ಕೆ ಎರಡು ಸಲ ಮೇ–ಜೂನ್ ಮತ್ತು ಅಕ್ಟೊ

ಬರ್–ನವಂಬರಿನಲ್ಲಿ–ತಪ್ಪದೇ ಬಂದು ನನ್ನ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಾ ಇದ್ದಾಳೆ. ಮಳೆ ಬಂದು ಬಿಸಿಲು ಕಾದರೆ ಮತ್ತು ಬಿಸಿಲು ಕಾದು ಮಳೆ ಬಂದರೆ ಅವಳಿಗೆ ನನ್ನನ್ನು ಸೇರುವ ಹಂಬಲ ತಡೆಯುವುದಾಗುವುದಿಲ್ಲ. ಅವಳು ಬರುವ ದಾರಿಗಳು ಹಲವು. ಅವಳು ಕಸ ಗುಡಿಸುವಾಗಿನ ಧೂಳಿನ ಬೆನ್ನೇರಿ ಬರುತ್ತಾಳೆ, ಹಾಲಿನ ಸಂಗಡ ಬರುತ್ತಾಳೆ, ಬಟಾಟೆ ಪಲ್ಯದಲ್ಲಿ ಹೊಕ್ಕು ಟೊಮ್ಯಾಟೋ ಸಾರಿನಲ್ಲಿ ಈಸುತ್ತ ಬರುತ್ತಾಳೆ. ಅವಳಿಂದ ತಪ್ಪಿಸಿಕೊಳ್ಳಬೇಕೆಂದು ನಾನು ಇವೆಲ್ಲವನ್ನೂ ವರ್ಜಿಸಿದರೆ ಬೆಳಗಿನ ಜಾವದ ಮಂಜಿನ ಪರದೆಯ ಹಿಂದೆ ಬಂದುಬಿಡುತ್ತಾಳೆ.

ಎಲ್ಲಾ ನಲ್ಲೆಯರ ಹಾಗೆ ನನ್ನ ಆಸ್ತ್ಮಾದೇವಿ ಲಹರಿಯವಳು. ದೀರ್ಘಕಾಲದ ಒಡನಾಟದಿಂದ ನಾನು ಅವಳ ಅನೇಕ ಸ್ವಭಾವ ವೈಚಿತ್ರ್ಯಗಳನ್ನು ತಿಳಿದುಕೊಂಡಿದ್ದೇನೆ. ಅವಳ ಬೇಕು ಬೇಡಗಳನ್ನು ಅರ್ಥಮಾಡಿಕೊಂಡಿದ್ದೇನೆ. ಉದಾಹರಣೆಗೆ ಮೆಣಸಿನ ಕಾಳೆಂದರೆ ಅವಳಿಗೆ ಬಲು ಸಿಟ್ಟು. ಲವಂಗಕ್ಕೆ ಸ್ವಲ್ಪ ಮಣಿಯುತ್ತಾಳೆ. ತಂಪು ಪದಾರ್ಥ ಅವಳನ್ನು ಉದ್ರಿಕ್ತಗೊಳಿಸುತ್ತದೆ ಇತ್ಯಾದಿ. ಆದರೆ ಅವಳ ಚಿತ್ತ ಹೇಳಲುಬಾರದು. ಒಮ್ಮೊಮ್ಮೆ ಒಂದು ಗುಟುಕು ತಣ್ಣೀರು ಕುಡಿದರೆ



ಸಾಕು, ಅವಳು ಶೀನುಗಳ ಗರ್ಜನೆಯೊಡನೆ, ಸೋರುವ ಮೂಗಿನ ಪ್ರಳಯಧಾರೆಯೊಡನೆ ಬಂದುಬಿಡುತ್ತಾಳೆ. ಮತ್ತೊಮ್ಮೆ ತಟ್ಟೆ ತಟ್ಟೆ ಐಸ್‌ಕ್ರೀಮ್ ತಿಂದು ನಾಲಗೆ ಚಪಲ ತೀರಿಸಿ–ಕೊಂಡ ಮೇಲೆ ಇಂದು ರಾತ್ರಿ ಹಾಸಿಗೆ ಹೊಕ್ಕೊಡನೆ ಉಸಿರು ಕಟ್ಟುವ ಹಾಗೆ ಅಪ್ಪಿಕೊಂಡು ಬಿಡುತ್ತಾಳೆ, ಎಂದು ನಿರೀಕ್ಷಿಸುತ್ತಿರುವಾಗ ಅವಳ ಸುಳಿವೇ ಇಲ್ಲ. ಎಫೆಡ್ರಿನ್ ನುಂಗಿದರೆ ಒಮ್ಮೆ ಸದ್ದಿಲ್ಲದೆ ಹೊರಟುಹೋಗುತ್ತಾಳೆ. ಇನ್ನೊಮ್ಮೆ ಎದೆಯನ್ನೆಲ್ಲಾ ಒಣಗಿಸಿ ಉಸಿರನ್ನೇ ಕಸಿದು–ಕೊಳ್ಳುವಂತೆ ಕತ್ತು ಹಿಸುಕುತ್ತಾಳೆ. ಕೆಲವೊಮ್ಮೆ ಕಿಡಕಿ ತೆರೆದಿಟ್ಟುಕೊಳ್ಳಬೇಡ ಎಂದು ನಾಚುಗುಳಿ ಹೆಣ್ಣಿನಂತೆ ಹಟ ತೊಡುತ್ತಾಳೆ; ಇನ್ನೊಮ್ಮೆ ಮಾನಗೆಟ್ಟವಳ ಹಾಗೆ ಕಿಟಕಿಯನ್ನು ಅಗಲವಾಗಿ ತೆರೆದಿಟ್ಟುಕೊಳ್ಳದಿದ್ದರೆ ನಿನ್ನ ಕತ್ತು ಹಿಸುಕುತ್ತೇನೆನ್ನುತ್ತಾಳೆ.

ಬೆಂಗಳೂರು ಬೆಳಗಾವಿ ಮೊದಲಾದ ಬಕಾರಾದಿ ಹೆಸರುಗಳುಳ್ಳ ಸ್ಥಳಗಳು ಅವಳ ಪ್ರೇಮವನ್ನು ಉದ್ರೇಕಿಸುತ್ತವೆಂದು ನನಗೆ ಸಂಶಯವಿದೆ. ಬೆಂಗಳೂರಿನಲ್ಲೊಮ್ಮೆ ನನ್ನನ್ನು ಹಿಡಿದುಕೊಂಡವಳು ಮದ್ರಾಸ್ ದಾರಿಯಲ್ಲಿ ಕೋಲಾರ ಹತ್ತಿರವಾದೊಡನೆ ತೊರೆದು ಹೋದಳು. ಬೆಳಗಾವಿಯಲ್ಲಿ ಒಮ್ಮೆ ಬಂದ ಡಾಕ್ಟರರನ್ನೆಲ್ಲ ಸೋಲಿಸಿ ಹುಬ್ಬಳ್ಳಿಗೆ ಓಡಿಸಿದಳು. ಧಾರವಾಡದಲ್ಲಿ ಅವಳು ಯಾಕೆ ನನ್ನ ಸುದ್ದಿಗೆ ಬರುವುದಿಲ್ಲವೆಂದು ನನಗಿನ್ನೂ ಅರ್ಥವಾಗಿಲ್ಲ. ಕಾರವಾರದಲ್ಲಿ ಅವಳೇಕೆ ನನ್ನನ್ನು ತಬ್ಬಿಕೊಳ್ಳುತ್ತಾಳೆಂಬುದು ಇನ್ನೂ ಕಡಿಮೆ ಅರ್ಥವಾಗದೆ.

ನಿನ್ನ ಈ ಅನಿಷ್ಟ ಪ್ರಿಯಕರಿಯ ವಿಷಯ ಏನು ಬೋರು ಹೊಡಿಯುತ್ತೀಯಪ್ಪ, ಸಾಕು ಮಾಡು ಅಂತ ನೀವು ಯೋಚಿಸುತ್ತಿದ್ದೀರಿ–ನಾ ಬಲ್ಲೆ. ಆದರೆ ಅದೀಗ ಸ್ವಾರಸ್ಯ. ನಮ್ಮ ಮಕ್ಕಳು ಮೊಮ್ಮಕ್ಕಳ ಲೀಲೆಗಳನ್ನು ಹೇಳಿಕೊಳ್ಳುವ ಹಾಗೆ ನಾವು ನಮ್ಮ ರೋಗಗಳ ಲೀಲೆಗಳನ್ನು ಕೂಡ ಬಾಯಿ ಚಪ್ಪರಿಸಿಕೊಂಡು ಹೇಳಿಕೊಳ್ಳಲು ಕಲಿಯುತ್ತೇವೆ. ಇದಕ್ಕೆ ಇತರರ ಸಹಾನುಭೂತಿಯನ್ನು ಗಳಿಸುವುದೆ ಅಂತರಿಕ ಉದ್ದೇಶವೆಂದು ಹೇಳುವ ಮನೋ–ವಿಜ್ಞಾನಿಗಳ ಮಾತನ್ನು ನಾನು ಒಪ್ಪುವುದಿಲ್ಲ. ಸಹಾನುಭೂತಿಯ ಸಾನ್ನಿಧ್ಯದಲ್ಲಿ ನಾನು ಯಾವಾಗಲೂ ಸಂಕೋಚದಿಂದ ಮುದುಡಿಕೊಳ್ಳುತ್ತೇನೆ. ನನಗೆ ಅಕಸ್ಮಾತ್ತಾಗಿ ಬಂದು ಹೋದ ನ್ಯುಮೋ–ನಿಯ, ಟೈಫಾಯ್ಡ್, ಪ್ಲೂರಸಿ ಮೊದಲಾದವುಗಳನ್ನು ಕುರಿತು ನಾನು ಹೀಗೆ ವರ್ಣಿಸುವುದಿಲ್ಲ.

ವಿಷಯ ಹಾಗಿಲ್ಲ. ಕ್ರಿಸ್ತ ದೇವ ನಿಮ್ಮ ಶತ್ರುವನ್ನು ಪ್ರೀತಿಸಿರಿ ಎಂದು ಬೋಧಿಸಿದ್ದಾನೆ. ಇದು ಒಮ್ಮೆಲೇ ಸಾಧಿಸಲು ಕಷ್ಟವೆಂದು ನಾನು ಯಾಕೆ, ಕ್ರಿಸ್ತನೇ ಒಪ್ಪಬಹುದು. ಆದರೆ ನಿಮ್ಮ ದೀರ್ಘ ಶತ್ರುವನ್ನು ನೀವು ಪ್ರೀತಿಸಲು ಕಲಿತೇ ಕಲಿಯು–ತ್ತೀರಿ. ಒಮ್ಮೆಲೇ ಅವನೇನಾದರೂ ಸತ್ತು ಹೋದರೆ ನೀವು ಬದಲವಾಗಿ ಗಾಬರಿಗೊಳ್ಳುತ್ತೀರಿ. ನಿಮಗೆ ಭಣಭಣ ಎನಿಸತೊಡಗುತ್ತದೆ. ಒಬ್ಬ ಶತ್ರುವಿಗೆ ಬಹಳ ಕಾಲ ಒಗ್ಗಿಕೊಂಡ ಮೇಲೆ ಹೊಸ ಶತ್ರುವಿಗೆ ಒಗ್ಗಿಕೊಳ್ಳುವುದು ತುಂಬಾ ಕಷ್ಟ. ರೋಗಗಳ ವಿಷಯವೂ ಹಾಗೆಯೇ.

ನನ್ನ ಅಸ್ತಮಾ ಅರ್ಧಹಪ್ಪೈಬ್ಬಿಯ ವಿಚಾರ ಸುಳಿದದ್ದೇ ಹೀಗೆ. ಕಳೆದ ಇಷ್ಟೆಲ್ಲಾ ವರ್ಷಗಳಿಂದ ವರ್ಷಕ್ಕೆರಡು ಬಾರಿ ಬಂದು ಹೋಗುತ್ತಿದ್ದ ಅಸ್ತಮಾವನ್ನು ಈ ಸಲದ ನಾಡ ಹಬ್ಬದ ಕಾಲದಲ್ಲಿಯೂ

ನಾನು ನಿರೀಕ್ಷಿಸುತ್ತಿದ್ದೆ. ಆದರೆ ಅದು ಬರುವ ಲಕ್ಷಣವೇ ಕಾಣಿಸಲಿಲ್ಲ. ನಮ್ಮ ಜೋಯಿಸರೊಮ್ಮೆ ಹೇಳಿದ್ದರು, ಕೆಲವು ದೀರ್ಘ ರೋಗಗಳು ಮೂವತ್ತು ವರ್ಷಗಳ ನಂತರ ಬಿಟ್ಟು ಹೋಗುವುದುಂಟು, ಏಕೆಂದರೆ ಮೂವತ್ತು ವರ್ಷಗಳಲ್ಲಿ ಶನಿ ರಾಶಿಚಕ್ರದಲ್ಲಿ ಒಂದು ಪ್ರದಕ್ಷಿಣೆ ಮುಗಿಸಿರುತ್ತಾನೆ ಅಂತ. ಅದು ನೆನಪಾಗಿ ಅಸ್ತ್ಮಾ ನನ್ನನ್ನು ತೊರೆದು ಹೋಗಿರಬಹುದೇ ಎಂದು ಸಂಶಯವಾಯಿತು. ಈ ಅಸ್ತ್ಮಾ ಸೀಜನ್ನಿಗಾಗಿ ನಾನು ಅಣಿಗೊಳಿಸಿಟ್ಟಿದ್ದ ಜೇಟ್, ಎಫಿಡ್ರಿನ್, ಕಾರ್ಟಿಕೊಸ್ಟಿರಾಯ್ಡ್ ಗುಳಿಗೆಗಳು, ಸ್ವಚ್ಛಗೊಳಿಸಿ ತಯಾರಿಸಿಟ್ಟಿದ್ದ ಇನ್‌ಹೇಲರ್, ಹೊಸದಾಗಿ ತಂದಿಟ್ಟಿದ್ದ ಬಿಸಿನೀರ ಚೀಲ. ಆಯುರ್ವೇದದ ದಶಮೂಲಾರಿಷ್ಟ, ದ್ರಾಕ್ಷಾರಿಷ್ಟ, ಅಗಸ್ತ್ಯ ರಸಾಯನ ಇವೆಲ್ಲ ವ್ಯರ್ಥವಾಗುವವೇ? ಈ ಮೂವತ್ತು ವರ್ಷಗಳಲ್ಲಿ ನಾನು ಅಸ್ತ್ಮಾ ಚಿಕಿತ್ಸೆಗಾಗಿ ಖರ್ಚು ಮಾಡಿದ್ದ ಹಣವನ್ನೆಲ್ಲ ಲೆಕ್ಕ ಮಾಡಿದೆ. ಐದು ಸಾವಿರದ ಚಿಲ್ಲರೆ ಆಗಿತ್ತು. ಆ ಮೇಲೆ ಒಮ್ಮಿಂದೊಮ್ಮೆಲೇ ನನ್ನ ಹೆಂಡತಿಗೆ ಇದೇ ಅವಧಿಯಲ್ಲಿ ನಾನು ತಂದುಕೊಟ್ಟ ಸೀರೆಗಳ ಬೆಲೆ ಇದಕ್ಕಿಂತ ಸುಮಾರು ಕಡಿಮೆಯಾಗಿದೆ ಎಂಬ ಅರಿವು ಬಂತು. ಇಷ್ಟು ಖರ್ಚು ಮಾಡಿ ಅದನ್ನು ಸಾಕಿದ ಮೇಲೆ ಅದು ನನ್ನನ್ನು ಬಿಟ್ಟುಹೋಯಿತೇ? ನಾನು ಈ ಯೋಚನೆಯಿಂದ ಕಣ್ಣೀರು ಸುರಿಸಿದೆ ಎಂದು ಹೇಳಿದರೆ ಸ್ವಲ್ಪ ಅತಿಶಯೋಕ್ತಿಯಾದೀತು. ಆದರೆ ಖಂಡಿತವಾಗಿ ನನಗೆ ಏನನ್ನೋ ಕಳೆದುಕೊಂಡ ಹಾಗೆ ಅನಿಸಿತು. ನನ್ನ ಮಿತ್ರರೂ ಹಿತೈಷಿಗಳೂ ಅಸ್ತ್ಮಾದ ಗುಣಗಳನ್ನು ಬಣ್ಣಿಸಿದ್ದು ನೆನಪಾಯಿತು. ಒಬ್ಬರು ಅಸ್ತ್ಮಾ ಇದ್ದವರಿಗೆ ಆಯುಷ್ಯ ಹೆಚ್ಚು ಅಂದಿದ್ದರು. ಇದು ನನಗಿಂತ ನನ್ನ ವಿಮಾ ತೆಗೆದುಕೊಂಡ ಕಂಪನಿಗೆ ಹೆಚ್ಚು ಸುವಾರ್ತೆಯಾಗಿತ್ತಾದ್ದರಿಂದ ನಾನೇನೂ ಉಬ್ಬಲಿಲ್ಲ. ಅಸ್ತ್ಮಾ ಬಲು ತ್ರಾಸದ ಕಾಯಿಲೆಯೇನೋ ನಿಜ. ಆದರೆ ಅಸ್ತ್ಮಾ ಇದ್ದವರಿಗೆ ಕ್ಷಯರೋಗ ಬರುವುದಿಲ್ಲ ಎಂದು ಇನ್ನೊಬ್ಬರು ಆಶ್ವಾಸನ ನೀಡಿದ್ದನ್ನು ನೆನೆದುಕೊಂಡಾಗ ನನಗಿನ್ನು ಕ್ಷಯರೋಗ ಬಂದೀತೆ, ಈ ವಯಸ್ಸಿನಲ್ಲಿ ಹೊಸ ರೋಗದೊಡನೆ ಒಗತನ ನನಗೆ ಸಾಧ್ಯವಾದೀತೆ ಎಂದು ಯೋಚನೆಗೆ ಬಿದ್ದೆ.

ಮತ್ತೊಂದು ವಿಷಯ ನನ್ನ ವಿಷಾದವನ್ನು ಭಯದ ರೂಪಕ್ಕೆ ತಿರುಗಿಸಿತು. ಪ್ರತಿ ಅಸ್ತ್ಮಾ ಸೀಜನ್ನಿನಲ್ಲಿ ಉಲ್ಬಣಿಸಿದ ಉಬ್ಬಸದಿಂದ ಸಾವಿನ ದವಡೆಯನ್ನು ಹೊಕ್ಕಂತಾಗಿ ನನ್ನ ಹೆಂಡತಿಯ ಆರೈಕೆಯಿಂದ ನಾನು ಮರಳಿ ಬರುತ್ತಿದ್ದೆ. ಇಂತಹ ಪ್ರತಿಯೊಂದು ಹೋರಾಟದೊಡನೆ ನನ್ನ ಹೆಂಡತಿಗೆ ನಾನು ಹೆಚ್ಚು ಜೀವದ ಗಂಟೆನಿಸುತ್ತ ಬಂದಿದ್ದೇನೆ. ಅಸ್ತ್ಮಾ ಹೋಗಿಬಿಟ್ಟರೆ ನನ್ನ ಹೆಂಡತಿಯ ದೃಷ್ಟಿಯಲ್ಲಿ ನನ್ನ ಮೌಲ್ಯ ಕಡಿಮೆಯಾದೀತೆ?

ಆದರೆ ಇಲ್ಲ. ನನ್ನ ಶಂಕೆಗಳು ನಿರಾಧಾರವಾಗಿದ್ದವು. ನಿನ್ನೆ ರಾತ್ರಿ ನಾನು ಅಕಸ್ಮಾತ್ತಾಗಿ ಶೀನ ತೊಡಗಿದೆ. ಬೆಳಗಿನ ಜಾವದಲ್ಲಿ, ಚೌಡಯ್ಯನವರ ಹದಿನೇಳು (ಅಥವಾ ಹತ್ತೊಂಭತ್ತೊ?) ತಂತಿಯ ಪಿಟೀಲಿನ ಮೇಲೆ ಲಘುವಾಗಿ ಕಮಾನು ಆಡಿಸಿದಂತೆ ನನ್ನೆದೆಯಿಂದ ನಾದಸಂದೋಹ ಮೊರಹೊಮ್ಮಲಾರಂಭಿಸಿತು. ಐದು ಗಂಟೆಗೆ ಒಣ ಕೆಮ್ಮು ಪ್ರಾರಂಭವಾಯಿತು. ನನ್ನ ಹೆಂಡತಿ ಗಡಬಡಿಸಿ ಎದ್ದು ಬಿಸಿ ಬಿಸಿ ಕಾಫಿ ಮಾಡಿ ತಂದಳು. ನನ್ನ ತಿದಿಯೊತ್ತುವ ಎದೆಯನ್ನು ಪೂಸುತ್ತ, "ಬಹಳ ತ್ರಾಸಾಗುತ್ತಾ? ಡಾಕ್ಟರರಿಗೆ ಹೇಳಿ ಕಳಿಸಲಾ?" ಎಂದು ಕೇಳಿದಳು.

ನಾನು ಅಸ್ತ್ಮಾ ಅರ್ಧಷಷ್ಟ್ಯಬ್ದಿ ಆಚರಿಸಲು ನಿರ್ಧರಿಸಿದೆ. 

# ಹರಿಣಾಭಿಸರಣ

ರೇಣುಕ

ಗದ್ದೆಯ ಕೆಲಸವನ್ನು ಮುಗಿಸಿಕೊಂಡು ಬಂದ ಪಾಕ್ ಆ ದಿನ ತನ್ನ ಮೊದಲ ಹೆಂಡತಿ ಪಗ್ ಲುಗ್ಗಳ ಮನೆಯಲ್ಲುಳಿದುಕೊಂಡ. ಆ ರಾತ್ರಿ ಅವಳ ಮಗ್ಗುಲಲ್ಲಿ ಮಲಗಿದ್ದಾಗ ಅವಳು ಅವನಿಗೆ ಕೇಳುವಂತೆ ತನಗೆ ತಾನೆ, "ನಾನೊಬ್ಬ ಮೂರ್ಖ ಹೆಂಗಸು. ಯಾರಿಗೂ ಬುದ್ಧಿ ಹೇಳುವಷ್ಟು ಬುದ್ಧಿವಂತಳಲ್ಲ" ಎಂದು ರಾಗವೆಳೆದಾಗ ಪಾಕನ ಕಿವಿಗಳು ಚುರುಕಾದವು. ಯಾವುದೋ ಮುಖ್ಯ ವಿಚಾರವನ್ನು ಪ್ರಸ್ತಾಪಿಸಲೆಂದೇ ಪಗ್ ಲುಗ್ ಈ ರೀತಿ ರಾಗವೆಳೆಯುತ್ತಾಳೆಂಬುದು ಅವನಿಗೆ ಗೊತ್ತಿತ್ತು.

"ನನಗೆ ಮೇರುವಿನಂಥ ತಮ್ಮನಿದ್ದಿದ್ದರೆ ಬಡೊಯಿಂಗ್ ನಗರಕ್ಕೆ ಹೋಗಿ ಪುರಿ(ರಾಜವಾಸ)ಯಲ್ಲಿ ಬಿದ್ದಿರಲು ಬಿಡುತ್ತಿರಲಿಲ್ಲ. ಗದ್ದೆಯಲ್ಲಿ ಕೆಲಸ ಮಾಡಲು ಹಚ್ಚುತ್ತಿದ್ದೆ. ಇಲ್ಲದಿದ್ದರೆ ಅಗಡು ದನವನ್ನು ಗೂಟಕ್ಕೆ ಕಟ್ಟಿ ಹಾಕುವಂತೆ ಕಟ್ಟಿ ಹಾಕುತ್ತಿದ್ದೆನಲ್ಲದೆ ಪುರಿಯಲ್ಲಿ ತನ್ನ ಕಾಲವನ್ನು ವ್ಯರ್ಥವಾಗಿ ಕಳೆಯಲು ಬಿಡುತ್ತಿರಲಿಲ್ಲ. ನನಗೊಬ್ಬ ತಮ್ಮನಿದ್ದಿದ್ದರೆ ಹಾಗೆಯೇ ನಾನು ಮಾಡುತ್ತಿದ್ದುದು" ಎಂದಳು ಮೂದಲಿಕೆಯ ಧ್ವನಿಯಲ್ಲಿ.

ಪಗ್ ಲುಗ್ ತನಗೆ ತಾನೇ ಹೇಳಿಕೊಂಡಂತೆ ಅವಳೇನೋ ಮೂರ್ಖ ಹೆಂಗಸಲ್ಲವೆಂಬ ವಿಷಯ ಪಾಕನಿಗೆ ಗೊತ್ತಿತ್ತು. ಒಂದು ಸಲ ಗದ್ದೆಯ ಕೆಲಸಕ್ಕೆ ಜೋಡಿ ಎಮ್ಮೆಗಳನ್ನು ಕೊಳ್ಳಲು ಹಣ ಕಮ್ಮಿ ಬಂದಾಗ ಪಗ್ ಲುಗ್ ತನ್ನ ಉಳಿತಾಯದ ಹಣವನ್ನು ಕೊಟ್ಟಿದ್ದಳು. ಗದ್ದೆ ಮತ್ತು ಮನೆ ಕೆಲಸದ ಕಾರುಬಾರೆಲ್ಲ ಅವಳದೇ. ಊರಿನಲ್ಲಿ ಏನೇ ಹೊಸ ಘಟನೆ ಜರುಗಿದರೂ ಅದು ಪಗ್ ಲುಗ್ಗಳಿಗೆ ಮೊದಲು ಗೊತ್ತಾಗುತ್ತಿತ್ತು. ಪಗ್ ಲುಗ್ ಬುದ್ಧಿವಂತ ಹೆಂಗಸೆಂದು ಪಾಕನಿಗೆ ಹೆಮ್ಮೆಯಿತ್ತು.

ಆದರೆ ಅವಳಲ್ಲಿ ಪಾಕ್ ಕಂಡ ಕೊರತೆಯೆಂದರೆ ಅವಳು ಸಾಲಾಗಿ ನಾಲ್ಕು ಹೆಣ್ಣುಗಳನ್ನು ಹಡೆದಿದ್ದುದು. ಅದಕ್ಕೋಸ್ಕರ ಅವನು ಸರನ್ನಳನ್ನು ವಿವಾಹವಾಗಿ ಸಯಾಂಗನನ್ನು ಪಡೆದಿದ್ದ. ತನ್ನ ಹಳೆಯ ಮನೆಯ ಪಕ್ಕದಲ್ಲಿಯೇ ಅವಳಿಗೊಂದು ಹೊಸ ಮನೆಯನ್ನು ಕಟ್ಟಿಕೊಟ್ಟು ಪ್ರತ್ಯೇಕವಾಗಿರಿಸಿದ್ದ.

ಪಗ್ ಲುಗ್ ಏನಾದರೂ ಹೇಳಬೇಕಾದರೆ ನೇರವಾಗಿ ಹೇಳುವುದಿಲ್ಲ. ಸುತ್ತಿ ಬಳಸಿಯೇ ಮುಖ್ಯ ವಿಷಯಕ್ಕೆ ಬರುವುದು. ಮೈದುನ ಮೇರುವಿನ ಬಗ್ಗೆ ಹೆಂಡತಿ ರಾಗವೆಳೆದಾಗ ಸಹಜವಾಗಿ ಪಾಕನ ಮನಸ್ಸಿನಲ್ಲಿ ಆತಂಕ ಮೂಡಿ, "ನೀನು ಹೇಳುವುದಾದರೂ ಏನು ?" ಎಂದು ಆಕೆಯ ಬೆನ್ನು ಸವರುತ್ತ ಮೃದುವಾಗಿ ಕೇಳಿದ.

"ಪುರಿಯಲ್ಲಿ ಕಟ್ಟಿಸಿರುವ ಹೊಸ ದೇವಾಲಯದ ಮರದ ಕದಗಳ ಮೇಲೆ ಚಿತ್ರಗಳನ್ನು ಕೆತ್ತಲು ಮೇರುವನ್ನು ಕೆಲಸಕ್ಕಿಟ್ಟುಕೊಂಡಿರುವುದು ನನ-ಗಿಂತಲೂ ನಿನಗೆ ಚೆನ್ನಾಗಿ ಗೊತ್ತು" ಎಂದು ಹೇಳಿ

ಸ್ವಲ್ಪ ಹೊತ್ತು ಪಾಕನ ಮುಖವನ್ನೇ ದಿಟ್ಟಿಸುತ್ತಿದ್ದು, "ಕೆತ್ತನೆಯ ಕೆಲಸ ಮುಗಿದು ಬಹಳ ದಿನಗಳಾದುವು. ಪುರಿಯಲ್ಲಿ ಇನ್ನೇನು ಕೆಲಸ ಅವನಿಗೆ?" ಎಂದು ಹೇಳಿದಾಗ ಪಾಕ್ ಕೆಲ ಕ್ಷಣ ಮೌನವಾಗಿ ಯೋಚಿಸಲಾರಂಭಿಸಿದ.

ಪಗ್ ಲುಗ್ ಮತ್ತೆ, "ಪುರಿಯಲ್ಲಿರುವ ಆ ಹೆಂಗಸಿಗಾಗಿ ಅವನು ಅಲ್ಲಿಯೇ ತಳವೂರಿರುವುದು. ಬೇರೇತಕ್ಕೂ ಅಲ್ಲ," ಎಂದಷ್ಟೇ ಹೇಳಿ ಸುಮ್ಮನಾದಳು.

"ಪುರಿಯಿಂದ ಆ ಗುಲಾಮ ಹುಡುಗಿಯನ್ನು ಮನೆಗೆ ಕರೆತಂದು ಅವಳನ್ನು ಮದುವೆಯಾಗುತ್ತೇನೆಂದು ಮೇರು ಹೇಳಿದಾಗ ತಾನೆ ನಾವು ಯೋಚನೆ ಮಾಡಬೇಕಾದದ್ದು. ಅದಕ್ಕೆ ಈಗಿನಿಂದಲೇ ಏಕೆ ಚಿಂತಿಸಬೇಕು ?" ಎಂದು ಪೆದ್ದು ಪೆದ್ದಾಗಿ ಪಾಕ್ ಹೇಳಿದಾಗ, "ನಾನು ಹೇಳುತ್ತಿರುವುದು ಗುಲಾಮ ಹುಡುಗಿಯ ವಿಚಾರವಲ್ಲ" ಎಂದು ಅಸಹನೆಯಿಂದ ಸಿಡಿದ ಪಗ್ ಲುಗ್ ಮುಂದೆ ತನಗೆ ಮಾತನಾಡಲು ಇಷ್ಟವಿಲ್ಲವೆಂಬಂತೆ ಪಾಕನಿಗೆ ಬೆನ್ನು ಮಾಡಿ ಮಗ್ಗುಲಾಗಿ ಅಂದಿನ ಮಾತಿಗೆ ವಿರಾಮ ಹಾಕಿದಳು.

ಪಗ್ ಲುಗ್ಗಳ ಮಾತಿನಿಂದ ತನ್ನ ಸಂಸಾರದ ಮೇಲೆ ಅಶುಭ ಘಟನೆಯೊಂದು ಸಂಭವಿಸುವ ಮುನ್ಸೂಚನೆಯ ಶಂಕಾಪೀಡಿತನಾಗಿ ಚಿಂತಿಸುತ್ತಿದ್ದಂತೆ ಪಾಕ್ ನಿದ್ರೆಯಲ್ಲಿ ಮುಳುಗಿದ.

ಮುಂದೆ ಒಂದು ದಿನ ಪುರಿಯಿಂದ ಮೇರು ಮನೆಗೆ ಬಂದಾಗ, ಪಾಕ್ ಅವನನ್ನು ಕುರಿತು, "ತಮ್ಮ, ಮೇರು. ನೀನು ಬಡಗಿಯೊಂದಿಗೆ ಹೋಗಿ ಪುರಿಯಲ್ಲಿ ಕಾಲ ಕಳೆಯುವ ಬದಲು ಗದ್ದೆಯಲ್ಲಿ ಪೈರು ಹಾಕಲು ನನಗೆ ಸಹಾಯ ಮಾಡು" ಎಂದು ನುಡಿದಾಗ ಮೇರುವಿನ ಮುಖ ಮುದುಡಿತು. ಅಣ್ಣನನ್ನು ಬಹಳವಾಗಿ ಪ್ರೀತಿಸುತ್ತಿದ್ದ ಅವನು ಮಾರುತ್ತರಿಸಲಿಲ್ಲ.

ಕೆಲವು ದಿನಗಳನ್ನು ಮೇರು ಮನೆಯಲ್ಲಿಯೇ ಕಳೆದ. ಕೋಳಿ ಕೂಗುವುದಕ್ಕೆ ಮೊದಲೆದ್ದು ಗದ್ದೆಯಲ್ಲಿ ಪೈರು ನೆಡಲು ಅಣ್ಣನಿಗೆ ಸಹಾಯ ಮಾಡುತ್ತಿದ್ದ. ಆದರೆ ಅವನು ಮೊದಲಿನಂತೆ ಹರ್ಷಚಿತ್ತನಾಗಿರುತ್ತಿರಲಿಲ್ಲ. ಗದ್ದೆಯ ಕೆಲಸದಿಂದ ಬಿಡುವಾದಾಗ, ಮನೆಯ ಒಂದು ಮೂಲೆಯಲ್ಲಿ ಕುಳಿತು ಮೌನವಾಗಿ ಮರದ ತುಂಡೊಂದನ್ನು ಉಳಿಯಿಂದ ಕೆತ್ತುತ್ತಿರುತ್ತಿದ್ದ. ಯಾರೊಡನೆಯೂ ಮಾತನಾಡದೆ ಅಂತರ್ಮುಖಿಯಾಗಿರುತ್ತಿದ್ದ. ಆಗಾಗ, ಅವನ ಪಕ್ಕದಲ್ಲಿ ಕುಳಿತು ಮುದಿ ತಂದೆ ಮೇರು ಮರದ ತುಂಡನ್ನು ಕೆತ್ತುತ್ತಿರುವುದನ್ನು ತನ್ನ ಮಂಜಾದ ಕಣ್ಣುಗಳಿಂದ ದಿಟ್ಟಿಸುತ್ತಿದ್ದ. ಉಳಿಯ ಪೆಟ್ಟಿನಿಂದ ಮರದ ತುಂಡು ಕ್ರಮೇಣ ಅಸ್ಪಷ್ಟ ಆಕಾರವನ್ನು ತಳೆಯುತ್ತಿತ್ತು. ಆದರೆ ಮೇರು ಕೆತ್ತುತ್ತಿರುವುದೇನೆಂಬುದು ಮುದುಕನಿಗೆ ಸರಿಯಾಗಿ ತಿಳಿಯುತ್ತಿರಲಿಲ್ಲ.

"ಆ ಮೂಲೆಯಲ್ಲಿ ಕುಳಿತು ನಿಮ್ಮ ತಮ್ಮ ಕೆತ್ತುತ್ತಿರುವುದೇನೆಂಬುದು ಗೊತ್ತೆ?" ಪಾಕನನ್ನು ಕುರಿತು ಪಗ್ ಲುಗ್ ಕೇಳಿದಳು.

"ಇಲ್ಲ, ಏನಾದರೂ ಉಪಯುಕ್ತವಾದ ಕೆಲಸವನ್ನು ಮಾಡುತ್ತಿರಬೇಕು," ಕೋಳಿಗಳಿಗೆ ಕಾಳುಗಳನ್ನು ಚೆಲ್ಲುತ್ತ ಹೆಂಡತಿಗೆ ಉತ್ತರ ಕೊಟ್ಟ ಪಾಕ್.

"ಕಡವೆಯೊಂದು ಜಿಂಕೆಯ ಮೇಲೆ ಹತ್ತುತ್ತಿರುವ ಮರದ ಬೊಂಬೆ" ಎಂದು ಹೇಳಿದ ಅವಳ ತುಟಿಗಳು ಒಂದನ್ನೊಂದು ಅದುಮಿಕೊಂಡು ಸೆಟೆದುಕೊಂಡವು. ತನ್ನ ಸವತಿ ಸರನ್ ಆ ಮನೆಗೆ ಬಂದಾಗಿನಿಂದಲೂ ಅವಳು ಮಾತನಾಡಿದ ಮೇಲೆ ತುಟಿಗಳನ್ನು ಸೆಟೆಸಿಕೊಳ್ಳುವ ರೂಢಿ ಮಾಡಿಕೊಂಡಿದ್ದಳು.

ಪಾಕ್ ಮೇರುವಿನ ಬಳಿ ಹೋಗಿ ಅವನು ಕೆತ್ತುತ್ತಿದ್ದ ಮರದ ತುಂಡನ್ನು ಗಮನಿಸಿದ. ಕಡವೆಯೊಂದು ಹರಿಣಿಯೊಡನೆ ರತಿಕೂಟದಲ್ಲಿರುವ ಬೊಂಬೆಯೆಂದು ನೋಡಿದೊಡನೆ ತಿಳಿಯುತ್ತಿತ್ತು. ಇನ್ನೂ ಬೊಂಬೆಗೆ ಅಂತಿಮ ಮೆರಗು ಕೊಟ್ಟಿರಲಿಲ್ಲ. ಈ ರೀತಿಯ ಅಪೂರ್ವ ಬೊಂಬೆಯನ್ನು ಹಿಂದೆ ಯಾವಾಗಲೂ ಪಾಕ್ ಕಂಡಿರಲಿಲ್ಲ. ಅವನಿಗೆ ನಗುವನ್ನು ತಡೆಯಲಾಗಲಿಲ್ಲ. ಪಕಪಕನೆ ನಕ್ಕುಬಿಟ್ಟ. ಬೊಂಬೆಯನ್ನು ನೋಡುತ್ತಿದ್ದಂತೆ ಅವನಿಗೆ ತನ್ನ ರಕ್ತದ ಚಲನೆ ತೀವ್ರಗೊಂಡಂತೆ ಭಾಸವಾಯಿತು.

"ಮೇರು, ಈ ಬೊಂಬೆಯನ್ನು ಯಾರಿಗಾಗಿ ಮಾಡುತ್ತಿದ್ದೀಯ ?" ಎಂದು ಪಾಕ್ ಕೇಳಿದ.

"ಯಾರಿಗಾಗಿಯೂ ಅಲ್ಲ, ನನಗಾಗಿಯೆ. ಹೀಗೇ

ಕಾಲ ಕಳೆಯಲು," ಎಂದು ತಲೆ ಎತ್ತದೆ ಬೊಂಬೆಗೆ ಮೆರುಗು ಕೊಡುತ್ತ ಉತ್ತರಿಸಿದ ಮೇರು.

ಪಾಕನು ಪೆಗ್ ಲುಗ್ಗಳ ಬಳಿ ಹೋಗಿ, "ಅದು ಕಡವೆ ಜಿಂಕೆಯೊಂದರೊಡನೆ ಕೂಟನಲ್ಲಿ ಪರತಿರುವ ಬೊಂಬೆ. ಹಿಂದೆ ಎಲ್ಲೂ ಈ ರೀತಿಯ ಕೆತ್ತನೆಯನ್ನು ನಾನು ನೋಡಿಲ್ಲ. ನನಗೆ ಬಹಳ ಹಿಡಿಸಿತು. ಅದರಲ್ಲೇನು ತಪ್ಪು ಕಂಡೆ ಪೆಣ್ಣೆ ನೀನು?" ಎಂದು ಕೇಳಿದ.

"ನಿಮ್ಮ ತಮ್ಮನ ಯೋಚನೆ ಯಾವ ದಾರಿ ಹಿಡಿದಿದೆಯೆಂದು ತೋರಿಸುತ್ತಿದೆ ಅದು" ಎಂದು ಬಿರುಸಾಗಿ ಹೇಳಿ ತನ್ನ ಚಿಕ್ಕ ಮಗಳು ಕ್ಲೆಪೋನಳನ್ನು ಎತ್ತಿಕೊಂಡು ಮನೆಯೊಳಗೆ ನಡೆದಳು. ಆಗ ಪಾಕ್ ಸನಿಹದಲ್ಲಿ ಸಯಾಂಗ



ನನ್ನೆತ್ತಿಕೊಂಡು ಕುಳಿತಿದ್ದ ಕಿರಿಯ ಹೆಂಡತಿ ಸರನ್ನಳೆಡೆಗೆ ಗಾಬರಿಯ ನೋಟವನ್ನು ಬೀರಿದ. ಅವಳು ಗಂಡನ ದಿಗ್ಭ್ರಮೆ ಹಿಡಿದ ಮುಖವನ್ನು ಕಂಡು ಪಕಪಕನೆ ನಕ್ಕಳು.

"ಆ ಹೆಣ್ಣಿನ ಮಾತಿನ ಮರ್ಮವೇನು?" ತಬ್ಬಿಬ್ಬಾಗಿ ಪಾಕ್ ಸರನ್ನಳನ್ನು ಕೇಳಿದ.

"ನಿನ್ನ ಚಿಕ್ಕ ತಮ್ಮ ಬೆಚ್ಚನೆಯ ಕನಸುಗಳನ್ನು ಕಾಣುತ್ತಿರುವಂತಿದೆ" ಎಂದು ವಿಚಿತ್ರ ನಗೆಯನ್ನು ಬೀರಿದಳು ಸರನ್.

ಮುಂದೆ ಕೆಲವು ದಿನಗಳಲ್ಲಿ ಗದ್ದೆಯ ಕೆಲಸ ಮುಗಿಯಿತು. ಮೇದು ಗದ್ದೆಯಲ್ಲಿ ಬೆಳೆದಿದ್ದ ಅಲಂಗ್–ಅಲಂಗ್ ಕಳೆಯನ್ನು ಕೀಳುವುದರಲ್ಲಿ ಅಣ್ಣನಿಗೆ ನೆರವಾದ. ಮತ್ತೆ ಒಂದು ಹದ ಮಳೆಯಾಗುವವರೆಗೂ ಗದ್ದೆಯ ಕೆಲಸಕ್ಕೆ ಬಿಡುವು. ಆಗ ಮೇರು ಬಡೆಯೊಂದಿಗೆ ಹೋಗಿ ಪುರಿಯಲ್ಲಿ ಎರಡು ವಾರಗಳ ಕಾಲ ನೆಲೆಸಿದ.

ಈ ಅವಧಿಯಲ್ಲಿ, ಒಂದು ದಿನ, ಪಾಕನು ತನ್ನ ತಂದೆಯೊಂದಿಗೆ ಬಂದು ತನ್ನನ್ನು ಕಾಣಬೇಕೆಂದು ಪುಂಗವನಿಂದ (ರಾಜನ ಕಾರಭಾರಿ) ಕರೆ ಬಂದಿತು. ಅದರಂತೆ ಪುಂಗವನನ್ನು ಕಾಣಲು ಆತ ತಂದೆಯೊಂದಿಗೆ ಸಯೊನಾರಿಗೆ ಹೊರಟ. ಹಿಂದಿನ ರಾತ್ರಿಯ ಮಳೆಯಿಂದಾಗಿ ಅವರು ನಡೆಯುತ್ತಿದ್ದ ಗದ್ದೆಯ ಬದು ಜಾರುತ್ತಿತ್ತು. ತಂದೆಯನ್ನು ಕುರಿತು "ನಮ್ಮನ್ನು ಪುಂಗವ ಏಕೆ ಕರೆ ಕಳುಹಿಸಿರಬಹುದು?" ಎಂದು ಕೇಳಿದಾಗ ಮುದುಕ ಮೌನವಾಗಿ ತನಗೇನೂ ತಿಳಿಯದೆಂಬಂತೆ ಭುಜವನ್ನು ಕುಣಿಸಿದ.

"ರಾಜ ಅಲಿಟ್ ಮತ್ತೊಂದು ತುಂಡು ಗದ್ದೆಯನ್ನು ನಮಗೆ ಬಳುವಳಿಯಾಗಿ ಕೊಡಲು ನಮ್ಮನ್ನು ಕರೆಸಿರಬಹುದೇನೋ. ಪಗ್ ಲುಗ್ಗಳಿಗೆ ಪುರಿಯ ಗುಲಾಮ ಹುಡುಗಿಯೊಬ್ಬಳು ಸಂತೆಯಲ್ಲಿ ಸಿಕ್ಕಾಗ ಹೇಳಿದಳಂತೆ. ರಾಜರು ತಮ್ಮ ಬೇರೆ ಹೆಂಡಿರೊಡನೆ ಇರುವುದಕ್ಕಿಂತ ಹೆಚ್ಚಾಗಿ ನಮ್ಮ ತಂಗಿ ಲಂಬೋನಳೊಂದಿಗೆ ಹೆಚ್ಚು ಕಾಲ ಇರುತ್ತಾರಂತೆ. ಅವಳನ್ನು ಕಂಡರೆ ಅವರಿಗೆ ಬಹಳ ಪ್ರೀತಿಯಂತೆ." ಪಾಕ್ ಆಸೆಯ ಗೋಪುರವನ್ನು ಕಟ್ಟುತ್ತ ತಂದೆಯೊಡನೆ ನುಡಿದಾಗ, ಮುದುಕ ತಲೆಯಲ್ಲಾಡಿಸಿ, "ಈ ದಿನ ಸೋಮವಾರ. ದುರದೃಷ್ಟಕರ ದಿನ. ಅಧಿಕಾರಿಗಳನ್ನು ಕಾಣಲು ಈ ದಿನ ಅಮಂಗಲಕರ" ಎಂದು ಚುಟುಕಾಗಿ ಉತ್ತರಿಸಿದ. ಅವನ ದನಿ ನೀರಸವಾಗಿತ್ತು.

ಲಂಬೋನ ಪಾಕನ ತಂಗಿ. ಒಳ್ಳೆಯ ನೃತ್ಯಗಾತಿ, ಚೆಲುವೆ. ಒಂದು ದಿನ ರಜ್ಜಾನ (ರಾಜನ) ಅಂತಃಪುರದ ಕಾರಭಾರಿ ಅನಕ್ ಗುರುಂಗ್ ಭೀಮನು ಪಾಕನ ತಂದೆಯ ಬಳಿಗೆ ಬಂದು, ರಜ್ಜಾನನ ಮನಸ್ಸು ಲಂಬೋನಳ ಮೇಲೆ ಹಾದಿರುವ ಸುದ್ದಿಯನ್ನು ತಿಳಿಸಿದ. ಅವಳನ್ನು ವಿವಾಹವಾಗುವ ರಜ್ಜಾನನ ಬಯಕೆಯನ್ನು ಅರುಹಿದ. ಅದನ್ನು ಕೇಳಿ ಪಾಕನ ಮನೆಯಲ್ಲಿ ಸಂಭ್ರಮವೋ ಸಂಭ್ರಮ. ಲಂಬೋನಳ ಭಾಗ್ಯದ ಬಾಗಿಲು ತೆರೆಯಿತೆಂದು ಎಲ್ಲರೂ ಹಿಗ್ಗಿದರು. ಪುರಿಯಲ್ಲಿ ಅವಳು ತೊಡಲಿರುವ ಬೆಲೆ ಬಾಳುವ ಆಭರಣ, ಉಡುಗೆ ತೊಡುಗೆಗಳನ್ನು ಮನದಲ್ಲಿ ನೆನೆದ ಅವಳ ಗೆಳತಿಯರು ಮತ್ಸರಪಡತೊಡಗಿದರು. ಆದರೆ ಲಂಬೋನಳ ಮನಸ್ಸಿನಲ್ಲಿ ಏನಿದ್ದಿತೆಂಬುದನ್ನು ಯಾರೂ ತಿಳಿಯಲು ಹೋಗಲಿಲ್ಲ.

ಒಂದು ದಿನ ಲಂಬೋನಳು ಪುರಿಯಲ್ಲಿ ರಜ್ಜಾನ ಪಟ್ಟದ ಕತ್ತಿಗೆ ವಿವಾಹ ಮಾಡಲ್ಪಟ್ಟು ಅವನ ನೂರಾರು ಹೆಂಡಿರಲ್ಲೊಬ್ಬಳಾಗಿ ತನ್ನ ತವರಿನ ಸಂಬಂಧವನ್ನು ಕಡಿದುಕೊಂಡಳು. ಸ್ವತಃ ಬಂದು ಲಂಬೋನಳ ಕೊರಳಿಗೆ ತಾಳಿ ಕಟ್ಟಲು ರಜ್ಜಾನಿಗೆ ಬಿಡುವಿರಲಿಲ್ಲವಂತೆ. ಅವನ ಪಟ್ಟದ ಕತ್ತಿಗೆ ಅವಳನ್ನು ಮದುವೆ ಮಾಡಿ ಕೊಡುವಾಗ ತನ್ನ ಅಚ್ಚುಮೆಚ್ಚಿನ ಹುಂಜದ ಕಾಳಗವನ್ನು ನೋಡುವುದರಲ್ಲಿ ಆತ ಮಗ್ನನಾಗಿದ್ದನಂತೆ.

ಸಯೊನಾರಿನಲ್ಲಿ ಪುಂಗವನನ್ನು ತಂದೆ ಮಕ್ಕಳಿಬ್ಬರು ಬಂದು ಕಂಡಾಗ ಅವನು ಅವರನ್ನು ಎಲ್ಲಿಲ್ಲದ ಗೌರವದಿಂದ ಕಂಡ. ಅವನ ಉಪಚಾರ ಇವರಿಗೆ ಅತಿಯಾಗಿ ಅಸಹಜವಾಗಿ ಕಂಡಿತು. ಪುಂಗವ ತನ್ನ ಆಸನದಲ್ಲಿ ಕುಳಿತಾಗ ಇವರಿಬ್ಬರೂ ಅವನ ಮುಂದೆ ಕೆಳಗೆ ಕುಳಿತರು. ಮಳೆ ಬೆಳೆಯ ಮತ್ತು ಮನೆಯವರ ಬಗ್ಗೆ ವಿಚಾರಿಸುತ್ತ ನುತ್ತ ಬಳಸಿ ಮಾತನಾಡುತ್ತಿದ್ದ

ಪುಂಗವ ಅವರನ್ನು ಕರೆಸಿದ ಮುಖ್ಯ ವಿಷಯಕ್ಕೆ ಬರಲು ಏಕೋ ಹಿಂದೆಗೆಯುತ್ತಿದ್ದಂತೆ ತೋರು ತ್ತಿತ್ತು.

ಪಾಕನಿಗೂ ಮತ್ತು ತಂದೆಗೂ 'ಸಿರ್ರಿ'(ಹೊಗೆ ಸೊಪ್ಪು)ಯನ್ನು ತಂದು ಕೊಡುವಂತೆ ಪುಂಗವ ಸೇವಕನಿಗೆ ಸೂಚನೆ ಕೊಟ್ಟ. ತಮ್ಮ ಮುಂದೆ ತಟ್ಟೆಯಲ್ಲಿ ತಂದಿತ್ತ ಸಿರ್ರಿಯನ್ನು ಮುರಿದು ಬಾಯಿಗೆ ಹಾಕಿಕೊಂಡು ಸಂಕೋಚದಿಂದಲೇ ಜಗಿಯತೊಡಗಿದರು. ಮುಖ್ಯ ವಿಷಯಕ್ಕೆ ಬರಲು ಪುಂಗವನಿಗೆ ತಡವಾಯಿತು. ಕಾರಣ ವೃದ್ಧಾಪ್ಯದಿಂದ ಬಾಗಿದ್ದ ಪಾಕನ ತಂದೆಗೆ ತಿಳಿಸಬೇಕಾದ ವಿಷಯ ಸಂತೋಷಕರವಾದು ದಾಗಿರಲಿಲ್ಲ.

"ತಾತ" ಎಂದು ಪುಂಗವ ಗೌರವದಿಂದ ಸಂಬೋಧಿಸಿದಾಗ ಮುದುಕನ ಮುಖದ ಮೇಲೆ ಮುಗುಳ್ನಗೆ ಮೂಡಿತು. ರಾಜನ ಕಾರಭಾರಿ ಯಾದ ಪುಂಗವ ತನ್ನನ್ನು ಆ ರೀತಿ ಕರೆದದ್ದು ಆಪ್ಯಾಯಮಾನವಾಗಿ ಕಂಡಿತು. ಪುಂಗವ ಮುಂದುವರೆಸಿದ: "ನಿನ್ನ ಮಗ ಮೋರು ಒಂದು ತಪ್ಪು ಮಾಡಿದ್ದಾನೆ. ಅದಕ್ಕೆ ಅವನನ್ನು ಶಿಕ್ಷಿಸಲೇ ಬೇಕಾಗಿದೆ."

ಸಿರ್ರಿಯನ್ನು ಜಗಿಯುತ್ತಿದ್ದ ಅವರ ದವಡೆಗಳು ಸ್ಥಗಿತಗೊಂಡವು. ಪಾಕನ ತಂದೆ ಪುಂಗವನನ್ನು ದಿಟ್ಟಿಸಿ ನೋಡಲಾರದೆ ತಲೆ ಕೆಳಗೆ ಹಾಕಿದ. ಪ್ರಾಯದಲ್ಲಿ ರಜ್ಞಾನ ಸೇವೆಯಲ್ಲಿದ್ದಾಗ ಅವನು ತನ್ನ ಮೇಲಿನ ಅಧಿಕಾರಿಯನ್ನು ಎಂದೂ ನೇರವಾಗಿ ದಿಟ್ಟಿಸಿ ನೋಡುತ್ತಿರಲಿಲ್ಲ.

"ನಿನ್ನ ಮಗ ಮೋರು ರಜ್ಞಾ ಅಲಿಟ್ಟರ ಪತ್ನಿ ಯನ್ನು ಅನುಚಿತವಾದ ರೀತಿಯಲ್ಲಿ ಕಣ್ಣೆತ್ತಿ ನೋಡಿದ್ದಾನೆ" ಎಂದ. ಕೆಲಪ್ರ ಕ್ಷಣ ತಡೆದು ಮತ್ತೆ, "ಹಾಗೆಂದರೇನೆಂದು ನಿನಗೆ ಅರ್ಥವಾಗಬಹುದು" ಎಂದು ಪುಂಗವ ತಡೆದು ತಡೆದು ಹೇಳಿದ. ಮುದುಕ ಪುಂಗವನಿಗೆ ಉತ್ತರಿಸುವ ಮೊದಲು ಸಿರ್ರಿಯನ್ನು ಮೆದ್ದು ಕೆಂಪಾಗಿದ್ದ ನಾಲಿಗೆಯಿಂದ




"ಬಹಳ ದಣಿದು ಸಾಕಾಗಿ ಬಂದಿದ್ದೀರಾ... ತಗೊಳ್ಳಿ ಶರಬತ್ತು—"

"ಬಹಳ ಬೇಸರವಾಗಿದೇರೀ... ಸ್ವಲ್ಪ ಕಾಫೀ ಮಾಡಿ ಕೊಡ್ತೀರಾ...!!?"

ಎರಡು ಸಾರಿ ತುಟಿಯನ್ನು ಸವರಿಕೊಂಡು, "ಹಾಗಾದರೆ, ಮೇರು ಸಾಯಲೇಬೇಕೇನು?" ಎಂದು ಕ್ಷೀಣವಾಗಿ ಕಂಪಿಸುವ ಕಂಠದಿಂದ ನುಡಿದ.

"ನಮ್ಮ ರಜ್ಜಾ ಅಲಿಟ್ ಉದಾರ ಹೃದಯದವರು. ನಿಮ್ಮ ಮಗನ ತಪ್ಪನ್ನು ತೀವ್ರವಾಗಿ ತೆಗೆದುಕೊಳ್ಳದೆ ಅವನಿಗೆ ಜೀವದಾನ ಮಾಡಿದ್ದಾರೆ" ಎಂದು ಗಂಭೀರವಾಗಿ ನುಡಿದ.

ಪಾಕನಿಗೆ ತಲೆ ತಿರುಗಲಾರಂಭಿಸಿತು. ಯಾರೋ ಭಾರಿ ಪೆಟ್ಟನ್ನು ತಲೆಯ ಮೇಲೆ ಇಕ್ಕಿದ ಅನುಭವವಾಯಿತು, ಪುಂಗವನ ಮಾತನ್ನು ಕೇಳಿ.

"ಲೊಂಬೊಕ್ ಅಥವ ನುಸಪೆನಿಡ ದ್ವೀಪಕ್ಕೆ ಮೇರುವನ್ನು ಗಡೀಪಾರು ಮಾಡಲಾಗುವುದೆ?" ಗದ್ಗದ ಕಂಠದಿಂದ ತಡೆ ತಡೆದು ಕೇಳಿದ ಪಾಕ್. ಸಾಧಾರಣವಾಗಿ ಆ ರೀತಿಯ ತಪ್ಪು ಮಾಡಿದವರಿಗೆ ಗಡಿಪಾರು ಶಿಕ್ಷೆಯನ್ನು ವಿಧಿಸುತ್ತಿದ್ದುದು ಆಗ ರೂಢಿಯಲ್ಲಿತ್ತು.

"ಗಡೀಪಾರು ಶಿಕ್ಷೆ ಉತ್ತಮ ಕುಲದವರಿಗೆ ಮಾತ್ರ ವಿಧಿಸಲೆಂಬುದನ್ನು ನೀನು ತಿಳಿದಿರಬೇಕು" ಪುಂಗವ ಪಾಕನೆಡೆಗೆ ನೋಡದೆ ಅಲಕ್ಷ್ಯದಿಂದ ನುಡಿದ. ಕ್ಷಣಕಾಲ ಮೌನ ಆವರಿಸಿತು. ಪಾಕನಿಗೆ ಮೇರುವಿನೊಂದಿಗೆ ಕಳೆದ ಬಾಲ್ಯದ ದಿನಗಳು ನೆನಪಿಗೆ ಬಂದವು. ತಾನು ಚಿಕ್ಕವನಿದ್ದಾಗ ಮೇರುವನ್ನು ಬೆನ್ನ ಮೇಲೆ ಹೊತ್ತು ತಿರುಗುತ್ತಿದ್ದ. ಜೊತೆಯಾಗಿ ಹಸುಗಳನ್ನು ಬಾತುಕೋಳಿಗಳನ್ನು ಮೇಯಿಸುತ್ತಿದ್ದರು; ಗಾಳಿಯ ಪಟವನ್ನು ಹಾರಿಸುವಾಗ ಮೇರುವಿನ ಗಾಳಿಯ ಪಟ ಇತರ ಹುಡುಗರ ಪಟಗಳಿಗಿಂತಲೂ ಎತ್ತರದಲ್ಲಿ ಹಾರುತ್ತಿತ್ತು. ಅವನ ನೆನಪಿನ ಪರದೆಯ ಮೇಲೆ ಅಂತಹ ಹಲವಾರು ದೃಶ್ಯಗಳ ಮೆರವಣಿಗೆಯೇ ಸಾಗಿತು.

"ನಾಳೆ ಸೂರ್ಯೋದಯವಾದ ಗಂಟೆಯೊಳಗಾಗಿ ಶಿಕ್ಷೆಯನ್ನು ವಿಧಿಸಲಾಗುವುದೆಂಬುದನ್ನು ನಿಮಗೆ ತಿಳಿಸುವುದಕ್ಕಾಗಿ ಹೇಳಿ ಕಳುಹಿಸಿದೆ. ನಾಳೆ ಬಡೆಯೊಂಗಿಗೆ ಹೋಗಿ ಪುರಿಯಿಂದ ನಿನ್ನ ತಮ್ಮನನ್ನು ಕರೆದುಕೊಂಡು ಹೋಗು. ನಿಮ್ಮ ಅಗತ್ಯ ಅವನಿಗೆ ಬಹಳವಾಗಿರುತ್ತದೆ" ದಿಗಿಲು ಮತ್ತು ದುಃಖದಿಂದ ಕಂದಿದ ಮುಖದ ಅವರಿಬ್ಬರನ್ನು ನೋಡಿ ಪುಂಗವ ಮತ್ತೆ "ನಿಮ್ಮ ಸಂಸಾರದ ಮೇಲೆ ಬಂದೆರಗಿರುವ ಈ ಆಘಾತವನ್ನು ನೋಡಿ ನನಗೆ ಬಹಳ ದುಃಖವಾಗಿದೆ. ಮೇರು ಮಾಡಿದ ಅಪರಾಧ ಎಲ್ಲರೂ ಮಾಡುವಂತಹುದೆ! ರಜ್ಜಾ ಅಲಿಟ್ಟರ ಪತ್ನಿ ಬರ್ನಿಸ್ ಅತಿ ಸುಂದರಿಯಾದ ಹೆಂಗಸು. ಗಂಡಸರು ಅಂತಹ ರೂಪವತಿಯರ ಬಳಿ ಸಂಯಮದಿಂದ ವರ್ತಿಸುವುದು ಬಹು ಅಪರೂಪದ ಸಂಗತಿ. ಅವರ ರೂಪದ ಜಾಲಕ್ಕೆ ಬಹು ಬೇಗ ಸಿಲುಕಿಕೊಳ್ಳುತ್ತಾರೆ. ಮೇರುವೂ ಬರ್ನಿಸಳ ಬಲೆಗೆ ಸಿಕ್ಕಿಬಿದ್ದಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ನಮ್ಮ ರಜ್ಜಾ ಅಲಿಟ್ ತನ್ನ ಉದಾರ ಗುಣದಿಂದ ಮೇರುವಿಗೆ ಜೀವದಾನ ಮಾಡಿದರೂ ರಜ್ಜಾನ ಹೆಂಡತಿಯನ್ನು ಕಣ್ಣೆತ್ತಿ ನೋಡಿದ ಅಪರಾಧಕ್ಕಾಗಿ ರಾಜ ಮರ್ಯಾದೆ ಮೇರುವಿನ ಕಣ್ಣುಗಳನ್ನು ತಪ್ಪು ಕಾಣಿಕೆಯಾಗಿ ಕೇಳುತ್ತದೆ" ಎಂದು ನುಡಿದ.

ಪಾಕ್ ಗಂಟಲನ್ನು ಸರಿಪಡಿಸಿಕೊಂಡು ಪುಂಗವನನ್ನು ಕುರಿತು, "ಆ ಹೆಂಗಸಿಗೆ ಏನಾಯಿತು?" ಎಂದು ಕೇಳಿದ.

"ಅವಳು ಉತ್ತಮ ಕುಲದವಳಾದ್ದರಿಂದ ರಜ್ಜಾ ಅವಳನ್ನು ತ್ಯಜಿಸಿ ಗಡೀಪಾರು ಮಾಡಲು ಆಜ್ಞೆ ಇತ್ತಿದ್ದಾನೆ," ಪುಂಗವ ಗಂಭೀರವಾಗಿ ಹೇಳಿದ.

ಪಾಕ್ ತಂದೆಯೊಂದಿಗೆ ಮೌನವಾಗಿ ಕುಳಿತಿದ್ದ. ಜಗಿಯುತ್ತಿದ್ದ ಸಿರ್ಹಿ ಆ ಸಮಯದಲ್ಲಿ ಅಷ್ಟು ರುಚಿಯೆನಿಸಲಿಲ್ಲ ಅವರಿಗೆ. ಮುದುಕ ಎದ್ದು ನಿಲ್ಲಲು ಪುಂಗವ ನೆರವಾದ. ತನ್ನೆರಡೂ ಕೈಗಳನ್ನು ಮುದುಕನ ಹೆಗಲ ಮೇಲಿಟ್ಟು ಆ ಮೂಲಕ ತನ್ನ ಸಹಾನುಭೂತಿಯನ್ನು ಸೂಚಿಸಿದ. ಪಾಕ್ ತಂದೆಯ ಕಡೆ ತಿರುಗಿ ನೋಡಿದಾಗ ಮುದುಕನ ಕಣ್ಣಿನಿಂದ ದೊಡ್ಡ ಹನಿಗಳೆರಡು ಬತ್ತಿದ ಕೆನ್ನೆಯ ಮೇಲೆ ಉರುಳುದನ್ನು ಕಂಡ. ಇದಕ್ಕಿದ್ದಂತೆ ಅವನ ಗಂಟಲಿನಲ್ಲಿ ಅವ್ಯಕ್ತವಾದ ನೋವುಂಟಾಗಿ ಬಾಯಲ್ಲಿ ಕೆಟ್ಟ ವಾಸನೆ ಬಂದಂತೆ ಭಾಸವಾಯಿತು.

ಕಮಾಸ್‌ಸಾರಿಯಲ್ಲಿನ ತಮ್ಮ ಮನೆಗೆ ಹೋಗುವ ಹಾದಿಯಲ್ಲಿ ಒಂದು ಮಾತನ್ನೂ ಆಡದೆ ಇಬ್ಬರೂ ಮುಂದುವರಿದರು. ಪೆದಂಡ [illegible] (ರಾಜಗುರು) ಇಡುಬಗು ಸರಾಯಿಯ ಮನೆಯ ಮುಂದೆ ಹಾದು ಹೋಗುವಾಗ ಮುದುಕ

ಪಾಕನನ್ನು ಕುರಿತು, "ನನ್ನ ಗೆಳೆಯ ಪೆಡಂಡನ ಮನೆಗೆ ಹೋಗಿ ಸ್ವಲ್ಪ ಹೊತ್ತು ಮಾತನಾಡಿಕೊಂಡುಬರುತ್ತೇನೆ" ಎಂದು ಹೇಳಿ ನಡೆದ. ಹಾದಿಯಲ್ಲಿ ತನ್ನನ್ನು ಮಾತನಾಡಿಸಿದ ಗುರುತಿನವರಿಗೆ ಮಾರುತ್ತರ ಕೊಡುವುದನ್ನೂ ಮರೆತು ದುಃಖದಿಂದ ಕುರುಡನಾಗಿ ಪಾಕ್ ನಡೆಯುತ್ತಿದ್ದ.

ಸರನಳ ಮನೆಯ ಮೆಟ್ಟಿಲೇರಿ ಕುಳಿತು ತನ್ನ ಮಗ ಸಮಾಂಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡ. ಇಬ್ಬರು ಹೆಂಡತಿಯರೂ ಚಿಕ್ಕ ಹೆಣ್ಣು ಮಕ್ಕಳು ಅವನನ್ನು ಸುತ್ತುವರಿದರು. ಪಾಕ್ ಸ್ವಲ್ಪ ಹೊತ್ತು ಸುಮ್ಮನಿದ್ದು, "ನನ್ನ ತಮ್ಮ ಮೋರು ನಾಳೆ ತನ್ನ ಕಣ್ಣುಗಳನ್ನು ಕಳೆದುಕೊಂಡು ಕುರುಡನಾಗಿ ಮನೆಗೆ ಬರುತ್ತಾನೆ" ಎಂದು ಗದ್ಗದ ಕಂಠದಿಂದ ನುಡಿದ. "ಮನೆಯ ಮೂಡಲದ ಕೋಣೆಯನ್ನು ಖಾಲಿ ಮಾಡಿ ಮಂಚದ ಮೇಲೆ ಮೆತ್ತೆಗಳನ್ನು ಹಾಕಿ ಹಾಸಿಗೆಯನ್ನು ಅಣಿಗೊಳಿಸಿ, ಸರನ, ನಿನ್ನ ಮನೆಯ ಪರದೆಗಳನ್ನು ಒಗೆದು ತಂದು ಹಾಸಿಗೆಯ ಬಳಿ ಇಡು" ಎಂದು ಹೆಂಡಂದಿರಿಗೆ ಸೂಚನೆ ಕೊಟ್ಟ. ಒಡನೆ ಆ ಹೊಸ ಬಣ್ಣದ ಪರದೆಗಳನ್ನು ಇನ್ನು ಮುಂದೆ ಮೋರು ನೋಡಲಾರನೆಂಬ ವಿಷಯ ಅವನ ಅರಿವಿಗೆ ಬಂದು, ತೊಡೆಯ ಮೇಲೆ ಕುಳಿತಿದ್ದ ಸಮಾಂಗನ ಮೇಲೆ ಬಾಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಅವನ ಮೂವರು ಚಿಕ್ಕ ಹೆಣ್ಣು ಮಕ್ಕಳು ಅವನನ್ನು ಒರಗಿಕೊಂಡು ತಂದೆ ಅಳುವುದನ್ನು ಕಂಡು ಅಳತೊಡಗಿದುವು.

ಹೆಂಗಸರಿಬ್ಬರೂ ಅಡಿಗೆಯ ಕೋಣೆಯಲ್ಲಿ ಮೆಲ್ಲಗೆ ಮಾತನಾಡಿಕೊಳ್ಳುತ್ತಿದ್ದರು. "ಈಗ ಬಂದೆರಗಿರುವ ಅವಘಡದ ಬಗ್ಗೆ ಮುಂದಾಗಿಯೇ ಹೇಳಿದ್ದೆ ನಾನು" ಪಗ್ ಲುಗ್ ಮೆಲ್ಲನೆ ಉಸುರಿದಳು. ಸರನಳನ್ನು ಕುರಿತು "ಮಾರುಕಟ್ಟೆಯಲ್ಲಿ ಮುದಿಯ ರಾಣಿಯರು ಈ ಸುದ್ದಿಯನ್ನು ಮಾತನಾಡುತ್ತಿದ್ದರು. ಮರಿಯಲ್ಲಿ ಮುನ್ನ ಎನ್ನುವ ಗುಲಾಮ ಹುಡುಗಿಯ ಜೊತೆಯಲ್ಲಿ ಮೋರು ಪ್ರತಿ ರಾತ್ರಿ ಮಲಗುತ್ತಿದ್ದನಂತೆ. ಆ ಗುಲಾಮಳ ಯಜಮಾನಿ ಬರ್ನಿಸ್ ಒಂದು ದಿನ ಮೋರುವನ್ನು ಎಬ್ಬಿಸಿ ತನ್ನ ಕೋಣೆಗೆ ಕರೆದುಕೊಂಡು ಹೋಗಿ ಬಾಗಿಲು ಹಾಕಿಕೊಂಡಳಂತೆ. ಪ್ರಣಯಭಂಗದಿಂದ ಹುಚ್ಚೆದ್ದ ಮುನ್ನ, ರಾಣಿಯರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಅನಕ್ ಗುರುಂಗ್ ಭೀಮನ ಬಳಿ ಹೋಗಿ ಎಲ್ಲವನ್ನೂ ಹೇಳಿದಳಂತೆ. ಅನಂತರ ತನ್ನ ಆತುರದ ಬುದ್ಧಿಗೆ ಪಶ್ಚಾತ್ತಾಪಪಟ್ಟು ಮತ್ತೆ ಭೀಮನ ಬಳಿ ಹೋಗಿ ತನ್ನ ಯಜಮಾನಿ ಬರ್ನಿಸ್ ತನ್ನನ್ನು ಹೊಡೆಯುತ್ತಿದ್ದುದರಿಂದ ತಾನು ಸುಳ್ಳು ಹೇಳಿದೆನೆಂದು ಹೇಳಿದಳಂತೆ. ಆದರೆ ಇಷ್ಟು ಸುಳಿವು ಸಿಕ್ಕಿದ ಮೇಲೆ ಅನಕ್ ಗುರುಂಗ್ ಭೀಮ ಸುಮ್ಮನಿರುತ್ತಾನೆಯೆ! ಬರ್ನಿಸ್ ಮೋರುವಿನೊಂದಿಗೆ ಸಂಧಿಸುತ್ತಿದ್ದುದನ್ನು ರಹಸ್ಯವಾಗಿ ಗಮನಿಸುತ್ತಿದ್ದನಂತೆ. ಒಂದು ದಿನ ಈ ಅಭಿಸಾರಿಕೆ ಮೋರುವಿನೊಂದಿಗೆ ಸಲ್ಲಾಪ ನಡೆಸುತ್ತಿದ್ದಾಗ ಸಿಕ್ಕಿಹಾಕಿಕೊಂಡಳಂತೆ. ಅನಂತರ ಇವರಿಬ್ಬರನ್ನು ಉಳಿಸಲು ಯಾರಿಂದ ತಾನೆ ಸಾಧ್ಯ !"

ಪಾಕನ ಅಕ್ಕ ಮನೆಯ ಹಿರಿಯರಿಗೆ ಪೂಜೆ ಸಲ್ಲಿಸುವ ಬಲಿಪೀಠದ ಬಳಿ ಪೂಜಾ ಸಾಮಾಗ್ರಿಗಳನ್ನು ಅಣಿಗೊಳಿಸುತ್ತಿದ್ದಳು. ಆತನ ಹೆಂಡಂದಿರು ಹಳ್ಳಿಯ ಹೊರವಲಯದಲ್ಲಿದ್ದ ದೇವಾಲಯಕ್ಕೆ ಹೋಗಿ ವಿಶೇಷ ಪೂಜೆ ಸಲ್ಲಿಸಿ ಮೋರುವಿನ ಸಂಕಟವನ್ನು ಕಡಿಮೆ ಮಾಡಲು ದೇವರನ್ನು ಪ್ರಾರ್ಥಿಸೋಣವೆಂದು ಮೆಲ್ಲನೆ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು. ದೇವರ ಸೇವೆಗೆ ಪೂಜಾ ಸಾಮಾಗ್ರಿಗಳನ್ನು ಅಣಿಗೊಳಿಸುವುದರಲ್ಲಿ ಮಧ್ಯರಾತ್ರಿ ಮೀರಿತ್ತು. ಆ ದಿನ ಮನೆಯಲ್ಲಿ ಯಾರೂ ಕಣ್ಣು ಮುಚ್ಚಲಿಲ್ಲ. ರಾತ್ರಿ ಹೊತ್ತು ಮೀರಿ ಮನೆಗೆ ಬಂದ ಪಾಕನ ತಂದೆ ಬಲಿಪೀಠದ ಮುಂದೆ ಕುಳಿತು ಕಣ್ಣು ಮುಚ್ಚಿ ಮೌನವಾಗಿ ಧ್ಯಾನ ಮಾಡಲಾರಂಭಿಸಿದ.

ಮಾರನೆಯ ದಿನ ಪಾಕನಿಗಿಂತ ಮೊದಲೇ ಅವನ ಮುದಿ ತಂದೆ ಸೊಂಟಕ್ಕೆ ಹೊಸ ಮುಂಡೊಂದನ್ನು ಸುತ್ತಿಕೊಂಡು ಎರಡು ಕಿವಿಗಳ ಬದಿಯಲ್ಲಿಯೂ ಒಂದೊಂದು ಕೆಂಪು ದಾಸವಾಳದ ಹೂವನ್ನಿರಿಸಿಕೊಂಡು ಸಿದ್ಧನಾಗಿದ್ದ. ಮೋರುವಿನ

ತ್ತಿದ್ದ ಅವರು ಅಂದು ಕೊರೆಯುವ ನೀರಿನಲ್ಲಿ ಸ್ನಾನ ಮಾಡಲು ನದಿಗೆ ಹೋಗಲಿಲ್ಲ. ತಂದೆ ಮಕ್ಕಳಿಬ್ಬರೂ ಪುರಿಗೆ ಹೊರಟಾಗ ಪಾಕನ ಚಿಕ್ಕಪ್ಪನೂ ಜೊತೆಗೂಡಿದ.

ಮೇರುವಿಗೆ ಬಂದೊದಗಿದ ವಿಪತ್ತನ್ನು ತಿಳಿದ ಬಂಧುಗಳು ಗೆಳೆಯರು ಹಾದಿಯಲ್ಲಿ ಇವರನ್ನು ಕೂಡಿಕೊಂಡರು. ದೂರದ ಪಯಣದಿಂದಾಗಿ ತಂದೆ ಕಂಗೆಡುವನೇನೋ ಎಂದು ಪಾಕನು ಯೋಚಿಸುತ್ತಿರುವಾಗ, ಮುದುಕ ಎಲ್ಲರಿಗೂ ಮುಂದೆ ಮಾರುಗಾಲು ಹಾಕುತ್ತ ನಡೆಯುತ್ತಿದ್ದ. ಹಾದಿಯಲ್ಲಿ ಅವರು ಒಂದು ಮಾತನ್ನೂ ಆಡದೆ ಸಾಗುತ್ತಿದ್ದರು. ಪುರಿಯನ್ನು ತಲುಪಿದಾಗ ಸೂರ್ಯ ಮೇಲೇರುವ ಸನ್ನಾಹದಲ್ಲಿದ್ದ.

ಪುರಿಯ ನ್ಯಾಯಸ್ಥಾನದ ಬಳಿ ಬಂದಾಗ ದ್ವಾರಪಾಲಕರು ಇವರನ್ನು ಒಳಗೆ ಹೋಗಲು ಬಿಟ್ಟರು. ಎಲ್ಲರೂ ಒಳಗೆ ಹೋಗಿ ಸಭಾಂಗಣದ ಮೆಟ್ಟಲೊಂದರ ಮೇಲೆ ಮುದುಡಿಕೊಂಡು ಕುಳಿತರು. ವಿಶಾಲವಾದ ಆ ಸಭಾಂಗಣಕ್ಕೆ ಮಾಡು ಇರಲಿಲ್ಲ. ಸಭಾಂಗಣದ ಮೂಲೆಯಲ್ಲಿ ನ್ಯಾಯಾಧೀಶನಿಗೋಸ್ಕರ ಪ್ರತ್ಯೇಕವಾದ ಕೋಣೆಯಿದ್ದಿತು. ನಾಲ್ಕು ದಿಕ್ಕಿಗೂ ನಾಲ್ಕು ಎತ್ತರವಾದ ಬುರುಜುಗಳಿದ್ದುವು. ಸಭಾಂಗಣದ ನಡುವೆ ಸುಮಾರು ಎತ್ತರದ ಒಂದು ವೇದಿಕೆಯಿದ್ದಿತು. ದೈಹಿಕ ಶಿಕ್ಷೆಗೆ ಒಳಗಾದ ಅಪರಾಧಿಗಳಿಗೆ ಈ ವೇದಿಕೆಯ ಮೇಲೆ ಶಿಕ್ಷೆಯನ್ನು ನೆರವೇರಿಸಲಾಗುತ್ತಿತ್ತು. ಸಭಾಂಗಣದ ಗೋಡೆಗಳ ಮೇಲೆ ನರಕದಲ್ಲಿ ಪಾಪಿಗಳಿಗೆ ಯಮಕಿಂಕರರು ವಿಧಿಸುವ ಘೋರ ಶಿಕ್ಷೆಗಳ ವಿವಿಧ ಬಗೆಯ ಚಿತ್ರಗಳನ್ನು ಭಯಂಕರವಾಗಿ ಚಿತ್ರಿಸಲಾಗಿತ್ತು.

ನ್ಯಾಯಸ್ಥಾನದ ಕೆಳ ದರ್ಜೆಯ ಅಧಿಕಾರ ವರ್ಗದವರು ಕೆಳಗೆ ಕುಳಿತು ಸಿರಿ ಜಗಿಯುತ್ತ ಮಾತನಾಡುತ್ತಿದ್ದರು. ಸಭಾಕಾರ್ಯ ಆರಂಭವಾಗುವುದನ್ನೇ ಎಲ್ಲರೂ ನಿರೀಕ್ಷಿಸುತ್ತಿದ್ದರು. ಇದಕ್ಕಿದ್ದ ಹಾಗೆ ಪಾಕನ ತಲೆಯಲ್ಲಿ ತನ್ನ ತಂಗಿ ಲಂಬೋನಳಿಗೆ ಮೇರುವಿನ ಮೇಲೆ ಬಂದಿರುವ ವಿಪತ್ತಿನ ಸುದ್ದಿ ತಿಳಿದಿದ್ದರೆ ರಜ್ಞಾನಿಗೆ ಕ್ಷಮೆಯನ್ನು ನೀಡುವಂತೆ ಬೇಡಿಕೊಳ್ಳಬಹುದಿತ್ತಲ್ಲ ಎಂಬ ಯೋಚನೆ ಸುಳಿಯಿತು. ಇದರಲ್ಲಿ ರಜ್ಞಾನ ಗೌರವದ ಪ್ರಶ್ನೆ ಒಳಗೊಂಡಿರುವಾಗ ಕ್ಷಮೆಯು ಮಾತ್ರ ಬರುವುದಿಲ್ಲವೆಂಬ ಕಟುಸತ್ಯ ಮನಸ್ಸಿಗೆ ಅರಿವಾದಾಗ ಪಾಕ್ ಆ ಯೋಚನೆಯಿಂದ ವಿಮುಖನಾದ.

ಇತರರೊಂದಿಗೆ ತಂದೆ ಮಗ ಮೌನವಾಗಿ ಬಹಳ ಹೊತ್ತು ಕುಳಿತಿದ್ದಾಗ ಸಭಾಂಗಣದಲ್ಲಿ ಇದ್ದಕ್ಕಿದ್ದ ಹಾಗೆ ಚಟುವಟಿಕೆ ಮೂಡಿತು. ಭಲ್ಲೆಗಳನ್ನು ಹಿಡಿದ ಸೈನಿಕರಿಬ್ಬರು ಮೇರುವನ್ನು ತಮ್ಮ ಮಧ್ಯದಲ್ಲಿ ನಡೆಸಿಕೊಂಡು ಬಂದು ವೇದಿಕೆಯ ಮೇಲೆ ಹತ್ತಿ ನಿಂತರು. ಮೇರು ಹೊಸ ಬಟ್ಟೆಗಳನ್ನು ತೊಟ್ಟಿದ್ದ. ಸೊಂಟಕ್ಕೆ ಕಟ್ಟಿದ್ದ ಒಡ್ಯಾಣದಿಂದ ಅವನ 'ಕ್ರಿಸ್' (ಕೈ–ಕತ್ತಿ) ನೇತಾಡುತ್ತಿತ್ತು. ನೀಳವಾದ ತಲೆಯ ಕೂದಲನ್ನು ಹಿಂದಕ್ಕೆ ಬಾಚಿಕೊಂಡು ಗಂಟು ಹಾಕಿಕೊಂಡಿದ್ದ. ಅವನ ತಲೆಯ ಹಿಂಭಾಗದ ಕೂದಲ ಗಂಟಿನಲ್ಲಿ ಅಗಲವಾದ ಕೆಂಪು ದಾಸವಾಳದ ಹೂವೊಂದು ಶೋಭಿಸುತ್ತಿತ್ತು. ಆದರೆ ಮೇರು ಸೊಂಟಕ್ಕೆ ಸುತ್ತಿಕೊಂಡಿದ್ದ ಹೊಸ ಪಂಚೆಯ ತುಂಡು ಶವಕ್ಕೆ ಹೊದಿಸುವಂತಹದೆಂಬುದು ಅರಿವಿಗೆ ಬಂದು ವ್ಯಥಿತನಾದ.

ವೇದಿಕೆಯ ಮೇಲೆ ಸಿಪಾಯಿಗಳ ನಡುವೆ ನಿಂತಿದ್ದ ಮೇರುವಿನ ಮುಖದ ಮೇಲೆ ನಿರ್ವಿಕಾರವಾದ ಮಂದಹಾಸ ಮೂಡಿದ್ದಿತು. ಅವನನ್ನು ನೋಡಿದರೆ ಮನಸ್ಸಿನಲ್ಲಿ ಅನುಕಂಪ ತಾನೇ ತಾನಾಗಿ ಮೂಡುತ್ತಿತ್ತು. ಅಷ್ಟು ನಿಷ್ಕಳಂಕವಾದ ಮುಗ್ಧ ಮುಖ. ಅವನ ದೃಷ್ಟಿ ದೂರದಲ್ಲಿ ನೆಟ್ಟಿತ್ತು. ಮನಸ್ಸಿನಲ್ಲಿ ಯಾವ ಒಳತೋಟಿಯೂ ಇಲ್ಲದ ಕಾರಣ ಮುಖ ಪ್ರಶಾಂತವಾಗಿತ್ತು. ಶಿಕ್ಷೆಗೊಳಗಾದ ಯಾರಾದರೂ ಇವನಂತಿರಲು ಸಾಧ್ಯವೇ ಎಂಬ ಸಂಶಯವು ಅವನನ್ನು ಆಗ ನೋಡಿದವರ ಮನದಲ್ಲಿ ಮೂಡುತ್ತಿತ್ತು.

ಸೂರ್ಯ ಮೇಲೇರತೊಡಗಿದಂತೆ ಬಿಸಿಲು ಪ್ರಖರವಾಗತೊಡಗಿತು. ನ್ಯಾಯಾಧೀಶನ ಕೋಣೆಯಿಂದ ಅಧಿಕಾರಿಯೊಬ್ಬ ಹೊರಬಿದ್ದು ನೇರವಾಗಿ ವೇದಿಕೆಯನ್ನೇರಿ ಪುಸ್ತಕವೊಂದನ್ನು ತೆರೆದು

ಅಪಾದನೆಯನ್ನು ಓದತೊಡಗಿದ. ಮೇರು ಅದರಿಂದ ಸ್ವಲ್ಪವೂ ವಿಚಲಿತನಾಗಲಿಲ್ಲ. ಅಧಿಕಾರಿ ಓದುತ್ತಲಿರುವುದನ್ನು ಆತ ಕೇಳಿಸಿಕೊಂಡಂತೆಯೇ ಕಾಣಲಿಲ್ಲ.

ಇದಾದನಂತರ ಆಸ್ಥಾನದ ಉತ್ತಮ ಕುಲದವನೊಬ್ಬನು ಅಲ್ಲಿ ನೆರೆದಿದ್ದ ಮೇರುವಿನ ಗೆಳೆಯರ ಮತ್ತು ಸಂಬಂಧಿಕರ ಚಿಕ್ಕ ಬಳಗವನ್ನು ಸಮೀಪಿಸಿ ಎಲ್ಲರಿಗೂ ಮುಂದೆ ತಂದೆಯ ಜೊತೆಯಲ್ಲಿ ನಿಂತಿದ್ದ ಪಾಕನನ್ನು ಕುರಿತು, "ನಿನ್ನ ತಮ್ಮನ ಬಳಿ ಮಾತನಾಡುವ ಹಾಗಿದ್ದರೆ ಮಾತನಾಡಬಹುದು" ಎಂದು ಹೇಳಿದ. ಪಾಕ್ ತಂದೆಯ ಮುಖವನ್ನು ನೋಡಿದಾಗ, ಮುದುಕ ತಲೆಯಲ್ಲಾಡಿಸಿ, "ಅವನ ಮನಸ್ಸಿನ ಶಾಂತಿಯನ್ನು ಕಲಕದೆ ಅವನಷ್ಟಕ್ಕೆ ಅವನನ್ನು ಬಿಡು. ಈಗಿನ ಅವನ ಮನಃಸ್ಥಿತಿಯಲ್ಲಿ ಹೆಚ್ಚಿನ ನೋವನ್ನು ಅವನು ಅನುಭವಿಸಲಾರ," ಎಂದು ಮೇರುವಿನ ಮೇಲೆ ನಟ್ಟಿದ ತನ್ನ ದೃಷ್ಟಿಯನ್ನು ಬದಲಿಸದೆ ಮೆದುವಾಗಿ ನುಡಿದ.

ಮೇರುವಿನೊಂದಿಗೆ ಯಾರೂ ಮಾತನಾಡಲು ಮುಂದೆ ಬಾರದುದನ್ನು ಕಂಡು ಬಿಳಿಯ ಸಮವಸ್ತ್ರವನ್ನು ಧರಿಸಿದ್ದ ಅಧಿಕಾರಿಯೊಬ್ಬ ವೇದಿಕೆಯನ್ನೇರಿ ಮೇರುವಿನ ಬಳಿ ಹೋಗಿ ನಿಂತು ತನ್ನೆರಡು ಕೈಗಳನ್ನು ಅವನ ಭುಜದ ಮೇಲಿರಿಸಿ "ಸೋದರ" ಎಂದು ಗಟ್ಟಿಯಾಗಿ ಸಂಬೋಧಿಸಿದಾಗ ಅವನ ಧ್ವನಿ ಸಭಾಂಗಣದ ಕೊನೆಯಲ್ಲಿ ನಿಂತವರಿಗೆಲ್ಲ ಕೇಳಿಸಿತು. "ನ್ಯಾಯಸ್ಥಾನವು ನಿನಗೆ ವಿಧಿಸಿರುವ ಶಿಕ್ಷೆಯನ್ನು ನೆರವೇರಿಸುವ ಜವಾಬ್ದಾರಿಯನ್ನು ನನಗೆ ವಹಿಸಲಾಗಿದೆ. ನಿನಗೆ ಯಾತನೆಯನ್ನುಂಟುಮಾಡುವ ಯಾವ ಉದ್ದೇಶವೂ ನನಗಿಲ್ಲ. ಆದರೂ ಕರ್ತವ್ಯಬದ್ಧನಾಗಿ ನಿನಗೆ ನೋವನ್ನುಂಟುಮಾಡಲಿರುವ ನನ್ನನ್ನು ಕ್ಷಮಿಸಿ ನನ್ನ ಕರ್ತವ್ಯವನ್ನು ನೆರವೇರಿಸಲು ಅನುಮತಿ ಕೊಡು" ಎಂದು ಕೇಳಿಕೊಂಡಾಗ ಮೇರು ದೃಢವಾದ ಕಂಠದಿಂದ "ನಿನ್ನ ಕರ್ತವ್ಯವನ್ನು ನೀನು ನೆರವೇರಿಸು" ಎಂದು ನುಡಿದ.

ಕೆಲವು ತಿಂಗಳ ಹಿಂದೆ ಮೇರು ತನ್ನ ಮನೆಯ ಕದಗಳ ಮೇಲೆ ಗರುಡಾರೂಢನಾದ ಶ್ರೀ ವಿಷ್ಣು ಆ ಅಧಿಕಾರಿ ನೆನಸಿಕೊಂಡ. ಇನ್ನು ಅಂತಹ ಸುಂದರ ಚಿತ್ರಗಳನ್ನು ಮೇರು ಕೆತ್ತಲಾರನೆಂಬುದು ಮನವರಿಕೆಯಾದಾಗ ಆ ಅಧಿಕಾರಿಯ ಕಣ್ಣಲ್ಲಿ ನೀರಾಡಿತು. ಆದರೆ ಮುಂದಿನ ಒಂದೆರಡು ಕ್ಷಣಗಳಲ್ಲಿ ತಾನು ನೆರವೇರಿಸಬೇಕಾಗಿರುವ ಅಪ್ರಿಯವಾದ ಕರ್ತವ್ಯವನ್ನು ನೆನೆದು ಮನಸ್ಸನ್ನು ದೃಢಪಡಿಸಿಕೊಂಡ. ಒಂದು ಕ್ಷಣ ಮೇರುವಿನ ಮುಖವನ್ನು ದಿಟ್ಟಿಸಿ ನೋಡಿದ. ಆ ಮುಖದಲ್ಲಿ ಗಾಬರಿಯ ಸುಳಿವೇ ಇರಲಿಲ್ಲ. ಪ್ರಶಾಂತವಾಗಿದ್ದಿತು. ಆ ಅಧಿಕಾರಿ ತನ್ನ ನಡುಪಟ್ಟಿಗೆ ಸಿಕ್ಕಿಸಿಕೊಂಡಿದ್ದ ಬಿದಿರಿನ ಹಿಡಿಯ ಚಾಕುವನ್ನು ಒರೆಯಿಂದ ಹೊರತೆಗೆದಾಗ ಸಿಪಾಯಿಗಳಿಬ್ಬರು ಹಿಂದಿನಿಂದ ಮೇರುವನ್ನು ಬಲವಾಗಿ ತಬ್ಬಿ ಹಿಡಿದುಕೊಂಡರು. ವೇದಿಕೆಯ ಮೂಲೆಯಲ್ಲಿದ್ದ ಬಲಿಪೀಠಕ್ಕೆ ಕೆಂಪು ಕಣಗಲೆ ದಾಸವಾಳದ ಹೂಗಳಿಂದ ಪೂಜಿಸಿದ್ದರು. ಆ ಅಧಿಕಾರಿ ಬಲಿಪೀಠದ ಬಳಿ ಹೋಗಿ ಬಾಗಿ ನಮಿಸಿ ಮತ್ತೆ ಮೇರುವಿನ ಮುಂದೆ ಬಂದು ನಿಂತು ಕೈಯ್ಯಲ್ಲಿನ ಚಾಕುವನ್ನು ಒಂದು ಸಲ ಝಳುಪಿಸಿ ಮೇರುವಿನ ಕಣ್ಣುಗಳಲ್ಲಿ ತಿವಿದ. ಅನತಿ ದೂರದಲ್ಲಿ ನಿಂತಿದ್ದ ಪಾಕ್ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಹೋ ಎಂದು ಚೀತ್ಕರಿಸಿದ. ಮೇರುವಿನ ಮುಖದಿಂದ ಒಂದು ಸಣ್ಣ ಚೀತ್ಕಾರವೂ ಹೊರಬೀಳಲಿಲ್ಲ. ಆ ಅಧಿಕಾರಿ ತನ್ನ ಕೈಯ್ಯಲ್ಲಿನ ಚಾಕುವನ್ನು ಕೆಳಗೆ ಹಾಕಿ ಮೂರ್ಛಿತನಾಗಿ ಕೆಳಗೆ ಬೀಳುತ್ತಿದ್ದ ಮೇರುವನ್ನು ತನ್ನೆರಡೂ ಕೈಗಳಿಂದ ಎತ್ತಿಕೊಂಡ.

ಪಾಕ್ ಮೇರುವನ್ನು ತನ್ನ ಹೆಗಲ ಮೇಲೆ ಹೊತ್ತು ಪುರಿಯಿಂದ ಹೊರಗೆ ಬಂದ. ಮೇರು ಅವನಿಗೆ ಮಗುವಿಗಿಂತಲೂ ಹೆಚ್ಚು ಹಗುರವಾಗಿ ಕಂಡ. ಹೊರಗೆ ಅವನ ಗೆಳೆಯರು ಬಿದಿರಿನ ಕೈಮಂಚವನ್ನು ಸಿದ್ಧಪಡಿಸಿಕೊಂಡಿದ್ದರು. ಅದರ ಮೇಲೆ ಪ್ರಜ್ಞಾಹೀನನಾಗಿದ್ದ ಮೇರುವನ್ನು ಮಲಗಿಸಲಾಯಿತು. ಅವನ ಕಣ್ಣುಗುಳಿಗಳಿಂದ ಎರಡು ಚಿಕ್ಕ ರಕ್ತದ ಧಾರೆಗಳು ಪ್ರವಹಿಸುತ್ತಿದ್ದುವು. ಕಣ್ಣಿನ ರೆಪ್ಪೆಗಳು

ಪಟನೆ ಒಡೆದುಕೊಳ್ಳುತ್ತಿದ್ದವು.

ಮೇರುವನ್ನು ಮಲಗಿಸಿದ್ದ ಕೈಮಂಚವನ್ನು ನಾಲ್ಕು ಜನರು ಹೆಗಲ ಮೇಲೆ ಹೊತ್ತು ಮುನ್ನಡೆದಾಗ ಮೇರುವಿನ ಕೈಯೊಂದು ಎದೆಯ ಮೇಲಿನಿಂದ ಸರಿದು ನೇತಾಡಲಾರಂಭಿಸಿತು. ಅದನ್ನು ಕಂಡ ಪಾಕನ ವೃದ್ಧ ತಂದೆ ಬಳಿ ಸರಿದು ಆ ಕೈಯನ್ನು ಮೃದುವಾದ ತನ್ನ ಕೈಯಲ್ಲಿ ಹಿಡಿದು ಪಕ್ಕದಲ್ಲೇ ನಡೆಯಲಾರಂಭಿಸಿದ. ತಮನ್‌ಸರಿಯನ್ನು ಸೇರುವವರೆಗೆ ಯಾರೊಬ್ಬರೂ ಒಂದು ಮಾತನ್ನೂ ಆಡದೆ ಸಾಗಿದ್ದರು.

ಮನೆಯ ಮುಂದೆ ಕೈಮಂಚವನ್ನಿಳಿಸಿದಾಗ ಹೆಡಂಪ ಇವರ ಬರವನ್ನೇ ಕಾದು ನೋಡುತ್ತಾ ಕಾದಿದ್ದ. ಊರಿನ ವೈದ್ಯ ಬಲಿಯನ್ ಸಹ ಬಂದಿದ್ದ. ಮೇರುವನ್ನೆತ್ತಿಕೊಂಡು ಹೋಗಿ ಕೋಣೆಯಲ್ಲಿ ಸಿದ್ಧಪಡಿಸಿದ್ದ ಮಂಚದ ಮೇಲೆ ಮಲಗಿಸಿದರು. ವೈದ್ಯ ಬಲಿಯನ್ ಮೇರುವಿನ ರಕ್ತಸಿಕ್ತವಾಗಿದ್ದ ಕಣ್ಣುಗಳನ್ನು ಮೆದುವಾಗಿ ಹತ್ತಿಯಿಂದ ಒರೆಸಿ, ಔಷಧಿಯಲ್ಲಿ ಅದ್ದಿದ್ದ ಹತ್ತಿಯ ತುಣುಕುಗಳನ್ನು ಎರಡು ಕಣ್ಣುಗಳ ಮೇಲಿಟ್ಟು ಪಟ್ಟಿ ಹಾಕಿದ.

ಸಂಜೆ ಮೇರುವಿನ ಅರಿವು ಮರಳಿತು. ಹಳ್ಳಿಯ ಗಮೋಲ (ಹಾಡುಗಾರ) ಭಜನೆಯ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದ. ಅವನ ಭಜನೆ ರಾತ್ರಿ ಬಹಳ ಹೊತ್ತಿನವರೆಗೂ ಮುಂದುವರಿದಾಗ ಮೇರುವಿನ ಕಣ್ಣಿನೊಳಗಿನ ಯಮಯಾತನೆ ಕಿಂಚಿತ್ತು ಕಮ್ಮಿಯಾದಂತೆ ಭಾಸವಾಯಿತು.

ಹಲವಾರು ದಿನಗಳು ಮೇರು ಕಣ್ಣಿನ ಯಾತನೆಯನ್ನು ತಾಳಲಾರದೆ ಅಳುತ್ತ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದ. ಅವನನ್ನು ಕಂಡವರು ಕಣ್ಣೀರು ಹಾಕುತ್ತಿದ್ದರು. ಅವನು ಹೆಚ್ಚು ದಿನ ಬದುಕಲಾರನೆಂದೇ ತಿಳಿದರು. ಆದರೆ ಮೇರು ದೃಢಕಾಯನಾಗಿದ್ದುದರಿಂದ ನೋವನ್ನು ತಾಳಿಕೊಂಡು ಬದುಕುಳಿದ.

ನೋವು ಕಡಿಮೆಯಾಗಿ ಕಣ್ಣಿನ ಗಾಯ ವಾಸಿಯಾದ ಮೇಲೆ ಮೇರು ಪಾಕನ ಮಗಳು ರಂಟು ಆಗಾಗ ಗೋಡೆಯನ್ನು ಹಿಡಿದುಕೊಂಡು ನಡೆಯಲು ಪ್ರಯತ್ನಿಸುತ್ತಿದ್ದ. ಅವನಿಗೆ ಮನೆಯವರೆಲ್ಲ ಸಹಾಯ ಮಾಡುತ್ತಿದ್ದರು. ಒಂದು ದಿನ ಪಾಕನನ್ನು ಕೇಳಿ ಕೋಲೊಂದನ್ನು ಪಡೆದುಕೊಂಡು ಹಳ್ಳಿಯ ಬೀದಿಗಳಲ್ಲಿ ನಿಧಾನವಾಗಿ ನಡೆದಾಡಿದ. ಆಗಾಗ ಪಾಕ್ ತನ್ನ ಚಿಕ್ಕ ಮಗ ನವಾಂಗನನ್ನು ಮೇರುವಿನ ತೊಡೆಯ ಮೇಲೆ ಮಲಗಿಸುತ್ತಿದ್ದ. ಮಗುವಿನ ಹಿತವಾದ ಬಿಸಿ ಸ್ಪರ್ಶದಿಂದ ಮೇರುವಿನ ಮನಃಕ್ಷೋಭೆ ಕಮ್ಮಿಯಾಗುವುದೆಂದು ಅವನ ನಂಬಿಕೆ. ಅವನಿಗೆ ಹಾಗಾಗುತ್ತಿದ್ದುದಂತೂ ನಿಜ.

ಒಂದು ದಿನ ಮೇರು ಗೋಡೆಯನ್ನು ಹಿಡಿದುಕೊಂಡು ಮನೆಯೊಳಗೆ ಮೆಲ್ಲನೆ ತಡಕಾಡುತ್ತ ನಡೆಯುತ್ತಿದ್ದಾಗ ಚಿಕ್ಕ ಮರದ ತುಂಡೊಂದು ಕಾಲಿಗೆ ತಗುಲಿತು. ಮೇರು ಅಲ್ಲಿಯೇ ಕುಳಿತುಕೊಂಡು ಮರದ ತುಂಡನ್ನು ಕೈಯಲ್ಲಿ ತೆಗೆದುಕೊಂಡು ಸವರತೊಡಗಿದ. ಅತನಿಗೆ ಶಿಕ್ಷೆಯಾಗುವುದಕ್ಕೆ ಮೊದಲು ಕೆತ್ತಿದ್ದ ಪರಿಣಾಫಿಸರಣದ ಬೊಂಬೆಯದು.

ಈ ಬೊಂಬೆಯನ್ನು ಮೆದುವಾಗಿ ಸವರುತ್ತಿದ್ದಂತೆ ಅವನ ಮನಸ್ಸಿನ ಪರದೆಯ ಮೇಲೆ ಬರ್ನಿಸಳ ಜೊತೆಯಲ್ಲಿ ಕಳೆದ ಕೆಲವು ಸುಂದರ ರಾತ್ರಿಗಳ ನೆನಪು ಮೂಡಿ ಮರೆಯಾದವು. ರಜ್ಜಾನ ರಾಣಿಯಾದ ಉತ್ತಮ ಕುಲದ ಆ ಹೆಣ್ಣು ತನ್ನಂತಹ ಹೀನ ಕುಲದವನನ್ನು ಪ್ರೀತಿಸಿದುದನ್ನು ನೆನೆದು ಆ ದುಸ್ಥಿತಿಯಲ್ಲಿಯೂ ಅವನ ಹೃದಯ ಹೆಮ್ಮೆಯಿಂದ ಬೀಗಿತು. ಅವಳ ಬಿಸಿಯಪ್ಪುಗೆಯಲ್ಲಿ ಕಳೆದ ಸುಖದ ಕ್ಷಣಗಳನ್ನು ನೆನೆದು ರೋಮಾಂಚನಗೊಂಡ. ಅವಳಿಂದ ಪಡೆದ ಸುಖದ ರಸನಿಮಿಷಗಳಿಗಾಗಿ ತನ್ನೆರಡು ಕಣ್ಣುಗಳನ್ನು ದಂಡ ತೆತ್ತುದಕ್ಕಾಗಿ ಅವನಿಗೆ ಸ್ವಲ್ಪವೂ ವ್ಯಥೆಯಿರಲಿಲ್ಲ. ಆ ಸುಖಕ್ಕಾಗಿ ತನ್ನ ಶಿರವನ್ನೇ ಬೇಕಾದರೂ ಆನಂದದಿಂದ ಕಡಿದೊಪ್ಪಿಸುತ್ತಿದ್ದ. ಹಲವು ಜನ್ಮಗಳಿಗಾಗುವಷ್ಟು ಸುಖವನ್ನು ಹಲವಾರು ದಿನಗಳಲ್ಲಿ ಪಡೆದು ಹೃದಯದಲ್ಲಿ ಸಂಗ್ರಹಿಸಿಟ್ಟುಕೊಂಡಂತೆ ಅವನ ಮನಸ್ಸು ತೃಪ್ತಿಯಿಂದ ತುಳುಕುತಿತ್ತು.

ದ್ವೀಪಕ್ಕೆ ಗಡೀಪಾರು ಮಾಡಿರುವುದನ್ನು ನೆನೆದಾಗ ಅವನ ಹೃದಯ ಭಾರವಾಯಿತು.

ಪುರಿಯುಕ್ತಿನ ರಾಜಭೋಗಗಳಿಗೆ ಮನ ಸೋತು ಅಂತಃಪುರವನ್ನು ಸೇರಬಯಸುವ ಹೆಣ್ಣುಗಳಿಗೆ ಬಾಲಿ ದ್ವೀಪದಲ್ಲಿ ಕೊರತೆಯೇನೂ ಇರಲಿಲ್ಲ. ಆದರೆ ಒಂದು ಸಲ ಅಂತಃಪುರವನ್ನು ಸೇರಿದ ಮೇಲೆ ಅಲ್ಲಿಯ ಯಾವ ವಸ್ತುಗಳ ಆಕರ್ಷಣೆಯಿಂದ ಅವರು ಅಲ್ಲಿಗೆ ಸೆಳೆಯಲ್ಪಟ್ಟಿದ್ದರೋ. ಅವುಗಳು ಬಹು ಬೇಗ ತಮ್ಮ ಮೆರುಗನ್ನು ಕಳೆದುಕೊಂಡು ಅರ್ಥಹೀನವಾಗಿ ಕಂಡು ಒಂದು ಜೀವನದ ಸಹಜ ಸುಖದಿಂದ ವಂಚಿತರಾದೆವೆಂದು ಪರಿತಪಿಸುತ್ತ ಅಲ್ಲಿಂದ ಹೊರಬೀಳಲು ಪ್ರಯತ್ನಿಸುತ್ತಿದ್ದರು. ವಿಲಾಸಪ್ರಿಯರಾದ ಮುಗ್ಧ ಹೆಣ್ಣುಗಳ ಸ್ವಾಗತಕ್ಕೆ ದೊರೆಯ ಅಂತಃಪುರದ ಬಾಗಿಲುಗಳು ವಿಶಾಲವಾಗಿದ್ದವು. ಆದರೆ ಒಳಗೆ ಹೋದವರು ಮತ್ತೆ ಹೊರಗೆ ಬರಲು ಅಲ್ಲಿಂದ ಒಂದು ಚಿಕ್ಕ ಕಿಂಡಿಯೂ ಇಲ್ಲವೆಂಬ ವಿಷಯ ಬಹುತೇಕ ಹೆಣ್ಣುಗಳಿಗೆ ತಿಳಿದಿರಲಿಲ್ಲ. ವಿಲಾಸ ವಿಭ್ರಮದ ಮರೀಚಿಕೆಯ ಬೆನ್ನು ಹತ್ತಿದ ದೌರ್ಭಾಗ್ಯಶಾಲಿ ಹೆಣ್ಣುಗಳಲ್ಲೊಬ್ಬಳಾಗಿ ಬಿಸ್ಸಳು ತನ್ನ ಜೀವನದ ದುರಂತ ಕಥೆಯ ನಾಯಕಿಯಾದಳು.

ಒಂದು ದಿನ ಮೇರು ಮೂಲೆಯಲ್ಲಿ ಕುಳಿತು ಮೊಣಕಾಲಿನ ನಡುವೆ ಮರದ ತುಂಡೊಂದನ್ನಿಟ್ಟುಕೊಂಡು ತಲೆ ತಗ್ಗಿಸಿ ಉಳಿಯಿಂದ ಕೆತ್ತುತ್ತಿದ್ದುದನ್ನು ಕಂಡು ಅವನ ಬಳಿ ಹೋಗಿ ಪಾಕ್ ಕುತೂಹಲದಿಂದ, "ತಮ್ಮ, ಮೇರು ನೀನು ಕೆತ್ತುತ್ತಿರುವುದು ಏನು ?" ಎಂದು ಮುಗುಳ್ನಕ್ಕ. ಮೇರು ತನ್ನ ದೃಷ್ಟಿಹೀನವಾದ ಕಣ್ಣುಗಳನ್ನು ಮೇಲೆತ್ತಿ "ಏನು ಇಲ್ಲ" ಎಂದ ನೀರಸವಾದ ಧ್ವನಿಯಲ್ಲಿ. ಆದರೆ ಅವನು ಕೆತ್ತುತ್ತಿರುವುದೇನೆಂಬುದನ್ನು ಪಾಕ್ ಕಂಡುಕೊಂಡ.

ಹರಿಣಿಯ ಕೂಟದಲ್ಲಿದ್ದ ಹರಿಣದ ಹೊಟ್ಟೆಯನ್ನು ಬಾಣವೊಂದು ಹೊಕ್ಕಿದ್ದಿತು. ಸುಖದ ಪರಾಕಾಷ್ಠೆಯನ್ನು ಮುಟ್ಟುತ್ತಿದ್ದಾಗ ವಧಿಸಲ್ಪಟ್ಟಿದ್ದಿತು ಮುಗ್ಧ ಪ್ರಾಣಿ. ಆ ದೃಶ್ಯವನ್ನು ಕಂಡು ದುಃಖದಿಂದ ಪಾಕನ ಕಂಠದ ನರಗಳು ಉಬ್ಬಿಕೊಂಡವು. ಮೇರು ತಾನು ಕೆತ್ತುತ್ತಿದ್ದ ಹರಿಣಾಭಿಸರಣದ ಬೊಂಬೆಯನ್ನು ಮೂಲೆಗೆ ಎಸೆದ. ಮತ್ತೆಂದೂ ಅದನ್ನು ಮುಟ್ಟಲಿಲ್ಲ. ಪಾಕನನ್ನು ಕುರಿತು, "ನಾನೇನು ಮಾಡುತ್ತಿರುವೆನೋ ನನಗೇ ತಿಳಿಯದು" ಎಂದು ದುಃಖದಿಂದ ತನ್ನ ಕಳಾಹೀನ ಮುಖವನ್ನು ಮೇಲೆತ್ತಿದಾಗ ಕತ್ತಲೆಯು ಹೃದಯದಲ್ಲಿ ನಿಧಾನವಾಗಿ ಮುಳುಗುತ್ತಿರುವ ಅನುಭವವಾಗಲಾರಂಭಿಸಿತು. ●

(ಆಧಾರ : A Tale From Bali Island by Vicky Baum)



ನೂರಾಹತ್ತು ವರ್ಷಗಳ ಹಿಂದೆ ಮಾಡಿದ ಒಂದು ಮೋಸದ ಕೃತಿಯಿಂದ ಈಗ ಯಾರಾದರೂ ಲಕ್ಷಗಟ್ಟಲೇ ಸಂಪಾದಿಸಲು ಸಾಧ್ಯವೇ ? ಸಾಧ್ಯ ಎಂದು ತೋರಿಸಿದೆ ಇತ್ತೀಚೆಗೆ ವೇಲ್ಸ್‌ನಲ್ಲಿ ನಡೆದ ಒಂದು ಹಳೆಯ ನಕಲಿ ಅಂಚೆ ಚೀಟಿಗಳ ಹರಾಜು.

೧೮೭೦ ರಲ್ಲಿ ನಕಲಿ ಅಂಚೆ ಚೀಟಿ ತಯಾರಕರ ಗುಂಪೊಂದು ಇಂಥ ಅಂಚೆ ಚೀಟಿ ಗಳಿಂದ ೨ ಲಕ್ಷ ಪೌಂಡುಗಳನ್ನು ಗಳಿಸಿತು. ಈ ನಕಲಿ ಅಂಚೆ ಚೀಟಿ ಜಾಲವನ್ನು ೧೯೧೫ ರಲ್ಲಿ ಪತ್ತೆಹಚ್ಚಲಾಯಿತು. ಆದರೆ ವಂಚಕರು ಮಾತ್ರ ಸಿಕ್ಕಲಿಲ್ಲ. ಆ ಬಗ್ಗೆ ವಿಚಾರಣೆ ನಡೆಸುತ್ತಿದ್ದವರ ಪೈಕಿ ಒಬ್ಬನ ಬಳಿ ಇಂಥ ಕೆಲ ಅಂಚೆ ಚೀಟಿಗಳು ಉಳಿದುಬಿಟ್ಟವು. ಈಗ ಅವು ಆತನ ಮಗನ ಸೊತ್ತು. ಆತ ಅವುಗಳನ್ನು ಹರಾಜಿಗೆ ಹಾಕಿದ. ... ಮೂರು ಲಕ್ಷ ಪೌಂಡುಗಳಿಗಿಂತ ಹೆಚ್ಚು ಹಣ ಪಡೆದ.

# ಗಂಡು ಹೆಣ್ಣಾದವರು

ಕೆ. ಎಂ. ಎನ್. ಸ್ವಾಮಿ, ಕಳಸ

ಮೀಸೆ ಇಲ್ಲದ ಮೆಹ್ರಾಬ್ ಈಗ ಮರಿಯಮ್ →

ಫಾರಾ ಆದ ಫರ್ಜೀದ್ →

೧೯೮೦ ರ ಆಗಸ್ಟ್ ಕೊನೆಯಲ್ಲಿ ಪಶ್ಚಿಮ ಏಶಿಯದ ಫರ್ಜಿದ್ ಮತ್ತು ಮೆಹ್ರಾಬ್ ಎಂಬ ಹೆಸರಿನ ಸೋದರರು ಭಾರತಕ್ಕೆ ಬಂದಿಳಿದರು. ಮುಂಬಯಿಯ ಖ್ಯಾತ ಪ್ಲಾಸ್ಟಿಕ್ ಸರ್ಜನ್ ಮಾಣಿಕ್‌ಶಾ ಬಾಚ್ಚ ನರ್ಸಿಂಗ್ ಹೋಮಿನಲ್ಲಿ ನಡೆಸಿದ ಶಸ್ತ್ರಚಿಕಿತ್ಸೆಗಳಿಂದ ಫರ್ಜಿದ್ ಫಾರಾ ಆದಳು, ಮೆಹ್ರಾಬ್ ಮರಿಯಮ್ ಆದಳು. ಸೋದರರು ಸೋದರಿಯರಾದ ಈ ಲಿಂಗ ಪರಿವರ್ತನೆ, ವೈದ್ಯಕೀಯ ಜಗತ್ತಿನ ವಿಸ್ಮಯಗಳಲ್ಲೊಂದು.

ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡ ಈ ಸೋದರರು ತಾಯಿಯೇ ತಂದೆಯಾಗಿ ಬೆಳೆಸಿದ ಮಕ್ಕಳು. ಚಿಕ್ಕಂದಿನಿಂದಲೂ ಈ ಇವರೀರ್ವರ ವರ್ತನೆ ಇತರರಿಗಿಂತ ಭಿನ್ನವಾಗಿತ್ತು. ಗಂಡು ಹುಡುಗರ ಆಟಪಾಟಗಳನ್ನು ಇಷ್ಟಪಡದ ಇವರು ಹೆಂಗಸರ ಉಡಿಗೆ ತೊಡಿಗೆಗಳನ್ನು ಮೆಚ್ಚುತ್ತಿದ್ದರು. ಬಾಲ್ಯದಲ್ಲಿ ತಾಯಿಯ ಉಡುಪುಗಳನ್ನು ತೊಟ್ಟುಕೊಂಡು ಅವಳ ಮೇಕಪ್ ಹಾಗೂ ಚಪ್ಪಲಿಗಳನ್ನು ಧರಿಸುವದು ಅವರ ಹವ್ಯಾಸವಾಗಿತ್ತು.

ಬೆಳೆಯುತ್ತಾ ಬಂದಂತೆ ಮೆಹ್ರಾಬ್‌ಗೆ ಒಂದು ರೀತಿಯ ಕೀಳರಿಮೆ ಹೆಚ್ಚಿತು. ಓರಿಗೆಯವರೊಂದಿಗೆ ಹೋಲಿಸಿದಾಗ ತನಗಿದ್ದ ಹೋತನ ಗಡ್ಡದಿಂದ ನಾಚಿಕೆಯಾಗುತ್ತಿತ್ತು. ಇವನ ಗೆಳೆಯರು ಫುಟ್‌ಬಾಲ್ ಆಡುವಾಗ ನೋಡಿ ಆನಂದಿಸುತ್ತಿದ್ದನಾದರೂ ತಾನೂ ಆಟವಾಡಬೇಕು ಎಂದು ಅವನಿಗೆ ಅನ್ನಿಸುತ್ತಲೇ ಇರಲಿಲ್ಲವಂತೆ. ಮಕ್ಕಳಾಗಿದ್ದಾಗ ತಾಯಿ ನಿಂತು ಮೂತ್ರ ವಿಸರ್ಜಿಸಲು ಸಲಹೆ ಮಾಡಿದರೂ ಇಬ್ಬರೂ ಕುಳಿತು ಮೂತ್ರ ವಿಸರ್ಜಿಸುವುದನ್ನು ಬಿಡಲಿಲ್ಲವಂತೆ.

"ಮೆಹ್ರಾಬ್ ನೀನು ಹೆಣ್ಣಿನಂತೆ ನಡೆಯುವೆ" ಎಂದು ಜೊತೆಗಾರರು ಗೇಲಿ ಮಾಡುತ್ತಿದ್ದರಂತೆ. ಹುಡುಗಿಯರಂತೆ ಗಮನ ಸೆಳೆಯಲು ಚೀಳ್ಕೆಂದು ಚೀರಿ ಮಾತನಾಡುವೆ ಎಂದು ಹುಡುಗರು ಮೆಹ್ರಾಬ್‌ನನ್ನು ಸುತ್ತುವರಿದು, ಅಪ್ಪಿಕೊಳ್ಳಲೋ ಚುಡಾಯಿಸಲೋ ಪ್ರಯತ್ನಿಸುತ್ತಿದ್ದುದು ಉಂಟು. ಫರ್ಜಿದ್‌ನ ಸ್ಥಿತಿ ಇನ್ನೂ ಪೇಚಿನದಾಗಿತ್ತು. ಅವನಿಗೆ ಅಂತಹ ವಿಶ್ವಾಸಾರ್ಹ ಗೆಳೆಯರಾರೂ





ಶಾಲೆಗೆ ಹೋಗುವುದಿಲ್ಲ ಎಂದು ಘೋಷಿಸಿದ. ಇತ್ತ ಅವನು ಹುಡುಗಿಯರ ಶಾಲೆಗೂ ಹೋಗುವಂತಿರಲಿಲ್ಲ. ಏಕೆಂದರೆ ಹೊರ ಜಗತ್ತಿನ ಕಣ್ಣಿಗೆ ಇನ್ನೂ ಹುಡುಗನಾಗಿಯೇ ಇದ್ದ.

ತಾಯಿಗೆ ಈ ಅಸ್ತವ್ಯಸ್ತದ ವರ್ತನೆಯೇ ಅರ್ಥವಾಗುತ್ತಿರಲಿಲ್ಲ. ಇವರಿಗೆ ತಲೆ ಸರಿಯಿಲ್ಲವಾ? ಆರೋಗ್ಯ ಸರಿಯಿಲ್ಲವಾ? ಅಥವಾ ಯಾರು ಮಾಟಗಳನ್ನು ಮಾಡಿಸಿದ್ದಾರೆಯೇ? ಎಂದು ಗೊಂದಲಕ್ಕೀಡಾಗುತ್ತಿದ್ದಳು. ಹಲವಾರು ವೈದ್ಯರುಗಳನ್ನೂ ಸಂಪರ್ಕಿಸಿದಳು. ಒಬ್ಬ ವೈದ್ಯರು ಇವರಿಬ್ಬರೂ ತುಂಬಾ ಚಿಕ್ಕವರಿದ್ದಾಗ ಬಿದ್ದು ತಲೆಗೆ ಪೆಟ್ಟು ಮಾಡಿಕೊಂಡಿರಬೇಕು. ಮಿದುಳು ಸ್ಥಾನ ಪಲ್ಲಟಗೊಂಡು ಈ ರೀತಿ ವರ್ತಿಸುತ್ತಿದ್ದಾರೆಂದು ಅಭಿಪ್ರಾಯಪಟ್ಟರು. ಮಿದುಳನ್ನು ಹಿಂದಿನ ಜಾಗಕ್ಕೇ ಸ್ಥಳಾಂತರಿಸಲು 'ಎಲೆಕ್ಟ್ರಿಕ್ ಶಾಕ್' ಚಿಕಿತ್ಸೆ ಶುರು ಮಾಡಿದರು. ದಿನ ಬಿಟ್ಟು ದಿನ 'ಎಲೆಕ್ಟ್ರಿಕ್ ಶಾಕ್' ಕೊಟ್ಟಾಗ ತಲೆ ಕೂದಲೆಲ್ಲಾ ಉದುರಿ ಹೋಯಿತು. ಆದರೆ ಐದು ತಿಂಗಳು ನಂತರವೂ ಅವರಿಬ್ಬರಲ್ಲೂ ಇದ್ದ ತಾವು ಹೆಣ್ಣುಗಳು ಎಂಬ ಭಾವನೆ ಬದಲಾಗಲಿಲ್ಲ.

ಈ ವೇಳೆಗೆ ಅವರ ದೇಶದಲ್ಲಿಯೇ ನಡೆದ ಲಿಂಗ ಪರಿವರ್ತನೆಯ ಶಸ್ತ್ರಚಿಕಿತ್ಸೆಯ ವರದಿಯೊಂದು ಪತ್ರಿಕೆಯಲ್ಲಿ ಪ್ರಕಟವಾಯಿತು. ದೈಹಿಕವಾಗಿ ಗಂಡುಗಳು ಮಾನಸಿಕವಾಗಿ ಹೆಣ್ಣುಗಳು ಎಂದು ಮನವರಿಕೆಯಾಗಿದ್ದ ಸೋದರರು ಆ ಆಸ್ಪತ್ರೆಗೆ ಓಡಿದರು. ರೋಗಿಯನ್ನು ಕಂಡರು. ವೈದ್ಯರನ್ನು ಸಂಪರ್ಕಿಸಿ ತಮ್ಮ ಸಮಸ್ಯೆಗಳನ್ನು ತೋಡಿಕೊಂಡರು. ವೈದ್ಯರು 'ಲಿಂಗಾಂತರ' (Trans-Sexualism) ಕುರಿತು ಪುಸ್ತಕ ನೀಡಿದರು. ಆಗ ತಮ್ಮ ಈ ತೊಂದರೆಗೆ ಒಂದು ಹೆಸರೂ ಉಂಟು ಎಂಬುದು ಅರ್ಥವಾಯಿತು. ಜೊತೆಗೆ ತಮ್ಮಂತೆ ಇದೇ ಸಮಸ್ಯೆಯಿರುವ ಸಾವಿರಾರು ಜನ ಪ್ರಪಂಚದ ತುಂಬಾ ಇದ್ದಾರೆ ಎಂದು ತಿಳಿದು ಮನಸ್ಸಿಗೆ ಸ್ವಲ್ಪ ಸಮಾಧಾನ ತಂದುಕೊಂಡರು.

ಈ ಮಧ್ಯೆ ಮೆಹ್ರಾಬ್ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಇಂಗ್ಲೆಂಡಿಗೆ ಹೋದ. ತಾಯ್ನಾಡಿಗಿಂತ ಭಿನ್ನವಾದ ವಾತಾವರಣ ಅಲ್ಲಿತ್ತು. ಅಲ್ಲಿ ತನ್ನಿಷ್ಟದಂತೆ ವೇಷ ಭೂಷಣ ಧರಿಸಲು ಯಾವುದೇ ಅಡ್ಡಿಯಿರಲಿಲ್ಲ.

ಸಾಧ್ಯವಾದರೆ ಮದುವೆಯಾಗಬೇಕೆಂಬ ಆಸೆಯೂ ಆಕೆಗಿದೆ.

ಇಷ್ಟೆಲ್ಲ ಹೇಳಿದ ನಂತರ ಡಾಕ್ಟರರು ಲಿಂಗ ಪರಿವರ್ತನೆಯನ್ನು ಹೇಗೆ ಮಾಡುತ್ತಾರೆಂಬ ಪ್ರಶ್ನೆ ಏಳುವದು ಸಹಜ. ಇಲ್ಲಿ ನಾವು ಒಂದು ಸಂಗತಿಯನ್ನು ಗಮನಿಸಬೇಕು. ಬಾಹ್ಯವಾಗಿ ಕಾಣಿಸಿಕೊಳ್ಳುವ ಲಿಂಗದ ವಿರುದ್ಧಲಿಂಗ ವಾಸ್ತವದಲ್ಲಿ ಇರುತ್ತದೆ. ಇದಕ್ಕೆ ಪ್ರಚ್ಛನ್ನಲಿಂಗವೆಂಬ ಹೆಸರು. ಸ್ತ್ರೀಯರಿಗೆ ಪ್ರತ್ಯೇಕವಾದ ಹಾರ್ಮೋನುಗಳು ಕಡಿಮೆ ಪ್ರಮಾಣದಲ್ಲಿ ಪುರುಷರಲ್ಲಿಯೂ ಪುರುಷರಿಗೇ ಪ್ರತ್ಯೇಕವಾದ ಹಾರ್ಮೋನುಗಳು ಅಲ್ಪ ಪ್ರಮಾಣದಲ್ಲಿ ಸ್ತ್ರೀಯರಲ್ಲಿಯೂ ಇರುತ್ತವೆ. ಆದರೆ ಈ ಪ್ರಮಾಣ ವ್ಯತ್ಯಸ್ತಗೊಂಡಾಗ ಗಂಡೆಂದು ಬೆಳೆಸಲ್ಪಟ್ಟಾತ ಸ್ತ್ರೀ ಲಕ್ಷಣಗಳನ್ನು ಹೊಂದಿ ಸ್ತ್ರೀಯಾಗಲು ಹಾತೊರೆಯಬಹುದು. ಹಾಗೆಯೇ ಹೆಣ್ಣೆಂದು ಬೆಳೆಸಲ್ಪಟ್ಟ ವ್ಯಕ್ತಿ ಪುರುಷ ಲಕ್ಷಣಗಳನ್ನು ಹೊಂದಿ ಪುರುಷನಾಗಲು ಇಚ್ಛಿಸಬಹುದು. ಅದೇ ರೀತಿ ಜನ್ಮನಾಡಿಯು ಮಿತಿಮೀರಿದ ಬೆಳವಣಿಗೆಯಿಂದಾಗಿ ಅದನ್ನು ಶಿಶ್ನವೆಂದು ಭಾವಿಸಿ ಹುಡುಗಿಯನ್ನು ಹುಡುಗನಂತೆ ಬೆಳೆಸುವ ಸಾಧ್ಯತೆಯೂ ಇದೆ.

ಪ್ರಚ್ಛನ್ನಲಿಂಗ ಒಂದು ಜಟಿಲ ಸಮಸ್ಯೆ. ಅಮೇರಿಕದಲ್ಲಿ ನಾಲ್ಕು ಲಕ್ಷ ಮಂದಿ ಲಿಂಗ ಬದಲಾವಣೆಯ ಅಗತ್ಯವಿದ್ದವರು ಇದ್ದಾರಂತೆ. ಇಂಥವರಿಗೆ ಲಿಂಗಬದಲಾವಣೆ ಅಗತ್ಯವೇ ಎಂಬ ಬಗ್ಗೆ ಮನೋರೋಗತಜ್ಞ, ಶಸ್ತ್ರಚಿಕಿತ್ಸಕ, ಮನಃಶಾಸ್ತ್ರಜ್ಞ, ಸ್ತ್ರೀರೋಗ ತಜ್ಞ, ಸರಾಜಿಕ ಶಸ್ತ್ರಚಿಕಿತ್ಸಕ ಹೀಗೆ ವೈದ್ಯ ಪರಿಣತರ ತಂಡವೇ ಪರೀಕ್ಷಿಸಿ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಚಿಕಾಗೋದ ನಾರ್ಥ್‌ವೆಸ್ಟರ್ನ್ ವಿಶ್ವವಿದ್ಯಾನಿಲಯದ ಇಂಥ ಒಂದು ತಂಡ 370 ಮಂದಿಯನ್ನು ಪರೀಕ್ಷಿಸಿದಾಗ 02 ಮಂದಿಯನ್ನು ಮಾತ್ರ ಶಸ್ತ್ರಚಿಕಿತ್ಸೆಗೆ ಆರಿಸಲಾಯಿತು. ಈ ಶಸ್ತ್ರಚಿಕಿತ್ಸೆ ಮಾಡಲು ಹದಿನೆಂಟರ ವಯಸ್ಸು ಅತ್ಯಂತ ಸೂಕ್ತವೆಂದು ವೈದ್ಯರು ಅಭಿಪ್ರಾಯಪಡುತ್ತಾರೆ.

ಶಸ್ತ್ರಚಿಕಿತ್ಸೆ ನಡೆಸುವುದೆಂದು ತೀರ್ಮಾನಿಸಿದ ಮೇಲೆ ಸ್ತ್ರೀ ಹಾರ್ಮೋನ್‌ಗಳನ್ನು ನಿಯಮಿತವಾಗಿ ತೆಗೆದುಕೊಳ್ಳಬೇಕಾಗುತ್ತದೆ. ಸ್ತನಗಳ ಬೆಳವಣಿಗೆ, ಸ್ವರ ಬದಲಾವಣೆ. ಇವುಗಳಿಗೆ ಹಾರ್ಮೋನ್‌ಗಳು ಅಗತ್ಯ. ಕನಿಷ್ಠ ಪಕ್ಷ ಆರು ತಿಂಗಳು ತಾನು ಬದಲಾವಣೆಯಾಗುವ ಲಿಂಗದ ಉಡುಗೆ ತೊಡುಗೆ ಧರಿಸಿ ರಿಹರ್ಸಲ್ ಮಾಡಬೇಕು. ಹೆಸರನ್ನು ಅಧಿಕೃತವಾಗಿ ಬದಲಿಸಿಕೊಳ್ಳಬೇಕು. ಗಂಡು ಹೆಣ್ಣಾಗುವ ಶಸ್ತ್ರಚಿಕಿತ್ಸೆ ಹೆಣ್ಣು-ಗಂಡಾಗುವ ಶಸ್ತ್ರಚಿಕಿತ್ಸೆಗಿಂತ ಸರಳ. ಆದರೆ ಗರ್ಭಕೋಶವಿಲ್ಲದಿರುವದರಿಂದ ಈ ಹೆಣ್ಣು ಗರ್ಭಿಣಿಯಾಗಲಾರಳು, ಲೈಂಗಿಕ ಸಮಾಗಮ ಮಾತ್ರ ಸಾಧ್ಯ. ಹೆಣ್ಣು ಗಂಡಾದಾಗ, ಕೃತಕ ಜನನೇಂದ್ರಿಯವನ್ನು ಹೊಟ್ಟೆಯ ಚರ್ಮ ಹಾಗೂ ಕೊಬ್ಬಿನಿಂದ ಮಾಡಲಾಗುವದು. ಆದರೆ ಲೈಂಗಿಕ ಸಮಾಗಮಕ್ಕೆ ಅನುವಾಗುವಂತೆ ಅದನ್ನು ಕೃತಕವಾಗಿ ಉದ್ರೇಕಗೊಳಿಸಬೇಕಷ್ಟೇ. ಈ ದಿಸೆಯಲ್ಲಿ ಲಿಂಗಪರಿವರ್ತನೆಯ ಶಸ್ತ್ರಚಿಕಿತ್ಸೆಯ ಯಶಸ್ಸು ಸೀಮಿತ.

ಈ ಶಸ್ತ್ರಚಿಕಿತ್ಸೆಯಿಂದ ಸಾಮಾಜಿಕ ತೊಂದರೆಗಳೂ ಇವೆ. ಒಮ್ಮೆ ಹೆಣ್ಣೆಂದೋ, ಗಂಡೆಂದೋ ಜನ ನಂಬಿದ್ದನ್ನು ರಾತ್ರಿ ಬೆಳಗಾಗುವುದರೊಳಗೆ ಬದಲಿಸುವುದು ಕಷ್ಟ. ಗರ್ಭವತಿಯಾಗದ ಹೆಣ್ಣನ್ನೂ ಸಮರ್ಥವಾಗಿ ಲೈಂಗಿಕ ಕ್ರಿಯೆಗೆ ಸಿದ್ಧನಾಗದ ಗಂಡನ್ನೂ ಮದುವೆಯಾಗುವವರು ಸುಲಭದಲ್ಲಿ ಸಿಗರು.

ಶಸ್ತ್ರಚಿಕಿತ್ಸೆಗಳನ್ನು ಕೆಲವು ಸಂದರ್ಭಗಳಲ್ಲಿ ಮಾಡದಿರಲೂ ಸಾಧ್ಯವಿಲ್ಲ. ಪತ್ರಕರ್ತರಾಗಿ ತಮ್ಮ ಜನನೇಂದ್ರಿಯ ಕಳೆದುಕೊಂಡ ಇಬ್ಬರ ಕಥೆ 'ಸ್ಟ್ರೇಟ್ಸ್ ಟೈಮ್ಸ್' ಪತ್ರಿಕೆಯಲ್ಲಿ ಡಾ. ನರೇಂದ್ರ ಪಾಂಡ್ಯ ಪರಿಚಯಿಸಿದ್ದಾರೆ. ಹಾಗೆಯೇ ಒಬ್ಬ ಬಾಲಕಿ ಅಥವಾ ಕೇವಲ ಲಿಂಗದ ಪ್ರಾಮುಖ್ಯತೆಯೇ ಎಂದು ಪತ್ತೆ ಹಚ್ಚುವದು ಕಷ್ಟ. ಜೊತೆಗೆ ಶಸ್ತ್ರಚಿಕಿತ್ಸೆಯ ಪರಿಣಾಮ ಶಾಶ್ವತ. ಹೀಗಾಗಿ ಇಂತಹ ಶಸ್ತ್ರಕ್ರಿಯೆಗಳನ್ನು ಮಾಡುವ ವೈದ್ಯರ ಹೊಣೆ ತೀರ ಗಂಭೀರ. ✡



# ಪೃಥ್ವಿಯ ಅಳತೆ

ಪೃಥ್ವಿ ಗೋಲಾಕಾರವಾಗಿದೆ ಎಂಬ ಆರಿಸ್ಟಾಟಲ್ಲನ ಅಭಿಪ್ರಾಯವನ್ನು ತೂಗಿನೋಡಿ ಈ ಭೂಗೋಲದ ಸುತ್ತಳತೆಯನ್ನು ಮನೆಯಲ್ಲಿಯೇ ಕುಳಿತು ಕಂಡುಹಿಡಿದಾತ ಗ್ರೀಕ್ ವಿಜ್ಞಾನಿ ಇರಾಟೋಸ್ಥೇನಿಸ್. ಆಗ (ಕ್ರಿಸ್ತಪೂರ್ವ ಮೂರನೆಯ ಶತಮಾನ) ಆತನಿಗೊಂದು ಸಮಸ್ಯೆ ತಲೆ ತಿನ್ನುತ್ತಿತ್ತು. ಆರಬ್ ವ್ಯಾಪಾರಿಗಳು. "ಪ್ರತಿ ವರ್ಷ ಜೂನ್ ೨೨ ರಂದು ಇಜಿಪ್ತಿನ 'ಸೈನ್'ನಲ್ಲಿ ಮಧ್ಯಾಹ್ನ ೧೨ ಘಂಟೆಗೆ ಯಾವ ವಸ್ತುವಿಗೂ ನೆರಳೇ ಇರುವದಿಲ್ಲ" ಎಂದು ಹೇಳುತ್ತಿದ್ದರು. ಅಷ್ಟೇ ಅಲ್ಲ, ಆಗ ಯಾವ ಬಾವಿಯಲ್ಲಿ ಇಣುಕಿದರೂ ಅದು ಎಷ್ಟೇ ಆಳವಾಗಿರಲಿ ಪ್ರತಿಬಿಂಬವಿಲ್ಲದೆ ತಳ ಸ್ಪಷ್ಟವಾಗಿ ಗೋಚರಿಸುತ್ತಿತ್ತಂತೆ. ಆದರೆ ಗ್ರೀಸಿನ ಅಲೆಕ್ಸಾಂಡ್ರಿಯದಲ್ಲಿ ಮಾತ್ರ ಅದೇ ದಿನ ಅದೇ ವೇಳೆಗೆ ವಸ್ತು ಎಷ್ಟೇ ಸಣ್ಣದಿದ್ದರೂ ನೆರಳು ಇರುತ್ತಿತ್ತಲ್ಲದೇ ಬಾವಿಗಳಲ್ಲಿಯೂ ನೆರಳನ್ನು ಕಾಣಬಹುದಿತ್ತು. ಹೀಗೇಕೆ ಎಂಬುದೇ ಇರಾಟೋಸ್ಥೇನಿಸ್ಸನ ಚಿಂತೆ.

ಈ ಸಮಸ್ಯೆಯನ್ನು ಬಿಡಿಸಹೋಗಿ ಆತ ಪೃಥ್ವಿಯ ಸುತ್ತಳತೆ ಹಾಗೂ ಗಾತ್ರಗಳನ್ನು ಕಂಡುಹಿಡಿದುಬಿಟ್ಟ. ಅವನ ತರ್ಕ ಈ ರೀತಿಯಾಗಿತ್ತು: ಜೂನ್ ೨೨ರಂದು ಕರ್ಕವೃತ್ತದ ಮೇಲೆ ಸೂರ್ಯ ಬಂದಾಗ, ಕರ್ಕವೃತ್ತದ ಮೇಲಿರುವ ಸೈನ್‌ನಲ್ಲಿ ನೆರಳಿಲ್ಲದಾಗುತ್ತಿತ್ತು. ಆದರೆ ಅದೇ ವೇಳೆ ೫೦೦೦ ಸ್ಟೇಡಿಯಾ* ದೂರದಲ್ಲಿರುವ ಅಲೆಕ್ಸಾಂಡ್ರಿಯದಲ್ಲಿ ಪೃಥ್ವಿಯ ವಕ್ರತೆಯಿಂದಾಗಿ ನೆರಳು ಕಾಣುತ್ತಿತ್ತು. ಅಲೆಕ್ಸಾಂಡ್ರಿಯದಲ್ಲಿ ಸೂರ್ಯನನ್ನು ನಿಖರವಾಗಿ ಪರೀಕ್ಷಿಸಿದಾಗ ಆತ ನಡುನೆತ್ತಿಯಿಂದ ೭°೧೫' ದಕ್ಷಿಣಕ್ಕಿದ್ದ. ಹೀಗಾಗಿ ಸೂರ್ಯಕಿರಣಗಳು ನೇರವಾಗಿ ಬೀಳುತ್ತಿದ್ದವು. ಅಂದರೆ ಸೈನ್ ಮತ್ತು ಅಲೆಕ್ಸಾಂಡ್ರಿಯಗಳ ನಡುವಿನ ಭೂಮಿ ೭°೧೫' ವಕ್ರವಾಗಿದೆ ಎಂದಂತಾಯಿತು. ಇದೇ ಲೆಕ್ಕದ ಪ್ರಕಾರ ಪೃಥ್ವಿಯ ಸುತ್ತಳತೆ ಒಂದು ವೃತ್ತವೆಂದು ತಿಳಿದರೆ, ೩೬೦° ಕೋನಕ್ಕೆ ೨೫೦,೦೦೦ ಸ್ಟೇಡಿಯ* ಅಂದರೆ ೨೪,೫೦೦ ಮೈಲುಗಳಾಯಿತು.

— ವಿ. ಎ. ಹಿರೆಮಠ

---

* ೧ ಸ್ಟೇಡಿಯಾ = ೫೧೭ ಅಡಿಗಳು

# ಬಿಳಿಯರೇ ಬಿಳಿಯರ ವಿರುದ್ಧ ದಂಗೆಯೆದ್ದಾಗ

**ಆರ್. ಜಿ. ಹೆಗಡೆ**

೧೮೭೦ ನೇ ವರ್ಷದ ಮಾರ್ಚ್ ಹನ್ನೆರಡನೇ ತಾರೀಖು. ನಸುಕು ಹರಿಯುವ ಮುನ್ನ ಬ್ರಿಟನ್ನಿನ ಮರ್ಸಿ ಬಂದರಿನಲ್ಲಿ ತಾಸ್ಮಾನಿಯಾ ಹಡಗು ಬಂದು ನಿಂತಿತು. ೧೮೬೯ನೆಯ ನವೆಂಬರಿನಲ್ಲಿ ಪಶ್ಚಿಮ ಬಂಗಾಲದ ಚಿನ್ಸುರಾ ಬಂದರಿನಿಂದ (ಗಂಗಾ ನದಿ) ಇಂಗ್ಲೆಂಡಿಗೆ ಹೊರಟಿತ್ತು ಈ ನೌಕೆ. ಕಮಾಂಡರ್ ಗಾಸ್ಟಿಯನ್ ಎಂಬುವನು ಈ ಹಡಗಿನ ಕ್ಯಾಪ್ಟನ್. ಹಡಗಿನಲ್ಲಿದ್ದವರು ಭಾರತದ ಬ್ರಿಟಿಶ್ ಸೈನ್ಯದಿಂದ ನಿವೃತ್ತಿಗೊಳಿಸಲ್ಪಟ್ಟ ಐರಿಶ್ ಸೈನಿಕರು. ಭಾರತದಲ್ಲಿ ಬ್ರಿಟಿಶ್ ವಸಾಹತು ಬೇರೂರಲು ರಕ್ತ ಹರಿಸಿದ ವೀರರು ಇವರೇ. ಆದರೆ ಅಪಾಯಕಾರಿ ಬಂಡುಗಾರರೆಂದು ಪರಿಗಣಿಸಿ. ಶಿಕ್ಷೆಯ ರೂಪದಲ್ಲಿ ಸೇನೆಯಿಂದ ನಿವೃತ್ತಿಗೊಳಿಸಿ ಅವರನ್ನು ಸ್ವದೇಶಕ್ಕೆ ರವಾನಿಸುತ್ತಿದ್ದರು. ಮೂರನೇ ಬಂಗಾಲ-ಯುರೋಪ್ ರೆಜಿಮೆಂಟಿನ ಕ್ಯಾಪ್ಟನ್ ಅಲೆಗ್ಸಾಂಡರ್ ಹಾಂಡನ ಸಂರಕ್ಷಣೆಯಲ್ಲಿ ಈ ಸೈನಿಕರನ್ನು ಇಂಗ್ಲೆಂಡಿಗೆ ಕಳಿಸಲಾಗಿತ್ತು.

ಲಿವರ್‌ಪೂಲಿನಲ್ಲಿರುವ ಕೌನ್ಸಿಲ್ ಆಫ್ ಇಂಡಿಯಾದ ಏಜೆಂಟ್ ವಿಲಿಯಂ ರತ್‌ಬೋನನಿಗೆ ಬೆಳಿಗ್ಗೆ ಹತ್ತು ಗಂಟೆಗೆ 'ತಾಸ್ಮಾನಿಯಾ'ದ ಆಗಮನದ ಸುದ್ದಿ ತಿಳಿಯಿತು. ತಡಮಾಡದೇ ನಾವೆಯೊಂದರಲ್ಲಿ ಹಡಗಿಗೆ ಹೋದ. ಚಿನ್ಸುರಾದಿಂದ ಹಡಗು ಹೊರಟಾಗ ಅದರಲ್ಲಿ ೧೦೫೦ ಜನರಿದ್ದರೆಂದು ರತ್‌ಬೋನನಿಗೆ ತಿಳಿಯಿತು. ಆ ಪೈಕಿ ೯೮೫ ಜನ ನಿವೃತ್ತರಾದ ಸೈನಿಕರು. ೫೦ ಜನ ಸೇನಾಧಿಕಾರಿಗಳು, ೩೧ ಮಕ್ಕಳು. ೧೭ ಜನ ಮಹಿಳೆಯರು ಸೇರಿದ್ದರು. ಆದರೆ ಮರ್ಸಿ ಬಂದರು ತಲುಪುವುದರೊಳಗೇ ನೂರೈವತ್ತು ಜನ ದಣಿವಿನಿಂದ ಸಾವನ್ನಪ್ಪಿದ್ದರು. ಉಳಿದವರು ಅಸ್ವಾಸ್ಥ್ಯದಿಂದ ಚಿಂತಾಜನಕ ಸ್ಥಿತಿಯಲ್ಲಿದ್ದರು. ಹಡಗಿನ ಗೋಡೌನು ಖಾಲಿಯಾಗಿತ್ತು. ಒಟ್ಟಿನಲ್ಲಿ ಅವರೆಲ್ಲ ಹರಕು ಬಟ್ಟೆ ತಿರುಕರಾಗಿದ್ದರು.

ಈ 'ತಾಸ್ಮಾನಿಯಾ' ಕಾಂಡ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರ ಹಸ್ತಾಂತರ ಸಂದರ್ಭದಿಂದಲೇ ಪ್ರಾರಂಭವಾಗಿತ್ತು. ಸಿಪಾಯಿ ದಂಗೆಯ ನಂತರ ವಿಕ್ಟೋರಿಯಾ ರಾಣಿಗೆ ವಸಾಹತಿನ ಅಧಿಕಾರ ವಹಿಸಲಾಗಿತ್ತು. ಕಂಪನಿಯ ಅಧೀನ ನೌಕರರೆಲ್ಲ ಅವರ ಸೇವೆಗಳನ್ನು ಮಹಾರಾಣಿಗೇ ಅರ್ಪಿಸುವಂತೆ ತಿಳಿಸಲಾಗಿತ್ತು.

ಕಂಪನಿಯು ಸೈನಿಕರಿಗೆ ಇದೊಂದು ಆಘಾತವಾಗಿತ್ತು. ಅವರೆಲ್ಲ ಭಾರತವನ್ನು ಗೆದ್ದು ಸಾಕಷ್ಟು ಸಂಪತ್ತು ಗಳಿಸಿ ಪಾಳೇಗಾರಿಕೆ ನಡೆಸುವ ಉದ್ದೇಶದಿಂದ ಬಂದವರು. ಮೊದಮೊದಲು ತಮ್ಮ ಸೇವೆಯನ್ನು ರಾಣಿಗಾಗಿ ಮುಂದುವರಿಸುವ ಆಜ್ಞೆ ಕೇಳಿದ ಬಹುತೇಕ ಸೈನಿಕರು ನಕ್ಕುಬಿಟ್ಟರು. ಕ್ರಮೇಣ ಆಜ್ಞೆಯನ್ನು ಮನ್ನಿಸದ ಸೈನಿಕರನ್ನು ದಂಡಿಸುವ ವಿಚಾರ ತಿಳಿದಾಗ ಬೆಂಕಿ ಭುಗಿಲೆದ್ದಿತು. ೧೮೫೯ ನೇ . ವರ್ಷದ ವಸಂತದಲ್ಲಿಯೇ ಈ ಅಸಂತೋಷದ ವಿಚಾರ ಬ್ರಿಟಿಶ್ ಶಾಸಕರಿಗೆ ತಿಳಿಯಿತು. ಎರಡು ವರ್ಷ ಮುಂಚೆ ಭಾರತೀಯರ ಸ್ವಾತಂತ್ರ್ಯ ಸಂಗ್ರಾಮವನ್ನು ನಿರ್ದಯೆಯಿಂದ ಹತ್ತಿಕ್ಕಿದ್ದೇನೋ ಸರಿ; ಈಗ ಬಿಳಿಯರ ವಿರುದ್ಧ ಬಿಳಿಯರೇ ಬಂಡೆದ್ದರೆ ಈ ಬ್ರಿಟಿಶ್ ವಸಾಹತು ಉಳಿಯುವಂತಿರಲಿಲ್ಲ.

ಈಸ್ಟ್ ಇಂಡಿಯಾ ಕಂಪನಿಯ ಸೈನ್ಯ ಸಂಘಟನೆ ಎರಡು ವಿಧದಲ್ಲಾಗುತ್ತಿತ್ತು. ಭಾರತೀಯರೂ ಸೈನ್ಯದಲ್ಲಿದ್ದರು. ಆದರೆ ಅವರ ಮೇಲೆ ಸರಕಾರ ಎಂದೂ ವಿಶ್ವಾಸವಿಟ್ಟಿರಲಿಲ್ಲ. ಇಂತಹ ಸೈನಿಕ ತುಕಡಿಗಳ ಹಿಡಿತವೆಲ್ಲ ಯುರೋಪಿಯನ್ ಅಧಿಕಾರಿಗಳ ಕೈಯಲ್ಲಿರುತ್ತಿತ್ತು. ಸೈನ್ಯಕ್ಕೆ ಬೇಕಾಗುವ ಬಿಳಿಯರನ್ನು ಐರ್ಲಂಡ್ ಹಾಗೂ ವೇಲ್ಸ್‌ಗಳಿಂದ ಭರ್ತಿ ಮಾಡಲಾಗುತ್ತಿತ್ತು. ಇನ್ನೊಂದು ವಿಧವೆಂದರೆ: ಕಂಪನಿಯೇ ಎಲ್ಲ ವೆಚ್ಚಗಳನ್ನು ವಹಿಸಿಕೊಳ್ಳಬೇಕಾದ ಬ್ರಿಟಿಶ್ ಸಾಮ್ರಾಜ್ಯದ ನಿರ್ದಿಷ್ಟ ಸೈನಿಕ ಪಡೆ.

ಹೀಗೆ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳಿಂದ ಆಯ್ಕೆಯಾದ ಸೈನ್ಯವು. ಕಂಪನಿಗಲ್ಲದೆ ಸಾಮ್ರಾಜ್ಯಕ್ಕೆ ನಿಷ್ಠವಾಗಿರಬೇಕಾದ ಅವಶ್ಯಕತೆಯಿರಲಿಲ್ಲ. ಸನ್ ೫೭ರ ದಂಗೆಯಲ್ಲಿ ಯುರೋಪಿನಿಂದ ಕರೆಸಿಕೊಂಡ ಸೈನ್ಯಕ್ಕೆ ಕಂಪನಿಯ ಸರಕಾರ ನಾನಾ ರೀತಿಯ ಆಸೆ ಆಮಿಷಗಳನ್ನು ತೋರಿಸಿತ್ತು. ಆಶ್ವಾಸನೆಗಳನ್ನು ನೀಡಿತ್ತು. ಕೊನೆಗೆ ಎಲ್ಲವನ್ನೂ ಅಲ್ಲಗಳೆದು ಸಾಮ್ರಾಜ್ಯಕ್ಕೆ ನಿಷ್ಠರಾಗುವಂತೆ ಆಜ್ಞೆ ವಿಧಿಸಿತ್ತು.

ಈ ಅಧಿಕಾರ ಹಸ್ತಾಂತರದ ವಿಷಯ ತಿಳಿದ ಐರಿಶ್ ಸೈನಿಕರು ಮೇಲಧಿಕಾರಿಗಳೆದುರು ತಮ್ಮ ವಿರೋಧ ವ್ಯಕ್ತಪಡಿಸಿದರು. ಅಪ್ರಾಮಾಣಿಕರೂ ವಂಚಕರೂ ಆದ ಇಂಗ್ಲೆಂಡಿನವರ ಸೇವೆಯಲ್ಲಿರುವುದು ತಮಗಿಷ್ಟವಿಲ್ಲವೆಂದು ಸಾರಿದರು. ಸಾಮ್ರಾಜ್ಯದ ಸೈನ್ಯ ತುಕಡಿಯ ಅಧಿಕಾರಿಗಳು, ಐರಿಶರನ್ನು ಹತ್ತಿಕ್ಕುವಲ್ಲಿ ವಿಫಲರಾಗಿ ಕೊನೆಗೆ ಅವರಿಗೂ ವಿಶೇಷ ಸವಲತ್ತುಗಳನ್ನು ನೀಡಿದರು.

ಅವರ ದೈನಂದಿನ ಕೆಲಸದ ಅವಧಿಯನ್ನು ಕಡಿಮೆ ಮಾಡಲಾಯಿತು. ಅಲ್ಲದೆ ಮೀನು ಹಿಡಿಯುವುದು, ತೋಟಗಾರಿಕೆ, ಶಿಕಾರಿ ಮುಂತಾದವುಗಳಿಗೆ ಅವಕಾಶ, ಬ್ರಿಟನ್ನಿನ ಸೈನಿಕರಿಗಾಗಿಯೇ ತೆರೆಯಲ್ಪಟ್ಟ ಕೈಕೆಲಸದ ಶಾಲೆಯಲ್ಲಿ ಐರಿಶ್ ಸೈನಿಕರಿಗೂ ಪ್ರವೇಶ, ಅಲ್ಲಿ ಅವರು ತಮಗಿಷ್ಟವಾದ ಕೆಲಸ ಕಲಿತು, ತಾವು ತಯಾರಿಸಿದ ವಸ್ತುಗಳನ್ನು ಮಾರಿ ಹಣ ಗಳಿಸಬಹುದಾದ ಸ್ವಾತಂತ್ರ್ಯ, ಅಲ್ಲದೇ ಅವರ ಸೇವೆಗಾಗಿ ಆಳುಗಳು ಇವು ಅವರಿಗೆ ಸಿಕ್ಕ ಸವಲತ್ತುಗಳು. 'ಎ ಹಿಸ್ಟರಿ ಆಫ್ ಫರ್ಸ್ಟ್ ಮದ್ರಾಸ್ ಯುರೋಪಿಯನ್ ರೆಜಿಮೆಂಟ್' ಎಂಬ ೧೮೫೫ನೆಯ ವರ್ಷದ ದಾಖಲೆಗಳಿಂದ ಈ ವಿವರಗಳು ದೊರೆಯುತ್ತವೆ. ಈ ಐರಿಶ್ ಸೈನಿಕರು ಕೇಳಿದ ಸವಲತ್ತುಗಳೇನು ಹೆಚ್ಚಿಲ್ಲ. ಭಾರತದಲ್ಲಿ ಕಂಪನಿ ಸರಕಾರದ ಅಡಿಪಾಯ ಹಾಕಲು ರಕ್ತ ಹರಿಸಿದವರು ಇವರೇ. ಸನ್ ಐವತ್ತೇಳರ ಸಂಗ್ರಾಮಕ್ಕೆ ಮೊದಲು ೧೮೩೮ ರಿಂದ ೪೨ ರ ವರೆಗಿನ ಅಫಘಾನ್ ಯುದ್ಧ, ೧೮೪೩ರ ಗ್ವಾಲ್ಹೇರ ಹಾಗೂ ಸಿಂಧ ಯುದ್ಧಗಳು ಮತ್ತು ೧೮೪೫, ೧೮೪೮ ರ ಸಿಖ್ ಯುದ್ಧಗಳಲ್ಲಿ ಇವರು ಶೌರ್ಯ-ಸಾಹಸಗಳಿಂದ ಮೆರೆದು ಜಯ ಗಳಿಸಿದ್ದರು. ಈ ಯುದ್ಧಗಳಲ್ಲೆಲ್ಲ ಸಾಮ್ರಾಜ್ಯದ ಸೈನ್ಯ ಭಾಗವಹಿಸಿರಲಿಲ್ಲ. ೧೮೫೭ರ ಬಂಡಾಯ ಪ್ರಾರಂಭವಾದಾಗ ಕಲ-ಕತ್ತಾ, ಮದ್ರಾಸ್, ಮುಂಬಯಿ ಪ್ರೆಸಿಡೆನ್ಸಿಗಳಲ್ಲಿ ಕಂಪನಿಯ ಬಳಿ ಅಶ್ವದಳ-ಪದಾತಿ ದಳ ಇರಲೇ ಇಲ್ಲ. ಬಂಗಾಲ ರೆಜಿಮೆಂಟಿನಲ್ಲಿ ಮಾತ್ರ ಅಶ್ವದಳ ಹಾಗೂ ಪದಾತಿ ದಳ ಸೇರಿ ಒಂಭತ್ತು ಯುರೋಪಿಯನ್ ತುಕಡಿಗಳಿದ್ದವು. ಇವರ ಸಹಾಯಕ್ಕಾಗಿ ದೇಶೀ ಭೂಪಡೆಯ ಮೂರು ತುಕಡಿಗಳಿದ್ದವು. ನಾಲ್ಕು ಅಶ್ವಾರೋಹಿ ತುಕಡಿಗಳಿದ್ದವು. ಈ ಸೈನಿಕರೂ ಬಂಡಾಯ ಹತ್ತಿಕ್ಕಲು

ನಿಜಾಮ ಹಾಗೂ ಸಿಂಧೆಗಳಿಂದ ಎರವಲು ತಂದಂಥವರು! ಈ ಬ್ರಿಟಿಶ್ ಹಾಗೂ ಎರವಲು ತಂದ ದೇಶೀ ಸೈನ್ಯಕ್ಕೆ ಅಪಾರ ದುರ್ಗತಿಯೊದಗಿತು. ಕ್ರಾಂತಿಯ ಬೆಂಕಿ ಮೊದಲು ಈ ಸೈನ್ಯವನ್ನೇ ಆಹುತಿ ತೆಗೆದುಕೊಂಡಿತು. ದೇಶೀ ಸೈನಿಕರೂ ಅವರ ಬಿಳಿ ಅಧಿಕಾರಿಗಳೂ ಇರುವೆಗಳಂತೆ ಸಾಯುತ್ತಿದ್ದರು.

೧೮೫೮ರ ವರೆಗೆ ಭಾರತಕ್ಕೆ ಬಂದಿಳಿದ ಐರಿಶ್ ಜನ ಸೈನ್ಯದಲ್ಲಿ ಭರ್ತಿಯಾಗುತ್ತಿದ್ದರು. ಈ ಸೈನ್ಯದ ನೇತೃತ್ವ ಮಾತ್ರ ಬ್ರಿಟಿಶ್ ಅಧಿಕಾರಿಗಳ ಕೈಯಲ್ಲಿತ್ತು. ಹೀಗೆ ಭರ್ತಿಯಾದ ಐರಿಶ್ ಸೈನಿಕರ ನಿರ್ದಿಷ್ಟ ಸಂಖ್ಯೆ ಎಷ್ಟೆಂದು ತಿಳಿದಿರದಿದ್ದರೂ ಗವರ್ನರ್ ಜನರಲ್ ಲಾರ್ಡ್ ಕ್ಯಾನಿಂಗನಿಗೆ ಸಂಖ್ಯೆ ಹದಿನೈದು ಸಾವಿರ ದಾಟಿದೆಯೆಂದು ಔಪಚಾರಿಕವಾಗಿ ತಿಳಿಸಲಾಗಿತ್ತು. ಇದೇ ಸೈನಿಕರು ಬಂಡಾಯ ನಿಂತ ಮೇಲೆ ತಮ್ಮ ಹಕ್ಕುಗಳ ಸೊಲ್ಲೆತ್ತಿದಾಗ ಬ್ರಿಟಿಶ್ ಆಡಳಿತಾಧಿಕಾರಿಗಳು ಕೆರಳಿದರು! ಹೊಸ ಸೈನ್ಯ ಸಂಘಟನೆಯ ಮರು ವರ್ಷವೇ ಕಂಪನಿಯ ಆಳಿಕೆ ಕೊನೆಗೊಂಡು, ಭಾರತದ ಆಡಳಿತ ಬ್ರಿಟಿಶ್ ಸಾಮ್ರಾಜ್ಯಕ್ಕೆ ಸೇರಿತ್ತು.

*

ಮೊದಲು ಐರಿಶ್ ಸೈನಿಕರ ವಿರೋಧ ಕಾಣಿಸಿದ್ದು ಲಖನೋನಲ್ಲಿ. ತಾವು ಮಹಾರಾಣಿಯ ಸೇವೆಗೆ ಬದ್ಧರಾಗಿಲ್ಲವೆಂದು ಅವರು ಸ್ಪಷ್ಟವಾಗಿ ತಿಳಿಸಿದರು. ಸೈನ್ಯಕ್ಕೆ ಸೇರಿಸಿಕೊಂಡಾಗ. ಅವರಿಂದ ತುಂಬಿಸಿದ ಪ್ರತಿಜ್ಞಾಪತ್ರದಲ್ಲಿ. ಕಂಪನಿಯ ಸರಕಾರದ ಸೇವೆಗೆ. ಎಂಬ ಕರಾರು ಹಾಕಲಾಗಿತ್ತು. ಈಗ ಮಹಾರಾಣಿಯ ಸೇವೆಗೊಪ್ಪಬೇಕಾದರೆ ಹೊಸದಾಗಿ ಪ್ರತಿಜ್ಞಾಪತ್ರ ಸಿದ್ಧಪಡಿಸಿ, ಬ್ರಿಟಿಶರಿಗಿಂತ ತಾವು ಸೀನಿಯರ್ ಎಂದು ಪರಿಗಣಿಸಬೇಕೆಂಬ ಕರಾರನ್ನು ಐರಿಶರು ಮುಂದಿಟ್ಟರು.

ಭಾರತದಲ್ಲಿ ಬ್ರಿಟಿಶ್ ಸೇನೆಯ ಪ್ರಧಾನಾಧಿಕಾರಿಯಾಗಿದ್ದ ಲಾರ್ಡ್ ಕ್ಲೈಡನ ಪೂರ್ಣ ಸಹಾನುಭೂತಿ ಐರಿಶರ ಮೇಲಿತ್ತು ಎನ್ನುವುದು ಆತ ೧೮೫೭ ರಲ್ಲಿ ಲಾರ್ಡ್ ಕ್ಯಾನಿಂಗನಿಗೆ ಬರೆದ ಪತ್ರದ ಈ ಅಂಶದಿಂದ ಇದು ಸ್ಪಷ್ಟವಾಗುತ್ತದೆ:

“ಉಚ್ಚಾಧಿಕಾರದಿಂದ ಐರ ಸೈನಿಕರ ಅಹಂ ಹಾಗೂ ಮಹತ್ವವನ್ನು ಮುರಿಯುವ ಪ್ರಯಾಸ ನಡೆದಿರುವುದು ವಿಷಾದಕರ. ಅವರು ತಿರುಗಿ ಬಿದ್ದರೆ ಪೂರ್ತಿ ಯುರೋಪಿಯನ್ ರೆಜಿಮೆಂಟು ಅಸ್ತವ್ಯಸ್ತವಾಗುವುದರಲ್ಲಿ ಸಂಶಯವಿಲ್ಲ! ಅವರು ಬ್ರಿಟಿಶರಿಗಿಂತ ಸೀನಿಯಾರಿಟಿ ಬಯಸುವುದು ನ್ಯಾಯವೇ. ಅವರ ಬೇಡಿಕೆಯಿಂದಾಗಿ ಭಾರತದಲ್ಲಿ ಬ್ರಿಟಿಶ್ ಸತ್ತೆಗೆ ಅಪಾಯವಾಗುತ್ತದೆಂಬುದು ಹಾಸ್ಯಾಸ್ಪದ. ಗವರ್ನರ್ ಜನರಲ್ಲರು ಬ್ರಿಟಿಶ್ ಸರಕಾರದ ವೈಧಾನಿಕ ಸಲಹೆಗಾರರೊಂದಿಗೆ ವಿಚಾರ ವಿನಿಮಯ ನಡೆಸಿ, ಕೂಡಲೇ ಒಂದು ನಿರ್ಣಯಕ್ಕೆ ಬರಬೇಕೆಂದು ನನ್ನ ಅಭಿಪ್ರಾಯ...”

ಲಾರ್ಡ್ ಕ್ಯಾನಿಂಗ್ ಮತ್ತು ಸಲಹೆಗಾರರ ತೀರ್ಮಾನ ಬರಲು ವಿಳಂಬವಾಯಿತು. ಈ ಐರಿಶರ ಬಗ್ಗೆ ಎಳ್ಳಷ್ಟೂ ಸದಾಭಿಪ್ರಾಯ ಕ್ಯಾನಿಂಗನಿಗಿರಲಿಲ್ಲ. ಆತನ ಒಲವು ಹೇಗೆಂಬುದ ಕ್ಲೈಡನಿಗೂ ಗೊತ್ತು. ಇನ್ನು ಗವರ್ನರ್ ಜನರಲ್ಲನನ್ನು ಒತ್ತಾಯಿಸುವುದರಲ್ಲಿ ಅರ್ಥವಿರಲಿಲ್ಲ. ಲಾರ್ಡ್ ಕ್ಲೈಡ್, ರಾಜಪರಿವಾರದ ಪ್ರಭಾವಶಾಲೀ ವ್ಯಕ್ತಿಯಾದ ಕೆಂಬ್ರಿಜ್ಜಿನ ಡ್ಯೂಕನಿಗೆ ಪತ್ರ ಬರೆದು ಪರಿಸ್ಥಿತಿಯನ್ನು ವಿಸ್ತಾರವಾಗಿ ವಿವರಿಸಿದ.

ಆದರೇನೂ ಪ್ರಯೋಜನವಾಗಲಿಲ್ಲ. ಬ್ರಿಟಿಶ್ ಆಡಳಿತ, ದಂಗೆಯೆದ್ದ ಐರಿಶರ ವಿರುದ್ಧ ನಿರ್ಣಯ ತೆಗೆದುಕೊಂಡಿತು. ಸೈನಿಕರು ರಾಣಿಯ ಸೇವೆಗೆ ಬದ್ಧರಾಗಲೇಬೇಕು. ಇಲ್ಲದಿದ್ದರೆ ಅವರನ್ನು ನಿಃಶಸ್ತ್ರಗೊಳಿಸಬೇಕೆಂಬುದೇ ಬ್ರಿಟಿಶ್ ಸರಕಾರದ ತೀರ್ಮಾನವಾಗಿತ್ತು.

ಈ ಆಜ್ಞೆಗೆ ಪ್ರತಿಕ್ರಿಯೆ ಕಂಡುಬರಲು ವಿಳಂಬವಾಗಲಿಲ್ಲ. ಸನ್ ಐವತ್ತೇಳರ ಬಂಡಾಯ ಪ್ರಾರಂಭವಾದದ್ದು ಮೀರತ್ ಶಹರಿನಲ್ಲಿ. ಅಂದು ಮೇ ಮೂರನೇ ತಾರೀಖು. ಈ ಬಂಡಾಯದ ವಿಶೇಷವೆಂದರೆ, ಬಿಳಿಯರ ವಿರುದ್ಧ ಬಿಳಿಯರೇ ಬಂಡೆದ್ದಿದ್ದರು! ಈ ಬಂಡಾಯದಲ್ಲಿ ಪೂರ್ತಿ ಸೈನಿಕ ರೆಜಿಮೆಂಟೂ ಫಿರಂಗಿ ದಳವೂ ಸೇರಿದ್ದಿತು.

ವಿದ್ರೋಹವನ್ನು ಹತ್ತಿಕ್ಕುವುದಕ್ಕಾಗಿ ಕೂಡಲೇ

ಮಥುರಾದಿಂದ ಎರಡು ತುಕಡಿ ಸೈನ್ಯ ಕಳಿಸುವಂತೆ ಆಜ್ಞೆ ವಿಧಿಸಲಾಯಿತು. ಬಂಡುಗಾರರು ಸಾಮ್ರಾಜ್ಯವನ್ನು ಪೂರ್ತಿ ಹಾಳು ಮಾಡಲು ಪಣ ತೊಟ್ಟಿರುವರೆಂದೂ ಒಬ್ಬ ಇಂಗ್ಲೀಷನೂ ಉಳಿಯದಂತೆ ಮಾಡುವುದು ಅವರ ಗುರಿಯೆಂದೂ ನಂಬಲರ್ಹ ಮೂಲಗಳಿಂದ ಸರಕಾರಕ್ಕೆ ಗೊತ್ತಾಗಿತ್ತು.

ಮೀರತದ ಬಂಡುಗಾರರು, ತಮ್ಮ ಯೋಜನೆಯನ್ನು ಸೂಚಿಸಿ ಪಂಜಾಬಿನ ಯುರೋಪಿಯನ್ ರೆಜಿಮೆಂಟಿಗೆ ಬರೆದ ಪತ್ರಗಳು ಕೈ ತಪ್ಪಿ ಅಲ್ಲಿನ ಲೆಫ್ಟಿನಂಟ್ ಗವ್ಹರ್ನರನಿಗೆ ಸಿಕ್ಕವು. ಈ ಬಂಡಾಯದ ಗುರಿ, ಕೆಂಪು ಕೋಟೆಯನ್ನು ವಶಪಡಿಸಿಕೊಂಡು, ಯೂನಿಯನ್ ಜಾಕನ್ನಿಳಿಸಿ ಐರ್ಲೆಂಡಿನ ಧ್ವಜ ಹಾರಿಸುವದಾಗಿತ್ತು. ಇದಕ್ಕೆ ಅಡ್ಡ ಬರುವ ಬ್ರಿಟಿಶ್ ಸೈನಿಕರನ್ನೆಲ್ಲ ಕೊಂದು ಚಾಂದನಿ ಚೌಕದಲ್ಲಿ ತೂಗು ಹಾಕುವಂತೆಯೂ ತಿಳಿಸಲಾಗಿತ್ತು.

*

ಈ ಸೈನಿಕ ಬಂಡಾಯದ ಕಾರಣಗಳ ಬಗ್ಗೆ ಬೆಳಕು ಚೆಲ್ಲಿ ಎಂ. ಈ. ಅರ್ಚ್‌ಡಾಲ್ ಎಂಬ ಬ್ರಿಟಿಶ್ ಶಾಸಕ ಕಾಮನ್ಸ್ ಸಭೆಯಲ್ಲಿ ೧೮೬೧ರ ಮಾರ್ಚ್ ೨೩ ರಂದು ಮಾಡಿದ ಭಾಷಣದ ಒಂದು ಅಂಶ ಹೀಗಿದೆ:

"ಸೈನಿಕರ ಮನ ನೋಯಿಸಿದ ಘಟನೆಯೆಂದರೆ ಯುದ್ಧದಲ್ಲಿ ಸಂಧಿಯಾದಾಗ ಎರಡೂ ಪಕ್ಷಗಳು ತಮ್ಮ ಆಯುಧಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ರೀತಿಯಲ್ಲೇ ಅವರನ್ನು ರಾಣಿಯ ಸೇವೆಗೆ ಒಪ್ಪಿಸಲಾಗಿತ್ತು. ಅವರು ನಿರ್ಜೀವ ಆಯುಧಗಳಲ್ಲ, ಜೀವಂತ ವ್ಯಕ್ತಿಗಳು ಎಂಬುದನ್ನು ಪೂರ್ತಿ ಅಲಕ್ಷಿಸಲಾಗಿತ್ತು. ಅವರಲ್ಲೂ ಆತ್ಮವಿತ್ತು; ಮಾನಾಪಮಾನಗಳನ್ನು ಗುರುತಿಸುವ ಚೈತನ್ಯವಿತ್ತು. ಆದರೆ ಅವರನ್ನು ಸೈನಿಕರೆಂದು ಭಾವಿಸುವುದಿರಲಿ, ಮನುಷ್ಯರೆಂದು ಕೂಡ ಪರಿಗಣಿಸಲಿಲ್ಲ. ಪಶುಗಳಿಗಿಂತ ಕೀಳಾಗಿ, ಸಾವಿರಗಟ್ಟಲೆ ಸಂಖ್ಯೆಯಲ್ಲಿ ಅವರನ್ನು ಹಸ್ತಾಂತರಿಸಲಾಯಿತು."

ಲಾರ್ಡ್ ಕ್ಲೈಡ್ ಒಂದು ಅಪಘಾತದಲ್ಲಿ ಪೆಟ್ಟು ತಿಂದು ಕಸೌಲಿಯಿಂದ ಸಿಮ್ಲಾಕ್ಕೆ ಓಡಿದ. ಗವ್ಹರ್ನರನಿಂದ ಸಂಪೂರ್ಣ ಸೇನೆಯ ಆಧಿಪತ್ಯ ಪಡೆದು ಬಂಡಾಯವನ್ನು ಹತೋಟಿಗೆ ತರುವ ಆಶೆ ಅವನದು. ಕ್ಯಾನಿಂಗನಿಗೆ ಇದನ್ನೇ ಹೇಳಿದ ಕ್ಲೈಡ್ ಆದರೆ ಬೇಡಿಕೆ ತಿರಸ್ಕರಿಸಲ್ಪಟ್ಟಿತು.

ಈ ಮಧ್ಯೆ ಲಾಹೋರಿನಲ್ಲಿ ಬಂಡಾಯಗಾರರಿಗೂ ಪಶ್ಚಿಮ ಕ್ಷೇತ್ರದ ಸೇನಾಪತಿ ಲಾರ್ಡ್ ವಿಂಡ್-ಹ್ಯಾಮನಿಗೂ ಕಾಳಗ ಪ್ರಾರಂಭವಾಗಿತ್ತು. ವಿಂಡ್ ಹ್ಯಾಮನ ಕೈಗೆ ತೀವ್ರ ಗಾಯವಾಗಿ ಅತ ಮೈದಾನ ಬಿಟ್ಟು ಓಡಿಹೋದ. ಅಲಹಾಬಾದಿನಲ್ಲೂ ಘರ್ಷಣೆ ಶುರುವಾಯಿತು. ಕಾನ್ಪುರದಿಂದ ಧಾವಿಸಿ ಬಂದ ಜನರಲ್ ಜಾನ್ ಇಂಗ್ಲಿಸ್ ಈ ಘರ್ಷಣೆಯಲ್ಲಿ ಹೇಗೋ ಬದುಕಿ ಪಾರಾದ. ಗ್ವಾಲಿಯರಿನಲ್ಲಿ ಅಶ್ವದಳ ಬಂಡೆದ್ದು ಶಸ್ತ್ರಾಗಾರವನ್ನು ಮುತ್ತಿತು. ಅದು ಬ್ರಿಟಿಶರ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡು ಸೆರೆಮನೆಯಲ್ಲಿದ್ದ ಕೈದಿಗಳನ್ನು ಬಿಡುಗಡೆ ಮಾಡಿತು. ಮೀರತದ ಗೋಡೆಗಳ ಮೇಲೆಲ್ಲ ಕಂಪನಿ ಹಾಗೂ ಮಹಾರಾಣಿಯ ವಿರುದ್ಧ ಘೋಷಣೆಗಳು ರಾರಾಜಿಸಿದವು! ಬಂಡುಗಾರರು ಜಯ ಗಳಿಸುವಂತೆ ಕಂಡಿತು. ಅವರು ಬ್ರಿಟಿಶರನ್ನು ಹುಡುಹುಡುಕಿ ಕೊಲ್ಲತೊಡಗಿದರು. ಶಸ್ತ್ರಾಗಾರಗಳನ್ನು ಲೂಟಿ ಮಾಡಿದರು. ಮುಖ್ಯ ಸೇನಾಧಿಕಾರಿಯು ಒಲವು ತಮ್ಮ ಕಡೆಗಿದೆಯೆಂಬ ಗಾಳಿ ಸುದ್ದಿಯಿಂದ ಅವರ ಉತ್ಸಾಹ ಇಮ್ಮಡಿಸಿತ್ತು. ಬಂಡಾಯ ಭುಗಿಲೆದ್ದುದನ್ನು ಕಂಡು ಬ್ರಿಟಿಶ್ ಸರಕಾರ ಪ್ರತಿಯಾಗಿ ಕ್ರಮಕೊಳ್ಳುವ ಮೊದಲೇ ಭಾರತದಲ್ಲಿರುವ ಬ್ರಿಟಿಶರನ್ನು ಮುಗಿಸಿಬಿಡುವುದು ಬಂಡುಗಾರರ ಉದ್ದೇಶವಾಗಿತ್ತು.

*

ಇತ್ತ ಐರಿಶರನ್ನೆದುರಿಸಲು ಭಾರತದ ಪಶ್ಚಿಮ ತೀರದಲ್ಲಿ ಬ್ರಿಟಿಶ್ ಸೈನ್ಯ ಇಳಿಯತೊಡಗಿತು. ಲಾರ್ಡ್ ಕ್ಯಾನಿಂಗನಿಗೆ ಇದು ಸತ್ವಪರೀಕ್ಷೆಯ ಕಾಲವಾಗಿತ್ತು. ಕೊನೆಗೂ ಲಾರ್ಡ್ ಕ್ಲೈಡನಿಗೆ ಮಣಿದು ಸೇನೆಯ ಪರಮಾಧಿಕಾರವನ್ನು ಆತನಿಗೆ ವಹಿಸಿದ. ಹೇಗಾದರೂ ಸಾಮ್ರಾಜ್ಯ ಮುರಿದು ಬೀಳುವುದನ್ನು ತಪ್ಪಿಸುವಂತೆ ಕ್ಲೈಡನನ್ನು ಬೇಡಿಕೊಂಡ. ಕ್ಯಾನಿಂಗ್. ಕ್ಲೈಡ್ ಇದಕ್ಕೆ ಒಪ್ಪಿಕೊಂಡ. ಐರಿಶರ ಅಸಮಾಧಾನದ ಬಗ್ಗೆ ತನಿಖೆ ನಡೆಸಲು ಒಂದು ಆಯೋಗ ನೇಮಿಸಿದ. ಇದರ ಅಧ್ಯಕ್ಷ ತಾನೇ ಆದರೂ ಸಲಹೆಗಾಗಿ ಉಚ್ಚಾಧಿಕಾರಿಗಳ ಸಮಿತಿಯೊಂದನ್ನು ರಚಿಸಿದ. ಆಯೋಗದ

ಮೊದಲನೇ ಮೀಟಿಂಗು ಮೀರತದಲ್ಲಿ ನಡೆಯಿತು. ಅವರ ಪ್ರತಿಯೊಂದು ದೂರನ್ನು ಕೇಳುವುದಾಗಿ ಆಂದೋಲನಕಾರರಿಗೆ ಭರವಸೆ ನೀಡಲಾಯಿತು.

ಪರಿಸ್ಥಿತಿ ವಿಕೋಪಕ್ಕೆ ಬಂದುದನ್ನು ಕಂಡ ಕ್ಲೈಡ್ ಸಿಮ್ಲಾಕ್ಕೆ ಹೋದ. ಅಪಘಾತದಲ್ಲಿ ಪೆಟ್ಟು ಬಿದ್ದ ಕಾಲು ಇನ್ನೂ ವಾಸಿಯಾಗಿರಲಿಲ್ಲ. ಮಾನಸಿಕವಾಗಿಯೂ ಆತ ತುಂಬಾ ಬಳಲಿದ್ದ. ರಾಜೀನಾಮೆಯಿತ್ತು ಸ್ವದೇಶಕ್ಕೆ ಮರಳುವುದು ಅವನ ಇಚ್ಛೆಯಾಗಿತ್ತು. ಜವಾಬ್ದಾರ ಬರುವಾಯದ ನಂತರ ಸರಕಾರ ತಳೆದ ನಿಲುವಿನಿಂದ ಕ್ಲೈಡ್ ರೋಸಿ ಹೋಗಿದ್ದ. ಆಯೋಗದ ಮೀಟಿಂಗುಗಳು ಎಡೆ ಬಿಡದೆ ಇಪ್ಪತ್ತೇಳು ದಿನಗಳ ವರೆಗೆ ನಡೆದುವು. ಮೀರತ್, ಕಾನಪುರ, ಅಲಹಾಬಾದ್, ಗ್ವಾಲಿಯರ್, ಲಾಹೋರ್, ದಿಲ್ಲಿಗಳಲ್ಲಿ ನಡೆದ ಈ ಬೈಠಕ್ಕುಗಳಲ್ಲಿ ಐರಿಶ್ ಸೈನಿಕರು ತಳೆದ ನಿಲುವು ಒಂದೇ: "ನಾವು ಮಹಾರಾಣಿಯ ಸೇವೆಗೆ ಬದ್ಧರಾಗಿಲ್ಲ. ಕಂಪನಿ ಸರಕಾರದ ಅಸ್ತಿತ್ವವೇ ಇಲ್ಲವಾದಾಗ, ತಾವು ಬರೆದು ಕೊಟ್ಟ ಕರಾರುಪತ್ರಗಳೂ ರದ್ದಾದವೆಂದು ಸೈನಿಕರು ಏಕಸ್ವರದಿಂದ ಹೇಳಿದರು.

ಕಂಪನಿಯೂ ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಧೀನವಾಗಿರುವುದರಿಂದ, ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸುವುದೂ ಕರ್ತವ್ಯವೆಂದು ಸೈನಿಕರಿಗೆ ತಿಳಿಹೇಳಲು ಆಯೋಗ ಪ್ರಯತ್ನಿಸಿತು. ಈ ತರ್ಕವನ್ನು ಅವರು ಒಪ್ಪಲಿಲ್ಲ. ತಮ್ಮನ್ನು ಮಾರಾಟಗೊಳಿಸಲು ಸಾಧ್ಯವಿಲ್ಲವೆಂದೂ ತಾವು ಸ್ವತಂತ್ರರೆಂದೂ ಸೈನಿಕರು ವಾದಿಸಿದರು.

೧೮೫೯ ರ ಮೇ ೬ ರಂದೇ ಈ ಸೈನಿಕರನ್ನು ಸ್ವದೇಶಕ್ಕೆ ರವಾನಿಸಬೇಕೆಂದು ಲಾರ್ಡ್ ಕ್ಯಾನಿಂಗ್ ತೀರ್ಮಾನಿಸಿದ್ದ. ಆದರೂ ಆಯೋಗದ ನಿರ್ಣಯಕ್ಕಾಗಿ ಕಾಯುತ್ತಿದ್ದ. ಆಯೋಗದ ನಿರ್ಧಾರವೂ ಇದೇ ಆದಾಗ, ಐರಿಶ್ ಸೈನಿಕರನ್ನೆಲ್ಲ ಸೇವೆಯಿಂದ ಮುಕ್ತಗೊಳಿಸಿ, ಸ್ವದೇಶಕ್ಕೆ ಕಳಿಸಲಾಗುವುದೆಂದು ಗವರ್ನರ್ ಜನರಲ್ ಸಾರಿದ. ಈ ನಿರ್ಣಯವನ್ನು ಸೈನಿಕರು ಸ್ವಾಗತಿಸಿದರಲ್ಲದೆ ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದರು. ಕಲಕತ್ತೆಯಲ್ಲಿದ್ದ ೬೨೦೦ ಜನ ಸೈನಿಕರು, ತಾವು ಎಲ್ಲರಿಗಿಂತ ಮೊದಲು ಸ್ವದೇಶ ಸೇರಬೇಕೆಂದು ತಮ್ಮ ಸೇನಾಪತಿಗೆ ತಿಳಿಸಿದರು. ಮುಂಬಯಿ, ಮದ್ರಾಸು, ಕಲಕತ್ತೆಗಳಲ್ಲಿದ್ದ ಎಲ್ಲ ಹತ್ತು ಸಾವಿರ ಸೈನಿಕರಿಗೂ ಸಿದ್ಧರಾಗಿರುವಂತೆ ಆಜ್ಞೆ ಮಾಡಲಾಯಿತು.

ಸ್ವದೇಶಕ್ಕೆ ಮರಳುವ ಸೈನಿಕರ ಉತ್ಸಾಹದಿಂದ ಅಧಿಕಾರಿಗಳಿಗೆ ಫಜೀತಿಯಿಟ್ಟುಕೊಂಡಿತು. ಇಷ್ಟೊಂದು ಜನರ ಪ್ರಯಾಣದ ವ್ಯವಸ್ಥೆ ಹೇಗೆ? ಸೈನಿಕ ಶಿಬಿರಗಳಿಗೆ ಹತ್ತಿರದಲ್ಲಿರುವ ಬಂದರುಗಳಲ್ಲಿ ಹಡಗು ನಿಲ್ಲುವ ವ್ಯವಸ್ಥೆ ಮಾಡಿ ಪ್ರಯಾಣ ಮುಂದುವರಿಸುವುದೆಂದು ತೀರ್ಮಾನವಾಯಿತು. ಪ್ರತಿ ನೂರು ಸೈನಿಕರ ಮೇಲ್ವಿಚಾರಣೆಗೆ ಇಬ್ಬರು ಅಧಿಕಾರಿಗಳನ್ನು ನೇಮಿಸಲಾಯಿತು. ಅವರಿಗೆಲ್ಲ ಪ್ರಯಾಣದ ಟಿಕೆಟ್ಟುಗಳನ್ನು ಕೊಡಲಾಯಿತು.

*

ಅಗಸ್ಟ್ ತಿಂಗಳು ಮಳೆಗಾಲದಲ್ಲಿ ಗ್ವಾಲಿಯರಿನಿಂದ ಒಂದು ದಾರುಣಾಂತಿಕ ಯಾತ್ರೆ ಪ್ರಾರಂಭವಾಯಿತು. ಐನೂರು ಜನ ಸೈನಿಕರಿಗೆ ಚಿನ್ಸುರಾ ಬಂದರು ಸೇರಬೇಕೆಂದು ಆಜ್ಞೆ ಬಂದಿತು. ಈ ಪ್ರಯಾಣದ ದೂರ ಒಂದು ಸಾವಿರ ಮೈಲುಗಳು! ಕಾಲು ನಡಿಗೆಯಿಂದಲೇ ಗುರಿ ಮುಟ್ಟಬೇಕು. ಆದರೂ ಸೈನಿಕರು ಉತ್ಸಾಹದಿಂದಲೇ ಹೊರಟರು. ಅಗಸ್ಟ್ ೨೧ರಿಂದ ಅಕ್ಟೋಬರ್ ೨೨ ರ ವರೆಗೂ ಎರಡು ತಿಂಗಳುಗಳ ಈ ಮಹಾಯಾತ್ರೆಯಲ್ಲಿ ಸೈನಿಕರ ಕಾಲುಗಳಲ್ಲಿ ಗುಳ್ಳೆಗಳೆದ್ದು ಚರ್ಮ ಸುಲಿದುಹೋಯಿತು. ಹಾಂಡ್ ಎಂಬ ಸೈನಿಕ ಈ ಪ್ರಯಾಣದ ಭೀಕರತೆಯನ್ನು ಹೀಗೆ ವರ್ಣಿಸಿದ್ದಾನೆ: "ಭಾರೀ ಮಳೆಯಲ್ಲಿ ಸೈನಿಕರು ಗ್ವಾಲಿಯರಿನಿಂದ ಹೊರಟಿದ್ದರು. ಆಗ್ರಾ ತಲುಪುವಾಗ ಅವರಲ್ಲಿ ಇಪ್ಪತ್ತೇಳು ಜನ ವ್ಯಾಧಿಪೀಡೆಯಿಂದ ಸತ್ತಿದ್ದರು. ಮೊಳಕಾಲುದ್ದ ಕೆಸರಿನಲ್ಲಿ ಸೈನಿಕರು ನಡೆಯಬೇಕಾಯಿತು. ಕೆಲವು ದಿನಗಳಂತೂ ಕುತ್ತಿಗೆ ಮಟ್ಟದ ನೀರಿನಲ್ಲಿ ನದಿ ಹಳ್ಳಗಳನ್ನು ದಾಟಬೇಕಾಯಿತು. ಈ ನಡುವೆ ಸೈನಿಕರಿಗೆ ಭೇದಿ ಶುರುವಾಯಿತಲ್ಲದೆ ಚಿನ್ಸುರಾ ತಲುಪುವಾಗ ಮತ್ತೆ ಹತ್ತು ಜನ ಕೊನೆಯುಸಿರೆಳೆದರು.

ಚಿನ್ಸುರಾ ಒಂದು ಚಿಕ್ಕ ಬಂದರು. ಸೈನಿಕರಿಂದ ತುಂಬಿಹೋಯಿತು. ಹತ್ತು ಸಾವಿರಕ್ಕೂ ಮಿಕ್ಕಿದ ಜನರಲ್ಲಿ ಪ್ರತಿಯೊಬ್ಬನೂ ತಕ್ಷಣ ಸ್ವದೇಶಕ್ಕೆ ಪ್ರಯಾಣಿಸುವ ಆತುರದಲ್ಲಿದ್ದ. ಎಲ್ಲರಿಗೆ

ಗಂಗೆ ದಕ್ಷಿಣಾಭಿಮುಖವಾಗಿ ಹರಿಯುತ್ತಿದ್ದಳೇ ವಿನಾ ಇವರ ಪ್ರಯಾಣದ ಹೊಣೆ ವಹಿಸಿಕೊಂಡ ಹಡಗುಗಳ ಪತ್ತೆಯಿರಲಿಲ್ಲ! ಅವುಗಳಿಗಾಗಿ ಸೈನಿಕರು ನಿರೀಕ್ಷಿಸುತ್ತಲೇ ಇರಬೇಕಿತ್ತು. ಮಿಲಿಟರಿಗೆ ಆಹಾರ ಒದಗಿಸುವ ಕ್ಯಾಂಟೀನಿನ ಗುತ್ತಿಗೆದಾರ ಸೈನಿಕರ ಸಂಖ್ಯೆಯನ್ನು ಕಂಡು ಹೆದರಿ ಪಲಾಯನ ಮಾಡಿದ್ದ! ಹಸಿದ ಸೈನಿಕರು ಎರಡು ದಿನಗಳ ವರೆಗೆ ಆ ಕ್ಯಾಂಟೀನನ್ನೂ ಆಹಾರ ಸಂಗ್ರಹಾಗಾರವನ್ನೂ ಸೂರೆ ಮಾಡಿದರು. ನಂತರ ಜನವಸತಿ ಇದ್ದಲ್ಲೆಲ್ಲ ತಿರುಗಿ ತಮ್ಮ ಸಮವಸ್ತ್ರ ಕಂಬಳಿಗಳನ್ನು ಮಾರಿದರು. ಸಿಕ್ಕಿದ್ದನ್ನು ತಿಂದರು. ಏನೂ ಸಿಗದಾದಾಗ ಜನವಸತಿಯ ಮೇಲೆ ದಾಳಿ ಇಟ್ಟರು. ಸೈನಿಕರ ಉಪಟಳ ಹೆಚ್ಚಾದಾಗ ಲಾರ್ಡ್ ಕ್ಯಾನಿಂಗನಿಗೆ ದೂರುಗಳು ಹೋದವು. ಆತ ಸೈನಿಕರನ್ನು ಪತ್ತೋಟಿಯಲ್ಲಿಡುವಂತೆ ಸೈನ್ಯಾಧಿಕಾರಿಗಳಿಗೆ ಅಜ್ಞೆ ಮಾಡಿದ.

ಸೇವಾಮುಕ್ತರಾದ ಸೈನಿಕರು ಮಾತ್ರ ಯಾರ ಅಂಕೆಗೂ ಸಿಗಲಿಲ್ಲ. ಹದಿನಾರು ದಿನಗಳ ವರೆಗೆ ಇವರ ಹಾವಳಿ ನಿರಂತರವಾಗಿ ನಡೆದಾಗ ಚಿನ್ಸುರಾ ಬಂದರಿನಲ್ಲಿ 'ಕ್ವೀನ್ ಆಫ್ ದಿ ಸೀಸ್', 'ದಿ ಮ್ಯಾಗೀಮಿಲ್ಲರ್', 'ತಾಸ್ಮಾನಿಯಾ' ಎಂಬ ಮೂರು ಹಡಗುಗಳು ಲಂಗರು ಹಾಕಿದವು.

ರಂಗೂನಿನಿಂದ ಬಂದ 'ತಾಸ್ಮಾನಿಯಾ'ದಲ್ಲಿ ಒಂದು ಸಾವಿರ ಜನ ಪ್ರಯಾಣಿಸಬಹುದೆಂದು ಹೇಳಲಾಗಿತ್ತು. ಸಾಮಾನ್ಯವಾಗಿ ಒಂದು ಹಡಗಿನಲ್ಲಿ ನಾಲ್ಕುನೂರು ಜನ ಪ್ರಯಾಣಿಸಬಹುದಿತ್ತು. ಆದರೆ ಕಪ್ತಾನ ಈ ರೀತಿ ಹೇಳಿದ್ದರಿಂದ ಆತನ ಮಾತನ್ನು ನಂಬಲಾಯಿತು. 'ತಾಸ್ಮಾನಿಯಾ'ವನ್ನು ಬಾಡಿಗೆಗೆ ತೆಗೆದುಕೊಂಡಿದ್ದರಿಂದ ಸರಕಾರಕ್ಕೆ ಲಾಭವೇ ಆಗಿತ್ತು. ಕಲಕತ್ತೆಯಿಂದ ಲಿವರ್‌ಪೂಲಿಗೆ ಇತರ ಕಂಪನಿಗಳು, ಪ್ರಯಾಣಿಕನೊಬ್ಬನಿಗೆ ೨೦೦ ರೂಪಾಯಿ ತೆಗೆದುಕೊಂಡರೆ, 'ತಾಸ್ಮಾನಿಯಾ' ಕೇವಲ ೧೬೬ ರೂಪಾಯಿ ೮ ಆಣೆ ತೆಗೆದುಕೊಂಡಿತ್ತು.

*

ಈಗ ದೊಡ್ಡ ಸಮಸ್ಯೆಯೆಂದರೆ ಹಡಗಿನ ಅನ್ನಾಗಾರದ್ದು. ಆ ಕಾಲದಲ್ಲಿ ಕಲಕತ್ತೆಯಲ್ಲಿ ಯಾವ ಸರಕಾದರೂ ಸುಲಭವಾಗಿ ದೊರೆಯುತ್ತಿತ್ತು. ಆದರೆ ಇದು ಒಂದೆರಡು ದಿನದ ಸಮಸ್ಯೆಯಾಗಿರಲಿಲ್ಲ. ನಾಲ್ಕು ತಿಂಗಳ ಸುದೀರ್ಘ ಪ್ರಯಾಣದಲ್ಲಿ ಸಾವಿರಾರು ಜನರಿಗಾಗುವಷ್ಟು ಆಹಾರ ಹೊಂದಿಸಿಕೊಳ್ಳಬೇಕಾಗಿತ್ತು.

ಹಡಗಿನ ಕಪ್ತಾನನ ತೊಂದರೆಯನ್ನರಿತ ಫೋರ್ಟ್ ವಿಲಿಯಂನ ಅಧಿಕಾರಿಗಳು, ಇದಕ್ಕೆ ಪರಿಹಾರ ಮಾಡುಕಿದರು. ಕೋಟೆಯಲ್ಲಿ ಹಲವು ವರ್ಷಗಳಿಂದ ಸಂಗ್ರಹಿಸಲಾಗಿದ್ದ ಧಾನ್ಯ, ಬ್ರೆಡ್, ಬಿಸ್ಕಿಟ್, ಜಾಮ್, ಮುರಬ್ಬ ಮುಂತಾದ ಸಾಮಗ್ರಿಗಳು ಹಾಳಾಗಿ ಹುಳುಹತ್ತಿದ್ದವು. ಲಡ್ಡಾದ ಈ ಆಹಾರ ಸಾಮಗ್ರಿಗಳನ್ನು ಕಪ್ತಾನನಿಗೆ ಮಾರಿಬಿಟ್ಟರೆ, ಒಂದೇ ಕಲ್ಲಿನಿಂದ ಎರಡು ಹಕ್ಕಿಗಳನ್ನು ಹೊಡೆದಂತಾಗುತ್ತಿತ್ತು. ಹೊಣೆಗೇಡಿತನದ ಆರೋಪದಿಂದ ಮುಕ್ತರಾಗುವುದರ ಜೊತೆಗೆ ಹಡಗಿನ ಆಹಾರ ಸಮಸ್ಯೆ ಬಗೆಹರಿಯುತ್ತಿತ್ತು. ಈ ಹಂಚಿಕೆ ಹಾಕಿದ ಸೈನ್ಯಾಧಿಕಾರಿಗಳು ತಕ್ಷಣ ಒಂದು ಸಮಿತಿ ಸಂಘಟಿಸಿದರು. ಕೋಟೆಯ ಗೋಡೌನಿನಲ್ಲಿದ್ದ ಸಾಮಗ್ರಿ, ಆಹಾರಕ್ಕೆ ಉಪಯುಕ್ತವಾಗಿದೆಯೆಂಬ ಸಮಿತಿಯ ವರದಿ ಸಿದ್ಧವಾಯಿತು. ಅಧಿಕಾರಿಗಳು ವಿಳಂಬಿಸದೇ ಹಡಗಿನ ಕಪ್ತಾನನಿಗೆ ಒಪ್ಪಿಸಿದರು. ಆದರೆ ಕಪ್ತಾನ ಪಾಂಡ್, ಆಹಾರ ಸಾಮಗ್ರಿ ಹಾಳಾಗಿರುವುದನ್ನು ಗಮನಿಸಿ ಕೂಡಲೇ ಐನೂರು ಮೂಟೆ ಅಕ್ಕಿ-ಗೋದಿಯನ್ನು ಗಂಗೆಗೆ ಅರ್ಪಿಸಿದ.

೧೮೫೯ನೆಯ ಅಕ್ಟೋಬರ್ ೧೦ರಂದು 'ತಾಸ್ಮಾನಿಯಾ' ಚಿನ್ಸುರಾದಿಂದ ಹೊರಟಿತು. ಇಷ್ಟೊಂದು ಪ್ರಯಾಣಿಕರ ಆರೋಗ್ಯ ಕಾಪಾಡಿಕೊಳ್ಳಲು ಒಬ್ಬ ಡಾಕ್ಟರನ ವ್ಯವಸ್ಥೆಯಾಗಿತ್ತು! ಸಮುದ್ರದ ಹವಾಮಾನದಲ್ಲಿ ಪ್ರಯಾಣಿಕರು ಆರೋಗ್ಯದಿಂದಿರುವರೆಂದು ಭಾರತದಲ್ಲಿಯ ಬ್ರಿಟಿಶ್ ಅಧಿಕಾರಿಗಳಿಗೆ ನಂಬಿಕೆ ಇತ್ತು. ಆದ್ದರಿಂದ ಸಾಕಷ್ಟು ಔಷಧಿಯನ್ನೂ ಪಟ್ಟಿನ ವೈದ್ಯರನ್ನೂ ಒದಗಿಸುವುದು ವ್ಯರ್ಥವೆಂದು ಅವರು ಭಾವಿಸಿದ್ದರು. 'ತಾಸ್ಮಾನಿಯ'ದಲ್ಲಿ ಆಸ್ಪತ್ರೆಯಿರಲಿಲ್ಲ; ಔಷಧಿಯ ಸಂಗ್ರಹವೂ ಇರಲಿಲ್ಲ! ಪ್ರಯಾಣಿಕರನ್ನು ಚಳಿಯಿಂದ ರಕ್ಷಿಸಲು ಕಂಬಳಿಯ ವ್ಯವಸ್ಥೆಯೂ ಇರಲಿಲ್ಲ.

ಪ್ರಯಾಣದ ನಾಲ್ಕನೇ ದಿನ ಫೋರ್ಟ್ ವಿಲಿ

ಯಿಂದ ಅಧಿಕಾರಿಗಳು ಉದಾರ ಬುದ್ಧಿಯಿಂದ ಕೊಟ್ಟ ಆಹಾರ ಸಾಮಗ್ರಿಗಳಿಂದ ಹೊರಬೀಳ ತೊಡಗಿದ ಅಸಂಖ್ಯಾತ ಬಿಳಿ ಹುಳುಗಳು ಹಡಗಿನ ಅನ್ನ ಭಾಂಡಾರದಲ್ಲೆಲ್ಲ ಹರಿದಾಡತೊಡಗಿದವು! ಕಪ್ತಾನ ಪಾಂಪ್ ಗಾಬರಿಯಾದ. ಹತ್ತು ಸಾವಿರ ಪೌಂಡು ಬ್ರೆಡ್–ಬಿಸ್ಕೀಟ್ ಹಾಗೂ ಮುರಬ್ಬಗಳನ್ನೂ ನೀರು ಪಾಲಾಗಿಸಿದ! ತಮಗೆ ಕುಡಿಯುವದಕ್ಕೆಂದು ಕೊಡಲಾಗಿದ್ದ ಬೀರ್ ಬಾಟ್ಲಿಗಳಲ್ಲಿ ಹಳಸಿದ ಉಪ್ಪು ನೀರು ತುಂಬಿದೆಯೆಂದು ಸೈನಿಕರು ದೂರಿಕೊಂಡರು! ಭವಿಷ್ಯದ ಪರಿವೆಯಿಲ್ಲದೆ ಪ್ರಯಾಣ ಮುಂದುವರಿಯಿತು.

*

೧೮೬೦ ರ ಜನವರಿ ೨೨ ನೆಯ ದಿನ 'ತಾಸ್ಮಾನಿಯ'. ಸೇಂಟ್ ಹೆಲೆನಾ ಬಂದರಿನಲ್ಲಿ ಲಂಗರು ಹಾಕಿತು. ಇಲ್ಲಿ ಅನ್ನ ಭಂಡಾರ ತುಂಬಿಕೊಳ್ಳಬೇಕೆಂದು ಪಾಂಪ್ ಯೋಚಿಸಿದ. ಆದರೆ ಆಗಲೇ ಪರಿಸ್ಥಿತಿ ಹತೋಟಿ ಮೀರಿತ್ತು. ಪ್ರಯಾಣಿಕರು ಕೆಲಸಗಾರರ ಕಣ್ಣು ತಪ್ಪಿಸಿ, ಕೆಟ್ಟು ಹೋದ ಬ್ರೆಡ್ ಬಿಸ್ಕೀಟುಗಳನ್ನು ಮುಚ್ಚಿಟ್ಟುಕೊಂಡಿದ್ದರು. ಏನಾದರೂ ತಿಂದು ಬದುಕುಳಿಯುವುದು ಅವರ ಆಶಯ. ಈ ಕೆಟ್ಟ ಆಹಾರದ ಪರಿಣಾಮವನ್ನೂ ಅವರು ಅನುಭವಿಸುತ್ತಿದ್ದರು. ಅನೇಕರಿಗೆ ಅಜೀರ್ಣವಾಗಿತ್ತು. ಉಳಿದವರ ಮೈಯೆಲ್ಲ ಕಜ್ಜಿ–ತುರಿಗಳಿಂದ ತುಂಬಿತ್ತು. ಪ್ರತಿಯೊಬ್ಬನೂ ಪ್ರಾಣಾಂತಿಕ ಸಂಕಟ ಅನುಭವಿಸುತ್ತಿದ್ದ. ಕೆಲವರಿಗೆ ಮೈಕೈ ಬೇನೆ ತಗಲಿತು. ಸೇಂಟ್ ಹೆಲೆನಾದ ಅಧಿಕಾರಿಗಳ ತತ್ಪರತೆಯಿಂದ ಸ್ಥಿತಿ ಹತೋಟಿಗೆ ಬಂದರೂ ಪ್ರಯಾಣಿಕರು ತೀರಾ ದುರ್ಬಲರಾದರು. ಹೀಗಾಗಿ ಪಾಂಪ್ ಗಾಬರಿಯಾದ.

ಆತ ಸೇಂಟ್ ಹೆಲೆನಾ ದ್ವೀಪದ ರಕ್ಷಣಾಧಿಕಾರಿ ಲೆಫ್ಟಿನೆಂಟ್ ಬೀಟಿಯನ್ನು ಭೆಟ್ಟಿಯಾದ. ರೋಗಗ್ರಸ್ತ ಪ್ರಯಾಣಿಕರಿಗೆ ಕನಿಷ್ಟ ಒಂದು




"ನೋಡಿ ಸ್ವಾಮೀ, ಸರಕಾರದೋರು ಈ ನ್ಯಾಯದ ತಕ್ಕಡಿ ಒದಗಿಸಿದ ಮೇಲೆ ನಮ್ಮ ಸ್ಥಿತಿ

ದಿನಕ್ಕಾಗುವಷ್ಟು ತಾಜಾ ಮಾಂಸವನ್ನು ಒದಗಿಸುವಂತೆ ಬೇಡಿದ. ಇದು ಸಾಧ್ಯವಿಲ್ಲವೆಂದೂ ಇದರಿಂದ ದ್ವೀಪದಲ್ಲಿರುವ ಸೈನಿಕರೆಲ್ಲ ಉಪವಾಸ ಮಾಡಬೇಕಾದೀತೆಂದೂ ಬೀಟಿ ಉತ್ತರಿಸಿದ. ತಾವು ಐರಿಶರಿಗೆ ಯಾವುದೇ ರೀತಿಯ ಅನುಕಂಪ ತೋರಿಸಲು ಸಿದ್ಧರಿಲ್ಲವೆಂದೂ ಅವರು ಹಡಗಿನಲ್ಲೇ ಅಸು ನೀಗಿದರೆ ಸಾಮ್ರಾಜ್ಯದ್ವೇಷಿಗಳು ನಾಶವಾದಂತಾಯಿತು ಎಂದು ಅಧಿಕಾರಿ ನಿರ್ದಯೆಯಿಂದ ಹೇಳಿದ.

ಪಾಂಡ್ ಮಾನವೀಯ ಅನುಕಂಪದಿಂದ ಸ್ವಲ್ಪ ಹಣ್ಣು–ತರಕಾರಿಯನ್ನಾದರೂ ತರಿಸಲು ಪ್ರಯತ್ನಿಸಿದ. ರೋಗಿಗಳಿಗೆ ಒಂದು ಹೊತ್ತಿಗಾದರೂ ತಾಜಾ ಆಹಾರ ಪೂರೈಸಬೇಕೆಂದು ಅವನ ಉದ್ದೇಶ. ಆದರೆ ಅದೂ ಸಾಧ್ಯವಾಗಲಿಲ್ಲ. ಕಷ್ಟದಿಂದ ಕೆಲವು ಕೋಸುಗಡ್ಡೆಗಳು ದೊರೆತವು. ಅದೂ ನಾಲ್ಕು ರೂಪಾಯಿಗೆ ಒಂದರಂತೆ! ಬೇರೆ ಸಂದರ್ಭ ಹಾಗೂ ಸ್ಥಳವಾಗಿದ್ದರೆ ಆ ಕಾಲದಲ್ಲಿ ರೂಪಾಯಿಗೆ ಐವತ್ತು ಕೋಸುಗಡ್ಡೆಗಳು ದೊರೆಯುತ್ತಿದ್ದವು !

ಜನವರಿ ೨೬ ರಂದು 'ತಾಸ್ಮಾನಿಯ' ಸೇಂಟ್ ಹೆಲೆನಾದಿಂದ ಹೊರಟಿತು. ಆಹಾರ ಸಂಗ್ರಹಾಲಯವನ್ನು ತುಂಬಿಕೊಳ್ಳಲು ಆಗದಿದ್ದುದಕ್ಕೆ ಕಪ್ತಾನನಿಗೆ ತುಂಬಾ ವ್ಯಥೆಯಾಯಿತು. ಧಾನ್ಯ ಸಂಗ್ರಹ ದಿನದಿನಕ್ಕೂ ಕಡಿಮೆಯಾಗುತ್ತಿತ್ತು. ಇದ್ದುದರಲ್ಲೇ ಸ್ವಲ್ಪ ಆರೋಗ್ಯದಿಂದಿರುವ ಪ್ರಯಾಣಿಕರಿಗೆ ದಿನಕ್ಕೆ ಒಂದೇ ಹೊತ್ತು ಆಹಾರ ಒದಗಿಸುತ್ತಿದ್ದರು. ಯುರೋಪಿನ ಚಳಿಗಾಲ ಜೋರಾಗಿತ್ತು. ಈ ವಾತಾವರಣಕ್ಕೆ 'ತಾಸ್ಮಾನಿಯ'ದ ಅನೇಕ ಪ್ರಯಾಣಿಕರು ಬಲಿಯಾದರು. ಮೂರು ದಿನಗಳಲ್ಲೇ ಐವತ್ತು ಜನರು ಬಲಿಯಾದರು.

ಮಾರ್ಚ್ ೧೫ನೇ ದಿನ ಸಾವಿನೊಂದಿಗೆ ಹೋರಾಡುತ್ತಿದ್ದ ಪ್ರಯಾಣಿಕರನ್ನು ಹೊತ್ತ ಹಡಗು ಲಿವರ್‌ಪೂಲ್ ತಲುಪಿತು. ಸೋಂಕು ರೋಗಗಳು ಹರಡುತ್ತವೆಂಬ ಭಯದಿಂದ ಬಂದರಿನ ಅಧಿಕಾರಿಗಳು, ಹಡಗು ಬಂದರಿನಲ್ಲಿ ನಿಲ್ಲುವುದಕ್ಕೆ ಅನುಮತಿಯನ್ನು ನಿರಾಕರಿಸಿದರು. ಅವರು ಲಿವರ್‌ಪೂಲಿನಲ್ಲಿರುವ 'ಕೌನ್ಸಿಲ್ ಆಫ್ ಇಂಡಿಯ'ದ ...ಯನ್ನು ತಿಳಿಸಿದರು.

ರತ್‌ಬೋನ್ ಭಾರತದಿಂದ ಬಂದಿರುವ ಆ ಸೈನಿಕರ ಸಂಪೂರ್ಣ ಹೊಣೆಯನ್ನು ತಾನು ವಹಿಸಿಕೊಳ್ಳುವುದಾಗಿಯೂ ಅವರ ಚಿಕಿತ್ಸೆ ಅಥವಾ ವೆಚ್ಚಗಳ ಬಗ್ಗೆ ಯಾರೂ ಚಿಂತಿಸುವ ಅಗತ್ಯವಿಲ್ಲವೆಂದೂ ಅಧಿಕಾರಿಗಳಿಗೆ ತಿಳಿಸಿದ. ಹಡಗು ಬಂದರಿನಲ್ಲಿ ನಿಲ್ಲಲು ಅನುಮತಿ ನೀಡುವ ಔದಾರ್ಯ ತೋರಿಸುವಂತೆ ಅಧಿಕಾರಿಗಳನ್ನು ಒತ್ತಾಯಿಸಿದ. ನಂತರ ಹಡಗು ನಿಲ್ಲಲು ಅನುಮತಿ ದೊರೆಯಿತು.

ನಾವಿಕರ ತರಬೇತಿ ಕೇಂದ್ರದಲ್ಲಿ ಒಂದು ತುರ್ತುಸ್ಥಿತಿಯ ಆಸ್ಪತ್ರೆಯ ವ್ಯವಸ್ಥೆಯಾಯಿತು. ಪ್ರತಿಯೊಬ್ಬ ರೋಗಿಗೂ ಹಾಸಿಗೆಯ ವ್ಯವಸ್ಥೆ ಮಾಡಲಾಯಿತು. ರಥಬೋನ್ ಎಲ್ಲರಿಗೂ ಔಷಧ ಹಾಗೂ ಆಹಾರದ ವ್ಯವಸ್ಥೆ ಮಾಡಿದ. ನಾಲ್ಕು ತಿಂಗಳ ನಂತರ ಪ್ರಯಾಣಿಕರು ತಾಜಾ ಊಟ ಮಾಡಿದರು.

ಹಡಗಿನಿಂದಿಳಿಯುವ ಶಕ್ತಿ ಇದ್ದವರನ್ನೆಲ್ಲ ತಕ್ಷಣ ಕೆಳಗಿಳಿಸಲಾಯಿತು. ಓಡಾಡುವ ಸ್ಥಿತಿಯಲ್ಲಿರದ ಜನರನ್ನು ಡೋಲಿಗಳಲ್ಲಿ ಸಾಗಿಸಲಾಯಿತು. ಇಂತಹ ೧೦೯ ಜನರಿಗೆ ಕೇವಲ ೬೦ ಕಂಬಳಿಗಳನ್ನು ಒದಗಿಸಲು ಸಾಧ್ಯವಾಯಿತು.

'ತಾಸ್ಮಾನಿಯ' ಬಂದಿರುವ ವಿಷಯವನ್ನು ರಹಸ್ಯವಾಗಿಟ್ಟಿದ್ದರೂ ಸಮುದ್ರ ತಟದಲ್ಲಿ ಸಾಕಷ್ಟು ಜನ ಸೇರಿದ್ದರು. ನಾಲ್ಕು ತಾಸಿನ ವರೆಗೆ ಡೋಲಿಗಳಲ್ಲಿ ಸಾಗಿಸಲ್ಪಟ್ಟ ದುರ್ಭಾಗ್ಯರನ್ನು ಜನ ನೋಡಿದರು. ಇಬ್ಬರು ಸೈನಿಕರು ಡೋಲಿಗಳಲ್ಲಿರುತ್ತಿದ್ದಾಗಲೇ ಪ್ರಾಣ ಬಿಟ್ಟರು.

ರತ್‌ಬೋನ್ ಮತ್ತು ಗವರ್ನರ್ ಕಾರ್‌ನ ತತ್ಪರತೆಯಿಂದ ರೋಗಿಗಳ ಆರೈಕೆಯಲ್ಲಿ ಕುಂದು ಬರಲಿಲ್ಲ. ಆದರೂ ಆಸ್ಪತ್ರೆ ಸೇರುತ್ತಲೇ ಒಬ್ಬ ಸೈನಿಕ ಸತ್ತ. ಅದೇ ರಾತ್ರಿ ಮತ್ತೂ ಐದು ಜನರು ಕೊನೆಯುಸಿರೆಳೆದರು. ಮರುದಿನವೂ ಮೂರು ಜನ ಸತ್ತರು.

ಲಿವರ್‌ಪೂಲಿನ ಗವರ್ನರ್ ಕಾರ್, "ಸಾವುಗಳು ತುಂಬಾ ಭೀಭತ್ಸವಾಗಿದ್ದವು. ಲೆಕ್ಕಾಚಾರದಂತೆ ಪ್ರತಿ ಹದಿಮೂರು ಜನರಲ್ಲೊಬ್ಬ ಸತ್ತು ಹೋಗಿದ್ದಾನೆ," ಎಂದು ತನ್ನ ಡೈರಿಯಲ್ಲಿ ಬರೆದ...

'ತಾಸ್ಮಾನಿಯ' ಕಾಂಡದ ಕೂಗು ಬ್ರಿಟಿಶ್ ಪಾರ್ಲಿಮೆಂಟಿನಲ್ಲಿ ಕೇಳಿಬಂದಿತು. ಐರಿಶ್ ಸೈನಿಕರೊಂದಿಗೆ ಅಮಾನುಷವಾಗಿ ವರ್ತಿಸಿದ ಸರಕಾರವನ್ನು ಖಂಡಿಸಲಾಯಿತು.

'ತಾಸ್ಮಾನಿಯ'ದಲ್ಲಿ ಚೆನ್ನೈನಿಂದ ಲಿವರ್‌ಪೂಲಿಗೆ ಬರುವಾಗ ಕೆಲವು ಜನ ಸಾವಿಗೀಡಾದದ್ದು ನಿಜವೆಂದು ಒಪ್ಪಿಕೊಂಡರೂ, ಅವರೆಲ್ಲ ಮೊದಲೇ ರೋಗಗ್ರಸ್ತರಾಗಿದ್ದರೆಂದು ಹೇಳಿ ಸಂಬಂಧಿಸಿದ ಮಂತ್ರಿಗಳು ಜಾರಿಕೊಂಡರು. ಆಹಾರಸಾಮಗ್ರಿ ಹಾಳಾಗಿರಲಿಲ್ಲವೆಂದೂ ಅದೆಲ್ಲ ವಿರೋಧಿಗಳ ಉತ್ಪ್ರೇಕ್ಷೆಯೆಂದೂ ಅವರು ತಿಳಿಸಿದರಲ್ಲದೆ ಇದರ ಹೊಣೆಯನ್ನು ಅಪ್ರತ್ಯಕ್ಷವಾಗಿ ಫೋರ್ಟ್ ವಿಲಿಯಂನ ಅಧಿಕಾರಿಗಳ ಮೇಲೆ ಹೊರಿಸಲಾಯಿತು. ಪಾರ್ಲಿಮೆಂಟು ತನಿಖೆಗಾಗಿ ಒಂದು ಸಮಿತಿಯನ್ನು ನೇಮಿಸಿತು. ಸಮಿತಿಯು ತನ್ನ ವರದಿಯಲ್ಲಿ ಕೆಲವು ಸಲಹೆಗಳನ್ನು ನೀಡಿತು: "...ಅವಳಿತವು ಸೈನಿಕರ ವ್ಯವಸ್ಥೆ ಹಾಗೂ ನಿರೀಕ್ಷಣೆಯಲ್ಲಿ ಸುಧಾರಣೆ ಮಾಡುವುದು ಅಗತ್ಯವಾಗಿದೆ. ಇನ್ನು ಮುಂದೆ ಅವರಿಗೆ ಒಳ್ಳೆಯ ಆಹಾರ ಹಾಗೂ ಗಟ್ಟಿಮುಟ್ಟಾದ ವಸ್ತ್ರ ಒದಗಿಸಿದರೆ ಹೆಚ್ಚಿನ ನಿಷ್ಠೆ ಹಾಗೂ ಭಕ್ತಿಯಿಂದ ಸಾಮ್ರಾಜ್ಯದ ಸೇವೆ ಮಾಡಬಲ್ಲರು. ಭಾರತದಂಥ ಉಷ್ಣ ವಲಯದ ದೇಶಗಳಿಗೆ ದೀರ್ಘ ಪ್ರಯಾಣಕ್ಕೆ ಹೊರಡುವ ಮುನ್ನ ಸೈನಿಕರಿಗೆ ಅವಶ್ಯಕ ವ್ಯವಸ್ಥೆಯೆಲ್ಲ ಸರಿಯಾಗಿದೆಯೇ ಎಂದು ಗಮನಿಸಬೇಕು. ಈ 'ತಾಸ್ಮಾನಿಯ' ಕಾಂಡದ ಪುನರಾವೃತ್ತಿಯಾಗದಂತೆ ಎಚ್ಚರಿಕೆ ವಹಿಸುವದು ಅವಶ್ಯ." ತನಿಖಾ ಸಮಿತಿಯ ವರದಿಯ ನಂತರವೂ ತಾಸ್ಮಾನಿಯ ಘಟನೆಯು ಮಾಸಲಾಗಲಿಲ್ಲ. ಸಂಬಂಧಿಸಿದ ರಾಜಪ್ರತಿನಿಧಿ ಹಾಗೂ ಮಂತ್ರಿಗಳೊಂದಿಗೆ ಸಂಸತ್ ಸದಸ್ಯರು ಪತ್ರವ್ಯವಹಾರ ನಡೆಸುತ್ತಲೇ ಇದ್ದರು. ೧೮೬೧ನೆಯ ಜುಲೈ ೨೨ರಂದು ಈ ಪ್ರಶ್ನೆ ಪುನಃ ಪಾರ್ಲಿಮೆಂಟಿನಲ್ಲಿ ಎದ್ದಿತು. ಕಾಮನ್ಸ್ ಸಭೆಯ ಸದಸ್ಯ ಎಂ. ಇ. ಅರ್ಚ್‌ಡಾಲ್, ರಕ್ಷಣಾ ಸಚಿವ ಸರ್ ಚಾರ್ಲ್ಸ್ ವುಡ್‌ನಿಗೆ ಪತ್ರ ಬರೆದು ತಾಸ್ಮಾನಿಯ ಕಾಂಡದ ತನಿಖೆಯ ಬಗ್ಗೆ ಪಾರ್ಲಿಮೆಂಟಿಗೆ ನೀಡಿದ್ದ ಆಶ್ವಾಸನೆ ಏನಾಯಿತೆಂದು ಕೇಳಿದ್ದ. ಅದಕ್ಕೆ ಚಾರ್ಲ್ಸ್ ವುಡ್ ಪಾರ್ಲಿಮೆಂಟಿಗೆ ಈ ರೀತಿ ಉತ್ತರಿಸಿದ:– "...ತನಿಖಾ ಸಮಿತಿಯ ಕೆಲಸ ಮುಕ್ತಾಯವಾಗಿದೆ. ಕಲಕತ್ತೆಯಲ್ಲಿರುವ ಕೆಲವು ಅಧಿಕಾರಿಗಳ ಮೇಲೆ ಆರೋಪವೂ ಸಿದ್ಧವಾಗಿದೆ. ಅವರನ್ನು ದಂಡಿಸಲು ಸಮಿತಿ ಶಿಫಾರಸು ಮಾಡಿದೆ. ಆದರೆ ಆರೋಪಿಗಳನ್ನು ಯಾವ ರೀತಿಯಿಂದ ದಂಡಿಸಲಾಗುವುದೆಂಬುದನ್ನು ತಿಳಿಸಲು ಶಾಸನಕ್ಕೆ ಶಕ್ಯವಿಲ್ಲ. ದೇಶದ ಹಿತದ ದೃಷ್ಟಿಯಿಂದ ಇದನ್ನು ಗುಪ್ತವಾಗಿಡಲಾಗಿದೆ."

ಇದಾದ ಮೇಲೆ 'ತಾಸ್ಮಾನಿಯ' ಕಾಂಡದ ಕೂಗು ಎಲ್ಲೂ ಕೇಳಲಿಲ್ಲ. ಪತ್ರಿಕೆಗಳೂ ಆ ಬಗ್ಗೆ ಮೌನ ತಾಳಿದವು. ತಪ್ಪುಗಾರರಿಗೆ ಶಿಕ್ಷೆ ವಿಧಿಸಲಾಯಿತೆಂದೂ ಪಾರ್ಲಿಮೆಂಟಿಗೆ ತಿಳಿಸಲಾಯಿತಾದರೂ ಯಾವ ರೀತಿಯಲ್ಲಿ ಶಿಕ್ಷಿಸಲಾಯಿತೆಂದು ಯಾರಿಗೂ ತಿಳಿಯಲಿಲ್ಲ. ಭಾರತದಲ್ಲಿ ಬ್ರಿಟಿಶ್ ಸತ್ತೆಯನ್ನು ಕಿತ್ತೆಸೆಯಲೆತ್ನಿಸಿದ ಆ ಅನಾಮಧೇಯ ಕ್ರಾಂತಿಯ ಉಲ್ಲೇಖ ಇತಿಹಾಸದಲ್ಲೂ ಬರಲಿಲ್ಲ! ✡



- ಸ್ತ್ರೀಯರನ್ನು ನಿಂದಿಸುವವನು ಶೋಷಿಸುವವನು, ಆಪತ್ತಿಗೆ ಗುರಿಯಾಗುತ್ತಾನೆ.
- ಸ್ತ್ರೀಯರೆಲ್ಲರೂ ಮಾತೃಸ್ವರೂಪರಾಗಿದ್ದಾರೆ.
- ಯಾವ ದೇಶದಲ್ಲಿ ಸ್ತ್ರೀಯರಿಗೆ ಗೌರವವಿರುವುದಿಲ್ಲವೋ ಆ ದೇಶವು ಹಾಳಾಗುತ್ತದೆ.
- ಈ ಜಗತ್ತು ತಾಯಿಗೆ ಸೇರಿರುವುದಾಗಿದೆ. ಭೂಮಿಯು ತಾಯಿಯ ಸ್ವರೂಪಳಾಗಿದ್ದಾಳೆ.
- ಜಗತ್ತಿನಲ್ಲಿರುವುದೆಲ್ಲ ತಾಯಿಯ ಮಡಿಲಲ್ಲಿ ಉಯ್ಯಾಲೆಯಾಡಿ ಬಂದಿದೆ.

…ವೂ ಸತ್ಯಯುಕ್ತವೂ ಹೌದು
ಸತ್ತ್ವಯುತವೂ ಹೌದು

# ಸಂಸ್ಕೃತ ಸಾಹಿತ್ಯದಲ್ಲಿ ಮುಕ್ತಕಗಳು

ಶ್ರೀನಿವಾಸ ತೋಫಖಾನೆ

ಸಂಸ್ಕೃತ ಸಾಹಿತ್ಯ ವಿಸ್ತಾರ ವೈವಿಧ್ಯಗಳಿಗೆ ಹೆಸರಾಗಿದೆ. ಪದ್ಯ-ಗದ್ಯ-ಚಂಪೂ-ನಾಟಕಾದಿ ದಶವಿಧ ರೂಪಕಗಳಂತಹ ಪ್ರಭೇಧಗಳಿಂದಾಗಿ, ಮಹಾಕಾವ್ಯ-ಖಂಡಕಾವ್ಯ-ಕಥಾ-ಆಖ್ಯಾಯಿಕಾಗಳಂತಹ ಉಪಪ್ರಕಾರಗಳಿಂದಾಗಿ ಸಾಕಷ್ಟು ವೈವಿಧ್ಯವನ್ನು ಕಾಣುವಂತಾಗಿದೆ. ನವನವೋನ್ಮೇಷಶಾಲಿನಿಯಾದ ಕವಿಪ್ರತಿಭೆ ಒಂದೆಡೆ ಸರ್ಗ-ಸರ್ಗಗಳುದ್ದಕ್ಕೂ ನಿರರ್ಗಳವಾಗಿ ಹರಿದುಬರುವ ಮಹಾಕಾವ್ಯವನ್ನು ರಚಿಸಿ ರಸಿಕ ಲೋಕಕ್ಕೆ ನೀಡಿದರೆ, ಇನ್ನೊಂದೆಡೆ 'ಕಾವ್ಯಸ್ಯ ಏಕದೇಶಾನುಸಾರಿ' ಎಂದರೆ ಮಹಾಕಾವ್ಯವನ್ನು ಕೆಲವೊಮ್ಮೆ ಅಂಶಗಳಲ್ಲಿ ಅನುಸರಿಸುವ ಮೇಘದೂತದಂತಹ ಅದ್ವಿತೀಯವಾದ ಖಂಡಕಾವ್ಯವನ್ನೂ ಸೃಷ್ಟಿ ಮಾಡಿದೆ; ಮತ್ತೊಂದೆಡೆ ಖಂಡಕಾವ್ಯಕ್ಕಿಂತಲೂ ಚಿಕ್ಕದಾದ, ತೀರ ಚಿಕ್ಕದಾದ, ಎಂದರೆ ಒಂದು ಬಿಡಿ ಪದ್ಯಕ್ಕೆ ಸೀಮಿತವಾದ 'ಮುಕ್ತಕ'ವನ್ನು ನಿರ್ಮಿಸಿ, ಅವರಲ್ಲಿನ ಭಾವನಿರ್ಭರತೆಯಿಂದಲೂ ಬುದ್ಧಿಪ್ರಚೋದನೆಯಿಂದಲೂ ಸಕಲ ಸಹೃದಯಯರು ಬೆರಗುಗೊಂಡು, ತಣಿವಿನಿಂದ ತಲೆದೂಗುವಂತೆ ಮಾಡಿದೆ.

ದಂಡಿಯ 'ಕಾವ್ಯಾದರ್ಶ'ದ ೧.೧೩ ರಲ್ಲಿ ಮುಕ್ತಕವನ್ನು ವಿವರಿಸಲಾಗಿದೆ: 'ಮುಕ್ತಕಂ ಶ್ಲೋಕ ಏವೈಕಃ ಚಮತ್ಕಾರಕ್ಷಮಃ ಸತಾಮ್!' ಎಂಬ ಲಕ್ಷಣದ ಮೇರೆಗೆ ಮುಕ್ತಕದ ಗಾತ್ರ ಒಂದು ಶ್ಲೋಕ ಮಾತ್ರ. ಅದೊಂದು ಬಿಡಿ ನುಡಿಯಾಗಿದ್ದರೂ ಇಡಿಯ ವಿಚಾರವನ್ನು ಪ್ರತಿಪಾದಿಸಬಲ್ಲ, ತನ್ನಷ್ಟಕ್ಕೆ ತಾನೆ ಪೂರ್ಣ ಅರ್ಥವನ್ನು ಕೊಡಬಲ್ಲ, ಅಷ್ಟೇ ಏಕೆ ಒಂದು ಸಮಗ್ರ ಚಿತ್ರವನ್ನೆ ಕಣ್ಣೆದುರು ಕಟ್ಟಬಲ್ಲ ಶಕ್ತಿ ಅದಕ್ಕುಂಟು. 'ಅಗುಳಿನ ಮೇಲೆ ಅನ್ನದ ಪರೀಕ್ಷೆ' ಎನ್ನುವಂತೆ 'ಹಣ್ಣಿನ ಗುಣ ಹೀಚಿನಲ್ಲಿ ಕಾಣು' ಎನ್ನುವಂತೆ ಕವಿಯೋರ್ವನ ಕವಿತಾ ಸಾಮರ್ಥ್ಯದ ನಿದರ್ಶನ ಈ ಮುಕ್ತಕ ಎಂದರೆ ತಪ್ಪಾಗಲಾರದು. 'ಕಿಂದರೊಳ್ ಪಿರಿದರ್ಥಮಂ' ಎಂಬಂತೆ ಮುಕ್ತಕವು ಆಕಾರದಲ್ಲಿ ಕಿರಿದಾದರೂ ಅರ್ಥದಲ್ಲಿ ತುಂಬಾ ಹಿರಿದು. ಎಂತಲೆ ಮುಕ್ತಕದಲ್ಲಿ ಅಂತರ್ಗತವಾದ ಶಬ್ದಚಿತ್ರ ಸಜ್ಜನರ, ಬುದ್ಧಿಶಾಲಿಗಳ ಮನದಲ್ಲಿ ಚಮತ್ಕಾರವನ್ನುಂಟುಮಾಡಲು, ಕೌತುಕವನ್ನು ನಿರ್ಮಿಸಲು ಸಮರ್ಥವಾಗಿದೆ. ಮಹಾಕಾವ್ಯವು ಒಂದು ಮಧುಕುಂಭವೆನಿಸಿದರೆ

ಆ ಜೇಂಗೊಡದಲ್ಲಿನ ಒಂದು ಹನಿ ಮುಕ್ತಕ.

ಮುಕ್ತಕವು ಒಂದರ್ಥದಲ್ಲಿ ಸುಭಾಷಿತವೇ ಸರಿ. ಆದರೆ ಎಲ್ಲ ಸುಭಾಷಿತಗಳೂ ಮುಕ್ತಕಗಳಾಗ ಲಾರವು. ಏಕೆಂದರೆ ಸುಭಾಷಿತವು ಗದ್ಯರೂಪ ದಲ್ಲೂ ಇರಬಹುದು. 'ಸ್ನಿಗ್ಧಜನಸಂವಿಭಕ್ತಂ ಹಿ ದುಃಖಂ ಸಹ್ಯವೇದನಂ ಭವತಿ.' ಒಲವಿನ ಜನ ಪಾಲುಗೊಂಡಾಗ ದುಃಖವು ಸಹಿಸಲು ಸಾಧ್ಯ ವಾಗುತ್ತದೆ ಎಂಬ ಕಾಳಿದಾಸನ ಉಕ್ತಿ ಸುಭಾ ಷಿತವೇನೋ ಸರಿ. ಆದರೆ ಇದು ಮುಕ್ತಕವಲ್ಲ. ಮುಕ್ತಕಕ್ಕೆ ಛಂದಸ್ಸಿನ ಚೌಕಟ್ಟು ಇರಬೇಕಾ ದುದು ಅತ್ಯಗತ್ಯ. ಸುಭಾಷಿತಕಾರನೆಂದು ಲೋಕ ಪ್ರಿಯನಾದ ಭರ್ತೃಹರಿ ಹಲವು ಮುಕ್ತಕಗ- ಳನ್ನೇ ರಚಿಸಿ, ಅವುಗಳನ್ನೆ ಶತಕತ್ರಯಗಳನ್ನಾಗಿ ಪಣೆದಂತಿದೆ. ಇನ್ನೊಂದು ರೀತಿಯಿಂದ ಆಲೋ ಚಿಸಿದರೆ ಕೆಲವು ಮಹಾಕಾವ್ಯಗಳಲ್ಲಿ ನಾಟಕಗ ಳಲ್ಲಿ ಇರುವ ಕೆಲವೊಂದು ಶ್ಲೋಕಗಳು ಮುಕ್ತಕ- ಗಳಂತೆ ಸ್ವತಂತ್ರ ಅಸ್ತಿತ್ವವನ್ನು ಪಡೆದಿರಲು ಅರ್ಹವಾಗಿವೆ. ಉದಾಹರಣೆಗೆಂದು ಭವಭೂತಿಯ 'ಉತ್ತರರಾಮಚರಿತ' ದಲ್ಲಿನ—

'ವ್ಯತಿಷಜತಿ ಪದಾರ್ಥಾನಾಂತರಃ
ಕೋಪಿ ಹೇತುಃ-
ರ್ನ ಖಲು ಬಹಿರುಪಾಧೀನ್ ಪ್ರೀತಯಃ
ಸಂಶ್ರಯಂತೇ ।
ವಿಕಸತಿ ಹಿ ಪತಂಗಸ್ಯೋದಯೇ
ಪುಂಡರೀಕಂ
ದ್ರವತಿ ಚ ಹಿಮರಶ್ಮಾವುದ್ಗತೇ
ಚಂದ್ರಕಾಂತಃ ॥'

—ಎಂಬುದು ನಾಟಕದಲ್ಲಿ ಒಂದಾಗಿ ಬೆರೆತು ಬಂದ ಪದ್ಯವಾಗಿದ್ದರೂ ಮುಕ್ತಕದ ಎಲ್ಲ ಗುಣಗಳನ್ನು ಹೊಂದಿದೆ. ಅದಾವುದೊ ಅನಿರ್ವಚನೀಯವಾದ ಒಳಗಣ ಕಾರಣವೊಂದು ಬೇರೆ ಬೇರೆ ವಸ್ತುಗಳನ್ನು ಒಂದುಗೂಡಿಸು ತ್ತದೆ. ನಿಜವಾದ ಒಲವು ಹೊರಗಣ

ಉದಯಕ್ಕೆ ಕಮಲ ಅರಳುತ್ತದೆ. ಚಂದಿರನು ಮೂಡಿದನೆಂದರೆ ಚಂದ್ರಕಾಂತಶಿಲೆ ಹನಿಯೊಡೆ ಯುತ್ತದೆ. ಈ ತೆರನಾಗಿ ಪ್ರೀತಿಯ ಸಿದ್ಧಾಂತದ ಸಮಗ್ರ ಚಿತ್ರವೇ ಮೂಡಿಬಂದಿರುವ ಈ ಪದ್ಯ ರಸಿಕರ ಕೌತುಕಕ್ಕೆ ಪಾತ್ರವಾಗಿದ್ದು ಮುಕ್ತಕವೆನಿ ಸಿದೆ.

ಸಂಸ್ಕೃತ ಮುಕ್ತಕಕ್ಕೆ ಸದೃಶ್ಯವಾದ ಜಿಡಿ ಪದ್ಯ Limeric ಎಂಬ ಹೆಸರಿನಿಂದ ಆಂಗ್ಲ ಸಾಹಿತ್ಯದಲ್ಲಿ ಸುಮಾರು ಎರಡೂವರೆ ಶತಮಾನ ಗಳಿಂದ ಪ್ರಚಲಿತವಿದೆ. ಮೊದಮೊದಲು ಜಾನ ಪದ ಸಾಹಿತ್ಯದಲ್ಲಿ ಮಾತ್ರ ಪ್ರಚಾರ ಪಡೆದು ಭೀಭತ್ಸವೆನಿಸುವ ಲೈಂಗಿಕ ವಿಷಯಗಳಿಗೆ ಸೀಮಿತ ವಾಗಿದ್ದ ಲಿಮೆರಿಕ್ ಪದ್ಯಜಾತಿ ತರುವಾಯ ಹತ್ತೊಂಬತ್ತನೆಯ ಶತಕದಲ್ಲಿ ಎಡ್ವರ್ಡ್ ಲಿಯರ್ ಕವಿಯಿಂದಾಗಿ ಕಾವ್ಯಪ್ರಪಂಚದಲ್ಲಿ ಭದ್ರ ಸ್ಥಾನವನ್ನು ಪಡೆಯಿತೆಂದೂ ಅದರ ವಸ್ತುಕ್ಷೇತ್ರವು ವಿಸ್ತಾರಗೊಂಡಿತೆಂದೂ ಡಾ. ವಿ. ಕೆ. ಗೋಕಾಕ ಅವರು ಒಂದೆಡೆ ಅಭಿಪ್ರಾಯ ಪಟ್ಟಿದ್ದಾರೆ. ಹೀಗಾಗಿ ತಾತ್ವಿಕ ವಿವೇಚನೆಗಳೂ ಲಿಮೆರಿಕ್ ಪದ್ಯಗಳ ವ್ಯಾಪ್ತಿಗೆ ಒಳಪಡುವಂತಾ ಯಿತು. ಭಾರತದಲ್ಲಾದರೊ ಮುಕ್ತಕಗಳಿಗೆ ಪ್ರಾಚೀನ ಇತಿಹಾಸವುಂಟು.

'ಆಸ್ತೆ ಭಗ ಆಸೀನಸ್ಯ ಊರ್ಧ್ವಸ್ತಿಷ್ಠ-
ತಿಷ್ಠತಃ ಶೇತೇ ನಿಷದ್ಯಮಾನಸ್ಯ ಚರಾತಿ
ಚರತೋ ಭಗಃ ॥

-ಕುಳಿತಿರುವವನ ದೈವ ಕುಳಿತಿರುತ್ತದೆ. ಎದ್ದು ನಿಂತವನ ದೈವ ನಿಂತಿರುತ್ತದೆ, ಮಲಗಿದವನ ದೈವ ಮಲಗಿರುತ್ತದೆ, ಅಲೆದಾಡುವವನ ದೈವ ಅಲೆದಾಡುತ್ತದೆ.-ಇಂತಹ ವೈದಿಕ ವಾಙ್ಮಯ ದಲ್ಲಿನ ಪದ್ಯಗಳು ಮುಕ್ತಕಗಳೇ ಎಂದರೆ ತಪ್ಪಾಗ ಲಾರದು. ಅನಂತರದ ರಾಮಾಯಣ, ಮಹಾ ಭಾರತಗಳಲ್ಲಿ, ಪಂಚತಂತ್ರ-ಹಿತೋಪದೇಶಗಳಲ್ಲಿ, ಜಯದೇವ ವಿರಚಿತ 'ಗೀತಗೋವಿಂದ'ದ ಅಷ್ಟ

'ಕೃಷ್ಣಕರ್ಣಾಮೃತ'ದಲ್ಲಿ, ಭೋಜ ಪ್ರಬಂಧದದಲ್ಲಿಯ ಸಮಸ್ಯಾಪೂರ್ತಿ ಪ್ರಸಂಗಗಳಲ್ಲಿ ಬರುವ ಹಲವಾರು ಪದ್ಯಗಳು ಮುಕ್ತಕಗಳ ರೂಪವನ್ನು ಪಡೆದಿವೆ. ಹೀಗೆ ವ್ಯಾಪ್ತಿ ವಿಶಾಲವಾಗಿರುವದರ ಜೊತೆಗೆ ಅವುಗಳು ವಿಷಯ ವೈವಿಧ್ಯಕ್ಕೂ ಹೆಸರಾಗಿವೆ. ವ್ಯಾಜ ಸ್ತುತಿಯಿಂದ ಕೂಡಿದ ಭಕ್ತಿಯ ನಿರೂಪಣೆ, ಪ್ರಕೃತಿ ವರ್ಣನೆ, ಮಾನವ ಸ್ವಭಾವದ ಹಲವು ಮುಖಗಳು, ತ್ರಿಕಾಲಾಬಾಧಿತವಾದ ಸತ್ಯದ ಆವಿಷ್ಕರಣ ವಾಸ್ತವಾಂಶವುಳ್ಳ ಮಾರ್ಮಿಕ ಚಿತ್ರಣ ಮನಮೆಚ್ಚುವ ಕಾವ್ಯಾಲಂಕಾರಗಳ ಸಂಯೋಜನೆ ಇವೇ ಮುಂತಾದ ಅಂಶಗಳನ್ನು ಮುಕ್ತಕಗಳಲ್ಲಿ ಕಾಣಬಹುದು.

ಇನ್ನು ದಿಕ್ಸೂಚಿಯಾಗಿ ಕೆಲ ಮುಕ್ತಕಗಳನ್ನು ಗಮನಿಸಬಹುದು:

'ವಿಷ್ಣೋಶ್ಚಾಗಮನಂ ನಿಶಮ್ಯ ಸಹಸಾ
ಕೃತ್ವಾ ಫಣೀಂದ್ರಂ ಗುಣಂ
ಕೌಪೀನಂ ಕರಿಧಾಯ ಚರ್ಮ ಕರಿಣಃ
ಶಂಭೌ ಪುರೋಧಾವತಿ।
ದೃಷ್ಟ್ವಾ ವಿಷ್ಣುರಥಂ ಸಕಂಪಹೃದಯಃ
ಸರ್ಪೋತಿ ಪತದ್ ಭೂತಲೇ
ಕೃತ್ತಿರ್ವಿಸ್ಖಲಿತಾ ಹ್ರಿಯಾನತಮುಖೋ
ನಗ್ನೋ ಹರಃ ಪಾತು ವಃ॥

–ತನ್ನನ್ನು ಕಾಣಲು ವಿಷ್ಣು ಬರುತ್ತಿರುವನೆಂದು ಕೇಳಿ ಸರ್ಪಭೂಷಣನಾದ ಶಿವ ಹಾವನ್ನು ಉಡುದಾರವನ್ನಾಗಿ ಮೈ ಮೇಲೆ ಹೊದ್ದು ಗಜಚರ್ಮವನ್ನು ಕೌಪೀನವನ್ನಾಗಿ ಸಿಕ್ಕಿಸಿಕೊಂಡು, ವಿಷ್ಣುವನ್ನು ಬರಮಾಡಿಕೊಳ್ಳಲು ಭರದಿಂದ ಮುಂದೆ ಸಾಗಿದ. ಹರಿಯ ವಾಹನವಾದ ಗರುಡನನ್ನು ನಿರುಕಿಸಿ ಉಡುದಾರವಾಗಿದ್ದ ಹಾವು ಹೆದರಿ ಕಳಚಿಬಿತ್ತು. ಇದರಿಂದಾಗಿ ಗಜಚರ್ಮವು ಸಡಿಲುಗೊಂಡು ನೆಲಕಂಡಿತು. ಅಭ್ಯಾಗತನೆದುರು ತನ್ನ ನಗ್ನಾವಸ್ಥೆಯನ್ನು ತಪ್ಪಿಸಲು ಹವಣಿಸಿ ಭಗ್ನ ಮನೋರಥನಾಗಿ ನಾಚಿಕೆಯಿಂದ ಕೆಳಮೋರೆ ಮಾಡಿಕೊಂಡು. ನಿಂತ ಶಿವನು ನಿಮ್ಮನ್ನೆಲ್ಲ ಕಾಪಾಡಲಿ–ಎಂದು ಕವಿ ಹೇಳುವಲ್ಲಿ ಶಿವನು ಏಮಾರಿಸಬೇಕಾಗಿ ಬಂದ ಮೋಜಿನ ಪ್ರಸಂಗವೊಂದು ಇಲ್ಲಿನ ಮುಕ್ತಕಕ್ಕೆ ವಸ್ತುವನ್ನು ಪೂರೈಸಿದೆ.

ಸಂಸ್ಕೃತ ಭಾಷೆಯ ವೈಶಿಷ್ಟ್ಯಗಳಾದ ಸಂಧಿ–ಸಮಾಸಗಳ ಬಳಕೆ ಬಹಳಷ್ಟು ವಿಷಯಗಳನ್ನು ಅಲ್ಪ ಗಾತ್ರದಲ್ಲಿ ಹೇಳಲನುವಾಗುವಂತಿರುವ ಸಂಸ್ಕೃತದ ಅಸದೃಶ ಸಾಮರ್ಥ್ಯ ಇವುಗಳಿಂದಾಗಿ ಆಂಗ್ಲ ಕವಿಗಳು ಅಷ್ಟಪಟ್ಟದಿಗಳಲ್ಲಿ ವ್ಯಕ್ತಪಡಿಸಿರುವುದನ್ನೆ ಸಂಸ್ಕೃತ ಕವಿಗಳು ಬರಿ ನಾಲ್ಕು ಚರಣಗಳ ಚಿಕ್ಕದಾದ ಚೌಕಟ್ಟಿನಲ್ಲಿ ಅತ್ಯಂತ ಚೊಕ್ಕಟವಾಗಿ ಹೆಚ್ಚು ಪ್ರಭಾವಶಾಲಿಯಾಗಿ ವರ್ಣಿಸಬಲ್ಲರೆಂದು ಆಂಗ್ಲದೇಶದ ವಿಖ್ಯಾತ ಸಂಸ್ಕೃತ ವಿದ್ವಾಂಸ ಡಾ. ಎ. ಬಿ. ಕೀಥ್ ಅವರ ಸಂಸ್ಕೃತದ ಮಹತಿಯ ಮಾತು ಮುಕ್ತಕಕ್ಕೆ ಸಂಪೂರ್ಣವಾಗಿ ಅನ್ವಯಿಸುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಮುಕ್ತಕದ ಚೌಕಟ್ಟಿನಲ್ಲಿ ಸಂವಾದವನ್ನು ಅತ್ಯಂತ ಸೊಗಸಾದ ರೀತಿಯಲ್ಲಿ ಹೆಣೆಯಬಹುದೆಂಬುದಕ್ಕೆ ಒಂದು ಮಾದರಿ ಈ ಮುಂದಣ ಪದ್ಯ:

'ಹೇ ಹೇರಂಬ!' 'ಕಿಮಂ?' 'ರೋಧಿಷಿ
'ಕಥಂ?' 'ಕರ್ಣೌ ಲುಠತ್ಯಗ್ನಿ ಭೂಃ'
'ಕಿಂತೇ ಸ್ಕಂದ ವಿಚೇಷ್ಟಿತಂ?' 'ಮಮ
ಪುರಾ ಸಂಖ್ಯಾಕೃತಾ ಚಕ್ಷುಷಾಮ್।'
'ನೈತತ್ತೇಽಪ್ಯುಚಿತಂ ಗಜಾಸ್ಯ ಚರಿತಂ'
'ನಾಸಾಂ ಮಿಮಾತೇಂಬ ಮೇ'
'ತಾವೇವಂ ಸಹಸಾ ವಿಲೋಕ್ಯ ಹಸಿತವ್ಯ
ಗ್ರಾ ಶಿವಾ ಪಾತು ವಃ॥'

–'ಎಲವೊ ಗಜಾನನಾ!' 'ಏನಮ್ಮ?' 'ಅಳುವುದೇಕೆ' 'ಕುಮಾರ ನನ್ನ ಕಿವಿಗಳನ್ನು ಎಳೆದಾಡುತ್ತಾನೆ.' 'ಇದೇನು ಸ್ಕಂದ, ನಿನ್ನ ಕುಚೇಷ್ಟೆ?!' 'ಆತನೇ ಮೊದಲು ನನ್ನ ಕಣ್ಣುಗಳ ಎಣಿಕೆ ಮಾಡಿದ.' 'ಗಜಾನನಾ, ನಿನ್ನ ಈ ವರ್ತನೆ ಸರಿಯಲ್ಲ'

'ನಾನೇನು ಮಾಡಲಿ ಅಮ್ಮ, ನನ್ನ ಮೂಗನ್ನು ಅಳೆಯುತ್ತಾನೆ ಈತ!' ಇಂತು ಗಣಪತಿ ಷಣ್ಮುಖರಲ್ಲಿ ಜಗಳವೊಂದನ್ನು ಕಲ್ಪಿಸಿ ಕಲಹ ಕಂಡು ತಾಯಿ ನಕ್ಕಳು. ಹೌದು, ಚಿಂತೆಗೊಳಗಾದುದೂ ಹೌದೆಂದು ಹೇಳಿ, ಇಂತಹ ಪಾರ್ವತಿ ನಿಮ್ಮನ್ನೆಲ್ಲ ಕಾಪಾಡಲೆಂದು ಬೇಡಿಕೊಳ್ಳುತ್ತಾನೆ ಕವಿ ಇಲ್ಲಿನ ಮುಕ್ತಕದಲ್ಲಿ.

ಆದರ್ಶಪ್ರಾಯರಾದ ಪುರುಷರಲ್ಲಿ ನೆಲೆಸಿರುವ ಸದ್ಗುಣಗಳ ಪಟ್ಟಿಯನ್ನೆ ತಯಾರಿಸಿದ್ದಾನೆ ಭರ್ತೃಹರಿ ಮುಕ್ತಕವೊಂದರಲ್ಲಿ. ಅದು ಹೀಗೆ:

> 'ವಾಂಛಾ ಸಜ್ಜನಸಂಗಮೇ ಪರಗುಣೇ
> ಪ್ರೀತಿರ್ಗುರೌ ನಮ್ರತಾ
> ವಿದ್ಯಾಯಾಂ ವ್ಯಸನಂ ಸ್ವಯೋಷಿತಿ ರತಿ
> ರ್ಲೋಕಾಪವಾದಾದ್ ಭಯಮ್ ।
> ಭಕ್ತಿಃ ಶೂಲಿನಿ ಶಕ್ತಿರಾತ್ಮದಮನೇ
> ಸಂಸರ್ಗಮುಕ್ತಿಃ ಖಲೇ
> ಏತೇ ಯೇಷು ವಸಂತಿ ನಿರ್ಮಲಗುಣಾ
> ಸ್ತೇಭ್ಯೋ ನರೇಭ್ಯೋನಮಃ ॥

–ಸಜ್ಜನರ ಸಂಗದ ಬಯಕೆ, ಪರರ ಸದ್ಗುಣಗಳ ವಿಷಯದಲ್ಲಿ ಪ್ರೀತ್ಯಾದರ, ಗುರುಹಿರಿಯರಲ್ಲಿ ನಮ್ರಭಾವ, ವಿದ್ಯೆಯ ಬಗೆಗೆ ಆಸಕ್ತಿ, ತನ್ನ ಸತಿಯಲ್ಲಿ ರತಿ, ಜನನಿಂದೆಯ ಬಗ್ಗೆ ಭೀತಿ, ಈಶ್ವರನಲ್ಲಿ ಭಕ್ತಿ, ತನ್ನನ್ನು ತಾನೇ ನಿಗ್ರಹ ಮಾಡಿಕೊಳ್ಳುವಲ್ಲಿ ಶಕ್ತಿ, ದುಷ್ಟರ ಸಹವಾಸದಿಂದ ದೂರಾಗಿರುವುದು ಇಂತಹ ಗುಣಗಳುಳ್ಳ ಮಾನವರಿಗೆ ತನ್ನ ವಂದನೆಗಳನ್ನು ಸಲ್ಲಿಸುತ್ತಾನೆ ಕವಿ ಈ ಶ್ಲೋಕದಲ್ಲಿ.

'ಪಿಂಡೇ ಪಿಂಡೇ ಮತಿರ್ಭಿನ್ನಾ' ಎಂಬಂತೆ ಮನುಷ್ಯ–ಮನುಷ್ಯರಲ್ಲಿನ ಸ್ವಭಾವ ವೈಷಮ್ಯದಿಂದ ಉಂಟಾಗುವ ಮಾನವಲೋಕದ ವರ್ಗೀಕರಣವನ್ನೇ ನಿರೂಪಿಸಿದ್ದಾನೆ, ಭರ್ತೃಹರಿ ಈ ಮುಕ್ತಕದಲ್ಲಿ:

> 'ಏಕೆ ಸತ್ಪುರುಷಾಃ ಪರಾರ್ಥಘಟಕಾಃ
> ಸ್ವಾರ್ಥಂ ಪರಿತ್ಯಜ್ಯಯೇ
> ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಃ
> ಸ್ವಾರ್ಥಾವಿರೋಧೇನ ಯೇ।
> ತೇಽಮೀ ಮಾನವ ರಾಕ್ಷಸಾ ಪರಹಿತಂ
> ಸ್ವಾರ್ಥಾಯ ನಿಘ್ನಂತಿ ಯೇ ಯೇ
> ನಿಘ್ನಂತಿ ನಿರರ್ಥಕಂ ಪರಹಿತಂ ತೇ ಕೇನ
> ಜಾನೀ ಮಹೇ ॥

–ಈ ಮನುಷ್ಯ ಪ್ರಪಂಚದಲ್ಲಿ ಸ್ವಾರ್ಥವನ್ನು ಬದಿಗೊತ್ತಿ, ಪರರ ಹಿತವನ್ನೇ ಬಗೆಯುವ ಸತ್ಪುರುಷರು ಕೆಲವರು; ತಮ್ಮ ಹಿತಕ್ಕೆ ಅವಿರೋಧಿಯಾಗಿ ಪರರ ಹಿತವನ್ನು ಸಾಧಿಸುವ ಸಾಮಾನ್ಯರು ಹಲವರು. ಇನ್ನು ಬೇರೆಯವರು ತಮ್ಮ ಹಿತಕ್ಕಾಗಿ ಪರಹಿತವನ್ನು ಬಲಿಕೊಡುವ ಮಾನವ ರಾಕ್ಷಸರು; ಆದರೆ ಸುಮ್ಮಸುಮ್ಮನೆ ಪರಹಿತವನ್ನು ಹಾಳುಗೆಡಹುವ ಮತ್ತಿತರ ಜನರನ್ನು ಏನೆಂದು ಕರೆಯುವುದು ಎಂಬುದೇ ಅರಿಯದು. ಇತ್ತ ತಮ್ಮ ಹಿತವೂ ಇಲ್ಲ, ಪರರ ಹಿತವೂ ಇಲ್ಲ, ಇಂತಹ ಅಧಮಾಧಮರನ್ನು ಹೆಸರಿಸಲು ಕೂಡ ಆಗದೆನ್ನುವ ಈ ಮುಕ್ತಕದಲ್ಲಿ ಮನುಜರಲ್ಲಿಯ ನಾಲ್ಕು ಪ್ರಕಾರಗಳನ್ನೇ ಕಾಣುತ್ತೇವೆ.

'ತಾನೊಂದು ಬಗೆದರೆ ದೈವ ಇನ್ನೊಂದು ಬಗೆಯಿತು' ಎಂಬ ನಾಣ್ಣುಡಿಯನ್ನು ವಿಶದೀಕರಿಸಲೆಂಬಂತೆ ಮತ್ತೊಂದು ಮುಕ್ತಕವು ತನ್ನಲ್ಲಿರುವ ಶಬ್ದಚಿತ್ರಣದ ಸೌಂದರ್ಯದಿಂದ ಕೂಡಿರುವಂತೆಯೆ ಧ್ವನಿತವಾಗುವ ತತ್ವಗಾಂಭೀರ್ಯದಿಂದಲೂ ಸರ್ವಶ್ರುತವಾಗಿದೆ.

> 'ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಂ
> ಭಾಸ್ವಾನುದೇಷ್ಯತಿ ಹಸಿಷ್ಯತಿ ಪಂಕಜಶ್ರೀಃ।
> ಇತ್ಥಂ ವಿಚಿಂತಯತಿ ಕೋಶಗತೇ ದ್ವಿರೇಫೆ
> ಹಾ ಹಂತ ಹಂತ ನಲಿನೀಂ ಗಜ
> ಉಜ್ಜಹಾರ॥'

–ಕಮಲದ ಬಂಡುಣಲು ಬಂದ ದುಂಬಿಯೊಂದು ಸಂಜೆಯಾದರೂ ಆಸೆಬುರುಕತನದಿಂದ ಅಲ್ಲಿಂದ ಕದಲಲಿಲ್ಲ. ರವಿ ಮುಳುಗಿದ, ಕಮಲ ತನ್ನ [illegible]

ಳೆಗಳನ್ನು ಮುಚ್ಚಿಕೊಂಡಿತು. ದುಂಬಿ ಒಳಗಡೆಯೆ ಸೆರೆಯಾಳಾಯಿತು. ತನ್ನೊಳಗೆ ತಾನೇ ಆಗ ಯೋಚಿಸತೊಡಗಿತು: ಇರುಳು ಕಳೆಯುವುದು; ಬೆಳಗಾಗುವುದು; ನೇಸರ ಉದಯಿಸುವನು ಕಮಲ ಅರಳಿ ನಾನು ಮತ್ತೆ ಬಿಡುಗಡೆ ಹೊಂದುವೆನು. ಈ ತೆರನಾಗಿ ಆ ಪುಟ್ಟ ಜೀವ ಆಲೋಚಿಸು ತ್ತಿದ್ದಂತೆಯೆ, ಅಯ್ಯೋ ಪಾಪ, ಆ ಕಮಲವನ್ನೇ ಆನೆಯೊಂದು ಬೇರು ಸಹಿತ ಕಿತ್ತು ಹಾಕಿತು. ಕಣ್ಣೆದುರು ಕಟ್ಟುವಂತಹ ಇಲ್ಲಿನ ಕಿರಿದಾಕಾರದ ಚಿತ್ರಣವು (miniature painting) ದೈವದ ಬಲವತ್ತರ ಸ್ವರೂಪವನ್ನು ಮನದ ಮೇಲೆ ಅಚ್ಚೊತ್ತಿ ನಿಲ್ಲುತ್ತದೆ.

ಕೆಲವೊಮ್ಮೆ ಕೊನೆಯ ಚರಣದಲ್ಲಿ ಸಾಮಾನ್ಯ ತತ್ವ ನಿವೇದಿತವಾಗಿರುತ್ತದೆ. ಅದನ್ನು ಸಮರ್ಥಿ ಸಲೋಸುಗವೆ ರಚಿತವಾದಂತಿರುವ ಮೊದಲ ಮೂರು ಚರಣಗಳುಳ್ಳ ಮುಕ್ತಕಗಳಿಗೂ ಸಂಸ್ಕೃತ ದಲ್ಲಿ ಕೊರತೆಯಿಲ್ಲ. ಇಂಥವುಗಳಲ್ಲಿ ಕೆಲವು 'ಭೋಜಪ್ರಬಂಧ'ದಲ್ಲಿ ಉಕ್ತವಾದ ಸಮಸ್ಯಾ ಪೂರ್ತಿಯ ಪದ್ಯಗಳೂ ಆಗಿವೆ.

'ರಥಸ್ಯೈಕಂ ಚಕ್ರಂ ಭುಜಗಯಮಿತಾ
ಸಪ್ತ ತುರಗಾಃ
ನಿರಾಲಂಬೋ ಮಾರ್ಗಶ್ಚರಣರಹಿತಃ
ಸಾರಥಿರಪಿ!
ರವಿರ್ಯಾತ್ಯೇವಾಂತಂ ಪ್ರತಿದಿನಮಪಾ
ರಸ್ಯ ನಭಸಃ
ಕ್ರಿಯಾಸಿದ್ಧಿಃ ಸತ್ತ್ವೇ ಭವತಿ ಮಹತಾಂ
ನೋಪಕರಣೇ॥'

ಎಂಬಲ್ಲಿ ಮಹಾವ್ಯಕ್ತಿಗಳಾದವರು ಪಡೆಯುವ ಕಾರ್ಯಸಿದ್ಧಿಯು ಅವರ ಅಂತಃಸತ್ತ್ವವನ್ನವ ಲಂಬಿಸಿದೆಯೆ ಹೊರತು ಅವರ ಬಳಿ ಇರುವ ಇಲ್ಲವೆ ಅವರು ಬಳಸುವ ಉಪಕರಣಗಳನ್ನಲ್ಲ ಎಂಬ ತತ್ತ್ವವು ನಾಲ್ಕನೆ ಚರಣದಲ್ಲಿ ಅಡಕವಾ-ಗಿದ್ದು ಅದರ ಸಮರ್ಥನೆಗಾಗಿ ಪುಷ್ಟೀಕರಣ ಕ್ಕಾಗಿ ಮೊದಲು ಮೂರು ಸಾಲುಗಳಲ್ಲಿ ಸೂರ್ಯನ ನಿತ್ಯಪ್ರವಾಸ ಚಿತ್ರಿತವಾಗಿದೆ. ಸೂರ್ಯನ ರಥಕ್ಕೊ ಒಂದೇ ಗಾಲಿ; ರಥಕ್ಕೆ ಹೂಡಿದ ಏಳು ಕುದುರೆಗಳನ್ನು ನಿಯಂತ್ರಿಸುವ ಲಗಾಮು ಒಂದು ಹಾವು; ಆತ ಕ್ರಮಿಸಬೇಕಾದ ದಾರಿಯೋ ಆಧಾರರಹಿತವಾದ ಅಂತರಾಳ; ಆತನ ಸಾರಥಿ ಯೋ ಚರಣಹಿತನಾದ ಅರುಣ (ಅನೂರು-ಅಪಾದ ಎಂದರೆ ತೊಡೆ ಅಡಿಗಳೇ ಇಲ್ಲದವನೆಂದು ವರ್ಣಿಸಲ್ಪಡುವ ಅರುಣ) ಹೀಗಿದ್ದರೂ ಕೊನೆ ಯಿಲ್ಲದ ಆಗಸದ ಆಚೆಯ ತುದಿಯನ್ನು ದಿನ ದಿನವೂ ಸೂರ್ಯದೇವ ತಲುಪುವನು. ರವಿಯ ಯಶಸ್ವಿ ನಿತ್ಯಪ್ರಯಾಣಕ್ಕೆ ಆತನಲ್ಲಿ ಮಡುಗಿದ ಸತ್ತ್ವವೇ ಕಾರಣವೆನ್ನುವಂತೆ ಇಲ್ಲಿನ ಮುಕ್ತಕವು ಚಿತ್ರಿತವಾಗಿದೆ.

ಒಂದೇ ವಸ್ತುವನ್ನು ಪರಿಸರದ ಭಿನ್ನತೆ ಯಿಂದಾಗಿ ಇಬ್ಬಗೆಯಾಗಿ ಕಾಣುವ ಜೋಡಿ ಮುಕ್ತಕಗಳೂ ಉಂಟು. ಸಕಲ ಸುಖ-ಸೌಕರ್ಯ ಗಳಿದ್ದರೆ ಗೃಹಸ್ಥಾಶ್ರಮ ಧನ್ಯವೆನಿಸುತ್ತದೆ, ಸ್ಪೃಹಣೀಯವಾಗುತ್ತದೆ. ಆದರೆ ಎಲ್ಲವೂ ಪ್ರತಿ ಕೂಲವಾಗಿದ್ದಲ್ಲಿ ಅದೇ ಗೃಹಸ್ಥಾಶ್ರಮವು ತಿರಸ್ಕರಣೀಯವಾಗುತ್ತದೆ; ಅಂತಹವಕ್ಕೆ ಧಿಕ್ಕಾರ ಎನ್ನುತ್ತಾನೆ ಕವಿ. ಇದೊ ಇಲ್ಲಿದೆ ಆ ಮುಕ್ತಕಗಳ ಜೋಡಿ.

'ಸಾನಂದಂ ಸದನಂ ಸುತಾಶ್ಚ ಸುಧಿಯಃ
ಕಾಂತಾ ನ ದುರ್ಭಾಷಿಣೀ
ಸನ್ಮಿತ್ರಂ ಸುಧನಂ ಸ್ವಯೋಷಿತಿ
ರತಿಶ್ಚಾಜ್ಞಾಪರಾಃ ಸೇವಕಾಃ।
ಆತಿಥ್ಯಂ ಶಿವಪೂಜನಂ ಪ್ರತಿದಿನಂ
ಮಿಷ್ಟಾನ್ನಪಾನಂ ಗೃಹೇ
ಸಾಧೋಃ ಸಂಗಮುಪಾಸತೇ ಹಿ ಸತತಂ
ಧನ್ಯೋ ಗೃಹಸ್ಥಾಶ್ರಮಃ॥'

–ಸಂತಸದಿಂದ ಕೂಡಿದ ಮನೆ, ಬುದ್ಧಿಶಾಲಿ ಮಕ್ಕಳು, ಮಧುರಭಾಷಿಣಿಯಾದ ಒಲವಿನ ಹೆಂಡತಿ, ಒಳ್ಳೆಯ ಗೆಳೆಯ, ನ್ಯಾಯವಾಗಿ ಗಳಿಸಿದ ಹಣ, ತನ್ನ ಸ್ತ್ರೀಯಲ್ಲಿಯೆ [illegible]

ಗಾಗಿ ವರ್ತಿಸುವ ಸೇವಕಜನ, ಮನೆಗೆ ಬಂದ ಅತಿಥಿಗಳಿಗೆ ಸತ್ಕಾರ, ನಿತ್ಯ ಶಿವಾರ್ಚನೆ, ಮೃಷ್ಟಾನ್ನಭೋಜನ, ಸತ್ಸಂಗ ಇವೆಲ್ಲ ಇದ್ದಿರಲು ಗೃಹಸ್ಥಾಶ್ರಮವು ಧನ್ಯವೆನಿಸದೆ ಇನ್ನೇನು?... ಆದರೆ ಇದಕ್ಕೆ ವಿರುದ್ಧವಾಗಿ......

'ಕ್ರೋಶಂತಃ ಶಿಶವಃ ಸವಾರಿ ಸದನಂ
ಪಂಕಾವೃತಂ ಚಾಂಗಣಂ
ಶಯ್ಯಾ ದಂಶವತೀ ಚ ರುಕ್ಷಮಶನಂ
ಧೂಮೇನ ಪೂರ್ಣಂ ಗೃಹಮ್।
ಭಾರ್ಯಾ ನಿಷ್ಠುರಭಾಷಿಣೀ ಪ್ರಭುವತಿ
ಕ್ರೋಧೇನ ಪೂರ್ಣಃ ಸದಾ
ಸ್ನಾನಂ ಶೀತಲವಾರಿಣಾ ಹಿ ಸತತಂ
ಧಿಗ್‌ಧಿಗ್ ಗೃಹಸ್ಥಾಶ್ರಮಮ್॥'

–ಅಳುಬುರುಕ ಮಕ್ಕಳು, ಸೋರುವ ಮನೆ, ಕೆಸರಿನಿಂದ ಕೂಡಿ ಅಂಗಳ, ಸೊಳ್ಳೆ ಕಡಿತವುಳ್ಳ ಹಾಸುಗೆ, ಣಗಿ ಬರಡಾದ ಆಹಾರ, ಹೊಗೆ ಸುತ್ತಾ ಮನೆ, ಬಿರುನುಡಿಯಾಡುವ ಮಡ , ಸದಾ ಸಿಟ್ಟಿಗೇಳುವ ಒಡೆಯ, ತಣ್ಣೀರಿನ ಸ್ನಾನ ಇವೇ ಮುಂತಾದ ಹಲವು ತೆರನಾದ ಪ್ರತಿಕೂಲಗಳಿದ್ದರೆ ದೇವರೆ! ಸಾಕಪ್ಪ ಈ ಗೃಹಸ್ಥಾಶ್ರಮ! ಇದಕ್ಕೆ ಧಿಕ್ಕಾರ!! ಎನ್ನುವಂತಿದೆ. ಈ ಎರಡನೆಯ ಶ್ಲೋಕ.

ಕವಿ ಭಾರವಿಯದೆಂದು ಹೇಳಲಾಗುವ ಇನ್ನೊಂದು ಸೂಕ್ತಿ ಕಮನೀಯವಾದ ವಾಸ್ತವಿಕತೆಯಿಂದ ಕ ಡಿದೆ.

'ಶ್ವಶುರ ನಿವಾಸಃ ಸ್ವರ್ಗತುಲ್ಯೋ
ನರಾಣಾಂ
ಯದಿ ವ ತಿ ದಿನಾನಿ ತ್ರೀಣಿ ಪಂಚಾಥ

ಸಪ್ತ!
ದಧಿ ಮಧು ಘೃತ ಭಕ್ಷ್ಯ ಕ್ಷೀರ ಸಾರ
ಪ್ರವಾಹಃ
ತದುಪರಿ ನಿವಸೇಚ್ಚೇದ್ ಅನ್ನಸಾರಪ್ರವಾಹಃ॥

–ಮಾವನ ಮನೆ ಎಂದರೆ ಮಾನವರಿಗೆ ಸ್ವರ್ಗಕ್ಕೆ ಸಮಾನ. ಯಾವಾಗ? ಮೂರೋ ಐದೂ ದಿನ ಬಹಳ ಹೆಚ್ಚೆಂದರೆ ಏಳು ದಿನ ಅಲ್ಲಿ ಉಳಿದುಕೊಂಡರೆ ಮಾತ್ರ. ಆಗ ಅಳಿಯನಿಗೆಂದು ಕೆನೆಮೊಸರು ಹಾಲುತುಪ್ಪ ಜೇನು ತುಪ್ಪ ಬಗೆ ಬಗೆಯ ಭಕ್ಷ್ಯಗಳ ಹೊಳೆಯೇ ಹರಿಯುತ್ತದೆ. ಆದರೆ ಆತ ಇನ್ನಷ್ಟು ದಿನ ಅಲ್ಲಿಯೆ ತಂಗಿದನಾದರೆ, ಬರಿ ಸಾರು ಅನ್ನ ಲಭಿಸೀತು ಎಂಬ ಎಚ್ಚರಿಕೆಯ ಧ್ವನಿಯಿಂದ ಕೂಡಿದ ವಾಸ್ತವಿಕ ಚಿತ್ರ ಈ ಪದ್ಯವಾಗಿದೆ.

ಮಾನವಸಂಸಾರದ ಎರಡು ಮುಖಗಳನ್ನು ವೈಷಮ್ಯದ ರೀತಿಯಿಂದ ಎತ್ತಿ ತೋರಿಸುವ ವೈಶಿಷ್ಟ್ಯ ಇನ್ನೊಂದು ಮುಕ್ತಕದ್ದಾಗಿದೆ. ಹೀಗಿದೆ ಅದು:

'ಕ್ವಚಿತ್ ವಿದ್ವದ್ಗೋಷ್ಠೀ ಕ್ವಚಿದಪಿ
ಸುರಾಮತ್ತಕಲಹಃ
ಕ್ವಚಿದ್ ವೀಣಾವಾದಃ ಕ್ವಚಿದಪಿ ಚ
ಹಾಹೇತಿ ರುದಿತಮ್!
ಕ್ವಚಿದ್ ರಮ್ಯಾ ರಾಮಾ ಕ್ವಚಿದಪಿ
ಜರಾಜರ್ಜರತನುಃ
ನ ಜಾನೇ ಸಂಸಾರಃ ಕಿಮಮೃತಮಯಃ
ಕಿಂ ವಿಷಮಯಃ॥'

–ಒಂದೆಡೆ ವಿದ್ವಾಂಸರ ಸಭೆ ಜರುಗುತ್ತಿದ್ದರೆ ಇನ್ನೊಂದೆಡೆ ಅಮಲೇರಿದ ಸೆರೆಗುಡುಕರ ಜಗಳಾಟ. ಒಂದೆಡೆ ಇಂಪಾದ ವೀಣಾವಾದನ ಸಾಗುತ್ತಲಿದ್ದರೆ ಮತ್ತೊಂದೆಡೆ ಅಯ್ಯೋ ಅಯ್ಯೋ ಎನ್ನುವ ಅಳುವ ಸ್ವರ; ಒಂದೆಡೆ ಮನಮೋಹಕ ರಮಣಿ ಇದ್ದರೆ ಮಗದೊಂದೆಡೆ ಮುಪ್ಪಿನಿಂದ ಸೋತು ಸವಕಳಿಯಾದ ಶರೀರ; ಹೀಗಿದೆ ಈ ಸಂಸಾರದ ರೀತಿ; ಇದೇನು ಅಮೃತಮಯವೋ ವಿಷಮಯವೋ ಎನ್ನುವುದೇ ಅರಿಯದ ಸಂಗತಿಯೆಂದು ಕವಿಯ ಆಶಯ. ಪ್ರಪಂಚದ ಪರಸ್ಪರ ವಿರುದ್ಧವಾದ ಅಂಶಗಳನ್ನು ಒಂದೇ ಸಾಲಿನಲ್ಲಿ ಬದಿಬದಿಗೆ ಇರಿಸಿ ಹೆಚ್ಚಿನ ಪರಿಣಾಮವನ್ನು ಸಾಧಿಸುವ ರೀತಿ ಇಲ್ಲಿಯದು ಎಂದರೆ ತಪ್ಪಾಗಲಿಕ್ಕಿಲ್ಲ.

ಕಾಳಿದಾಸನದಾದ, ಪದೇ ಪದೇ ಉಲ್ಲೇಖಗೊಳ್ಳುವ ಶ್ಲೋಕವಾದ:

'ಪುರಾಣ ಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನವಮಿತ್ಯವದ್ಯಮ್
ಸಂತಃ ಪರೀಕ್ಷ್ಯಾನ್ಯತರದ್ ಭಜಂತೆ
ಮೂಢಃ ಪರಪ್ರತ್ಯಯನೇಯ ಬುದ್ಧಿಃ॥

–ಎಂಬಲ್ಲಿಯ ಅಭಿಪ್ರಾಯವನ್ನು ಮುಕ್ತಕಗಳಿಗೂ ಅನ್ವಯಿಸಬಹುದು. ಬರಿ ಒಂದು ಬಿಡಿ ಪದ್ಯವೆಂದು ಮುಕ್ತಕದ ಮೇಲ್ಮೆಯನ್ನು ಅಲ್ಲಗಳೆಯಲು ಬಾರದು. ಅದೇ ತೆರನಾಗಿ ಪ್ರತಿಯೊಂದು ಮುಕ್ತಕವೂ ಅಷ್ಟೇ ಗುಣಮಟ್ಟವುಳ್ಳದ್ದು ಎಂದೂ ಹೇಳಲಾಗದು. ಗುಣಾವಗುಣವನ್ನು ಅಳೆದೇ ಆ ಅಮುಕ್ತಕದ ಬೆಲೆಕಟ್ಟುವುದು ಉಚಿತ. ಅದೇನೇ ಇರಲಿ; ಸತ್ಯಯುಕ್ತ, ಸತ್ತ್ವಯುತ, ಪ್ರಿಯಕರ, ಹಿತಕರ, ಚಮತ್ಕಾರ, ಕ್ಷಮ, ಮನೋರಂಜಕ ಎನಿಸುವ ಮುಕ್ತಕಗಳೆಂಬ ಮುಕ್ತಾಮಣಿಗಳ ಹಾರವನ್ನು ಸಂಸ್ಕೃತ ವಾಗ್ದೇವಿಯ ಕೊರಳಲ್ಲಿರಿಸಿದ ಕವಿವೃಂದ ಸರ್ವರ ಅಭಿನಂದನಗಳಿಗೆ ಪಾತ್ರವೆಂಬಲ್ಲಿ ಸಂದೇಹವಿಲ್ಲ. ✡

(ಧಾರವಾಡ ಆಕಾಶವಾಣಿಯ ಕೃಪೆಯಿಂದ)



# ಇದು ವೆಜೀವ ಇದು ಜೀವನ

ಭಾರತಕ್ಕೆ ಸ್ವಾತಂತ್ರ್ಯ ಬಂದು ಏಳೆಂಟು ವರ್ಷಗಳಾಗಿರಬಹುದು. ಪಾಕಿಸ್ತಾನದಿಂದ ಜನ ಪ್ರವಾಹೋಪಾದಿಯಲ್ಲಿ ಭಾರತದ ಎಲ್ಲ ಕಡೆ ಇನ್ನೂ ಬರುತ್ತಿದ್ದ ಸಮಯ. ಆಗ ನಾನು ಬೆಂಗಳೂರಿನಲ್ಲಿ ಭಾರತ ಸರಕಾರದ ವಾರ್ತಾ ಕಚೇರಿಯ ಉದ್ಯೋಗಿ. ನಮ್ಮ ಕಚೇರಿಯು ಪತ್ರಿಕೆಗಳಿಗೆ ಕೇಂದ್ರ ಸರಕಾರದ ಕಾರ್ಯ ಚಟುವಟಿಕೆಗಳನ್ನು ತಿಳಿಸುವ ಪ್ರಕಟನೆಗಳನ್ನು ಹಂಚುತ್ತಿತ್ತು. ಪತ್ರಿಕೆಗಳೇ ಅಲ್ಲದೆ ಮಹಾ ಜನರು ಸಹ ವಿವರಗಳನ್ನು ತಿಳಿದುಕೊಳ್ಳುವುದಕ್ಕಾಗಿ ನಮ್ಮ ಕಚೇರಿಗೆ ಬರುತ್ತಿದ್ದರು.

ಆ ಸಮಯದಲ್ಲಿ ಆನಂದ ಎಂಬವರು ನನ್ನಲ್ಲಿಗೆ ಬರುತ್ತಿದ್ದರು. ತಾವು ಪಶ್ಚಿಮ ಪಾಕಿಸ್ತಾನದಿಂದ ಬಂದ ನಿರಾಶ್ರಿತರೆಂದೂ ಅಲ್ಲಿ ಲಕ್ಷಾಂತರ ರೂಪಾಯಿಗಳ ಬೆಲೆ ಬಾಳುವ ಆಸ್ತಿ ಪಾಸ್ತಿಗಳನ್ನು ಬಿಟ್ಟು ನಿರ್ಗತಿಕರಾಗಿ ಬೆಂಗಳೂರಿಗೆ ಬಂದವರೆಂದೂ ಹೇಳಿಕೊಳ್ಳುತ್ತಿದ್ದರು. ಕೇಂದ್ರ ಸರಕಾರದ ಪುನರ್ವಸತಿ ಮಂತ್ರಿ ಶಾಖೆಯು ಹೊರಡಿಸುವ ಪತ್ರಿಕಾಪ್ರಕಟನೆಗಳ ಪ್ರತಿಗಳನ್ನು ತಮಗೆ ಕೊಟ್ಟು ಉಪಕಾರ ಮಾಡಬೇಕೆಂದು ಕೇಳಿಕೊಳ್ಳುತ್ತಿದ್ದರು. ಅವರ ಬಗೆಗಿನ ಅನುಕಂಪದಿಂದಾಗಿ ನಾನು ಅವರಿಗೆ ಪ್ರತಿ ಶನಿವಾರವೂ ಬಂದು ನನ್ನನ್ನು ಭೇಟಿ ಮಾಡಿ, ಆ ವಾರದಲ್ಲಿ ಏನಾದರೂ ಪ್ರಕಟನೆಗಳು ಬಂದಿದ್ದ ಪಕ್ಷದಲ್ಲಿ ನಿಮಗಾಗಿ ಅವನ್ನು ತೆಗೆದಿಟ್ಟಿರುವೆ ಎಂದು ಹೇಳಿ ಕಳುಹಿಸುತ್ತಿದ್ದೆ. ಅವರು ತಪ್ಪದೆ ಬರುತ್ತಿದ್ದರು. ಅವರಿಗೆ ಪ್ರಕಟನೆಗಳ ಪ್ರತಿಗಳನ್ನು ಕೊಡುವುದೇ ಅಲ್ಲದೆ ರಾಜ್ಯ ಸರಕಾರದಲ್ಲಿ ಯಾರನ್ನು ಕಂಡರೆ ಕೆಲಸವಾಗಬಹುದು ಎಂಬುದನ್ನು ಹೇಳಿದೆ.

ಒಮ್ಮೆ ಅವರು ನನ್ನಲ್ಲಿಗೆ ಬಂದು ರಾಜ್ಯ ಸರಕಾರವು ತಮಗೆ ಬೆಂಗಳೂರಿನಲ್ಲಿ ಸೈಟ್ ಕೊಟ್ಟಿರುವದಾಗಿಯೂ ಕೇಂದ್ರ ಸರಕಾರದಿಂದ ಪರಿಹಾರ ಧನ ದೊರಕಿಸಿಕೊಳ್ಳಲು ಪ್ರಯತ್ನಿಸುತ್ತಿರುವುದಾಗಿಯೂ ಹೇಳಿದರು. ಅನಂತರ ಆನಂದ ಅವರ ಪತ್ತೆಯೇ ಇಲ್ಲ. ನನಗೂ ಅವರ ವಿಷಯ ಮರೆತೇ ಹೋಗಿತ್ತು.

ಒಂದೆರಡು ವರ್ಷಗಳ ನಂತರ ಒಂದು ದಿನ ಅವರು ಇದ್ದಕ್ಕಿದ್ದಂತೆಯೇ ಬಂದು ಕೈಕುಲುಕಿ "ಮಿ. ರಾವ್, ನೀವು ನನಗೆ ತುಂಬ ಉಪಕಾರ ಮಾಡಿದ್ದೀರಿ. ಅವನ್ನೆಂದೂ ಮರೆಯಲಾರೆ. ಜಯನಗರದಲ್ಲಿ ನಾನೊಂದು ಮನೆ ಕಟ್ಟಿಸಿರುವೆ. ಅದನ್ನು ನಿಮಗೇ ಬಾಡಿಗೆಗೆ ಕೊಡುವೆ. ನೀವೇ ನನ್ನ ಮೊದಲನೆಯ ಬಾಡಿಗೆದಾರರಾಗಬೇಕು" ಎಂದರು.

ಇವರ ಮಾತುಗಳನ್ನು ಕೇಳಿ ಆಶ್ಚರ್ಯದಿಂದ ಕ್ಷಣಕಾಲ ಶಿಲಾ ಪ್ರತಿಮೆಯಂತಾಗಿದ್ದ ನಾನು ಸ್ವಲ್ಪ ಚೇತರಿಸಿಕೊಂಡು "ಮಿ. ಆನಂದ, ನೀವು ಹೇಳಿದ್ದನ್ನು ಕೇಳಿ ತುಂಬ ಸಂತೋಷವಾಯಿತು. ನಿಮ್ಮ ಇಚ್ಛಾಶಕ್ತಿಯನ್ನೂ ಕರ್ತೃತ್ವವನ್ನೂ ನಾನೂ ಮೆಚ್ಚಬೇಕು. ಆದರೆ ಒಂದು ಸಂಗತಿ. ಹುಟ್ಟಿದ ಊರಿನಲ್ಲೇ ನಾನು ಪರದೇಶಿ. ನಿಜವಾಗಿಯೆಂದರೆ ನಿರಾಶ್ರಿತರು, ನೀವಲ್ಲ ನಾನು" ಎಂದೆ.

—ಸೀತಾರಾವ್ ಶ್ರೀನಿವಾಸ್

ಇಚ್ಛಾಶಕ್ತಿಯೊಂದಿದ್ದರೆ ಅವಿದ್ಯಾವಂತನೂ ಹಳ್ಳಿಗನೂ ಆದ ಒಂಟಿಗಾಲಿನ ಒಂಟಿಗಾಲಿನ ಮನುಷ್ಯನೂ ಸಹ ಈ ದುರ್ಭರ ದಿವಸಗಳಲ್ಲಿ ಬದುಕಬಹುದು ಎಂಬುದಕ್ಕೆ ಈ ಘಟನೆ ಒಂದು ನಿದರ್ಶನ.

ರವಿವಾರ ನಮ್ಮ ಬ್ಯಾಂಕಿಗೆ ರಜೆ ಇರುವ ಪ್ರಯುಕ್ತ ನಾವು ಮಿತ್ರರೆಲ್ಲಾ ಕ್ಷೇತ್ರ ಸೊಗಲದ ದರ್ಶನಕ್ಕೆ ಹೊಂಟೆವು. ಮುರುಗೋಡದಿಂದ ಸೊಗಲದ ಮೇಲೆ ಹಾಯ್ದು ಹೋಗುವ ಬಸ್ಸು ಹಿಡಿದು ಸೊಗಲ ಕ್ರಾಸಿಗೆ ಇಳಿದೆವು. ಬೆಳಗಿನ ಎಂಟು ಗಂಟೆಯ ಸಮಯ. ಸೂರ್ಯನ ಪ್ರಖರತೆ ಹೆಚ್ಚುತ್ತಿತ್ತು. ನಾವು ಇಳಿದ ಸ್ಥಳದಲ್ಲಿ ಸುಮಾರು ಒಂದೆರಡು ಫರ್ಲಾಂಗುಗಳಷ್ಟು ಕಚ್ಚಾ ರಸ್ತೆ ಇರುವಂತೆ ಕಂಡುಬಂದಿತು. ರಸ್ತೆ ಟಾರ ರೋಡ್ ಆಗುತ್ತಿರುವ ಲಕ್ಷಣಗಳು ಅಲ್ಲಿದ್ದವು.

ಒಂದೆರಡು ಟ್ರೇಲರುಗಳು, ಹದಿನೈದು ಇಪ್ಪತ್ತು ಡಾಂಬರ ಡಬ್ಬಿಗಳು ಹಾಗೂ ಒಂದೆಡೆ ನಿದ್ರಿಸುತ್ತಿರುವ ರೋಲರು ಮತ್ತು ಡಾಂಬರು ಕಾಯಿಸುವ ಕುಲುಮೆಯುಳ್ಳ ವಾಹನ. ಕುಲುಮೆಯ ಮೇಲ್ಗಡೆಯ ಡಬ್ಬಿಯಿಂದ ಡಾಂಬರು ಕರಗಿ ಟ್ಯಾಂಕಿನಲ್ಲಿ ಬೀಳುತ್ತಿತ್ತು. ಕೆಳಗಡೆ ಒಲೆ ಉರಿಯುತ್ತಿತ್ತು. ಚೋದ್ಯವೆಂದರೆ ಕಟ್ಟಿಗೆ ಮುಗಿಯುತ್ತಿದ್ದರೂ ಒಬ್ಬನ ಸುಳಿವೂ ಅಲ್ಲಿಲ್ಲ. ಹೀಗೆ ಬಹಳ ಹೊತ್ತು ಬಿಟ್ಟರೆ ಒಲೆ ಆರಿ ಹೋಗಬಹುದೆಂದು ಅನಿಸುತ್ತಿತ್ತು.

ಆಗ ನಮ್ಮ ಹಿಂದೆ ಕಟ್ ಕಟ್ ಎಂಬ ಸಪ್ಪಳ ಕೇಳಿಬಂದಿತು. ಇಂತಹ ಶಾಂತ ವಾತಾವರಣದಲ್ಲಿ ನಮ್ಮನ್ನು ಬಿಟ್ಟರೆ ಸುತ್ತಲೂ ಯಾರೂ ಇಲ್ಲ. ಆದರೂ ಈ ಶಬ್ದ ಎಲ್ಲಿಂದ ಬಂತು ಎಂದು ಹಿಂದೆ ತಿರುಗಿದೆವು.

ಒಬ್ಬ ಮಲಿನ ಧೋತರ ಧರಿಸಿದ ವ್ಯಕ್ತಿ. ಮುಖವೆಲ್ಲ ಸುಕ್ಕುಗಟ್ಟಿತ್ತು. ನೆರತ ಕೂದಲು, ಚಿಂತೆಯಿಂದ ಬಾಡಿದ ಮುಖ. ಅಲ್ಲಲ್ಲಿ ಹರಿದ ಅಂಗಿ ಕೈಯಲ್ಲಿ ದೊಣ್ಣೆಯಂಥ ಕಟ್ಟಿಗೆ ತುಂಡು ಹಿಡಿದು ನಮ್ಮೆಡೆ ತದೇಕವಾಗಿ ನೋಡುತ್ತಿದ್ದ.

ನನ್ನ ದೃಷ್ಟಿ ಆ ವ್ಯಕ್ತಿಯ ಬಲಗಾಲ ಕಡೆ ಹೋಯಿತು. ಅರ್ಧ ಕಾಲು ಮರದಿಂದ ಮಾಡಿದ್ದು ಅದನ್ನು ತೊಡೆಯ ವರೆಗೂ ಬಿಗಿದು ಕಟ್ಟಿಕೊಂಡಿದ್ದ. ಆಧಾರವಾಗಿ ಬಗಲಲ್ಲಿ ಏನೂ ಇದ್ದಿಲ್ಲ. ಆ ವ್ಯಕ್ತಿಯ ಮುಖದ ಮೇಲಿನ ದೈನ್ಯಭಾವ ನಮ್ಮನ್ನು ಕ್ಷಣ ಕಾಲ ವಿಚಲಿತರನ್ನಾಗಿ ಮಾಡಿತು. ನಾವು ಅವನಿಗೆ ಸರಿದು ಸ್ಥಳಮಾಡಿಕೊಟ್ಟೆವು.

ಆತ ನೇರವಾಗಿ ಆ ಉರಿಯುತ್ತಿರುವ ಕುಲುಮೆಯ ಕಡೆ ಧಾವಿಸಿತು. ತನ್ನ ಕೈಯಲ್ಲಿದ್ದ ಕಟ್ಟಿಗೆಯ ತುಂಡನ್ನು ಅದರಲ್ಲಿ ಸೇರಿಸಿ ಒಲೆಯ ಉರಿಯನ್ನು ಸರಿಪಡಿಸಿ ಹಣೆಯ ಮೇಲಿನ ಬೆವರನ್ನು ಒರಸಿಕೊಳ್ಳುತ್ತಾ ಹತ್ತಿರದಲ್ಲಿದ್ದ ಕಲ್ಲಿನ ಮೇಲೆ ಕುಳಿತ.

ಅವನು ಆ ಭಾರವಾದ ಕಟ್ಟಿಗೆಯ ತುಂಡನ್ನು ಅಲ್ಲಿಯೇ ಸ್ವಲ್ಪ ದೂರದಲ್ಲಿದ್ದ ಕಟ್ಟಿಗೆಯ ಸಂಗ್ರಹದಿಂದ ತಂದಂತೆನಿಸಿತು.

ನಮ್ಮ ಪಟ್ಟಣದಲ್ಲಿಯೂ ಸಾಕಷ್ಟು ಜನ ಕುಂಟರಿದ್ದಾರೆ.ಕೇವಲ ಭಿಕ್ಷೆಯನ್ನೇ ಆಧಾರವಾಗಿಟ್ಟುಕೊಂಡು ಹೊಟ್ಟೆ ಹೊರೆಯುವುದನ್ನು ಬಿಟ್ಟು ಏನಾದರೂ ಮಾಡಿ ದುಡಿಯಬೇಕೆಂದು ಏಕೆ ಮನಸ್ಸು ಮಾಡುತ್ತಿಲ್ಲವೋ ತಿಳಿಯದು.

—ವೇಣುಗೋಪಾಲ ಬಿ. ಮಠ

## ಬಿ. ಆರ್. ವಾಡಪ್ಪಿ*

ನಮ್ಮಂಥವ ಈಗಿನ ಜನಗಳಿಗೆ ಹೊಲ, ಮನೆ, ಪೂರ್ವಾರ್ಜಿತ ಆಸ್ತಿಪಾಸ್ತಿಗಳಲ್ಲಿ ಚಿತ್ತ ಆದರವಿಲ್ಲೆಂದು ನಮ್ಮ ಹಿರಿಯರು ಮೇಲಿಂದ ಮೇಲೆ ಬಹಳಷ್ಟೇ ವಟಗುಟ್ಟುತ್ತಿರುತ್ತಾರೆ. ನಾವಾದರೋ ಹಳ್ಳಿಯನ್ನು ಕಾಣದೆ ಎಷ್ಟೋ ವರುಷಗಳಾದವು. ಹಳ್ಳಿಯ ಜೀವನ ನಮಗೆ ಒಗ್ಗಬೇಕಾದರೂ ಹೇಗೆ? ಶಹರದ ಬೆಡಗಿನ ಜೀವನದ ಮುಂದೆ ಹಳ್ಳಿಯ ಸರಳ ಜೀವನ ಸೊಗಸೆನಿಸುವದಾದರೂ ಸಾಧ್ಯವಿದೆಯೆ? ಈ ಸಿನೆಮಾ ಮಂದಿರಗಳು, ವಿವಿಧ ತಿಂಡಿ ತಿನಿಸುಗಳನ್ನು ಒದಗಿಸಿಕೊಡುವ ಹೋಟೆಲುಗಳು ಹೊಸ ಬಗೆಯ ಆಟಪಾಟಗಳು—ನಮಗೆ ಆ ಪಾಳು ಹಳ್ಳಿಗಳಲ್ಲಿ ಸಿಕ್ಕುವುದಾದರೂ ಹೇಗೆ? ಇರಲಿ. ಅಂದು ನಾನು ಹಿರಿಯರ ಹಟದ ಮಾತುಗಳನ್ನಾದರೂ ನಡಸಿ ನಮ್ಮ ಜಮೀನಿನ ಆದಾಯ ಹಣ ತರುವುದಕ್ಕಾಗಿ ನಮ್ಮ ಹಳ್ಳಿಗೆ ಹೊರಡುವುದನ್ನು ನಿಶ್ಚಯಿಸಿದೆ. ಈಗಿನ ಹೊಸ ಕಾಯಿದೆಗಳ ಜ್ಞಾನವಿಲ್ಲದ ಹಿಂದಿನ ಹಿರಿಯರಿಗೆ ಎಷ್ಟೋ ತೊಂದರೆಗಳು ಬಂದು ಮುತ್ತುವುದರಲ್ಲಿ ಸಂದೇಹವಿಲ್ಲ. ಟೆನೆನ್ಸಿ ಕಾಯಿದೆ ಅನ್ವಯದ ಮೇರೆಗೆ ನಮ್ಮ ರೈತ ನಮಗೆ ದುಡ್ಡು ಕೊಡುವುದನ್ನು ಬಿಟ್ಟು ನಿಷ್ಠುರವಾಗಿ ದುಡ್ಡು ಮುಳುಗಿಸುವುದಕ್ಕೆ ಹಟ ತೊಟ್ಟಿದ್ದ. ಇಂಥ ಪ್ರಸಂಗದಲ್ಲಿ ನಾನಾದರೂ ಮಾಡುವುದೇನು? ಏನೋ ಮೋರೆ ಬದಲಾಗಿ ನಾಲ್ಕು ಸವಿಮಾತಿಗಾದರೂ ಅದನು ಮರೆಯಬಹುದೆಂದು ಯೋಚಿಸಿದವನಾಗಿ ಅಂದು ನಮ್ಮೂರ ಮೋಟಾರು ಹತ್ತಿದೆ.

ನಾನು ಹಳ್ಳಿಯನ್ನು ಬಿಟ್ಟು ಹತ್ತು ವರುಷಗಳಾಗಿ ಹೋಗಿದ್ದವು! ಮಹಾತ್ಮಾ ಗಾಂಧೀಯವರು ಹಳ್ಳಿಗಳ ಉದ್ಧಾರದ ಬಗ್ಗೆ ಬರೆದ ಅನೇಕ ಲೇಖನಗಳನ್ನು 'ಹರಿಜನ'ದಲ್ಲಿ ಓದಿ, ಪಟ್ಟಣದಲ್ಲಿಯೇ ಕುಳಿತು ಹರಟೆ ಹೊಡೆಯುವವರಲ್ಲಿ ನಾನೊಬ್ಬ. ಈ ಹತ್ತು ವರ್ಷಗಳ ಅವಧಿಯಲ್ಲಿ ಒಂದಾದರೂ ಹಳ್ಳಿಗೆ ಹೋಗಲು ಯಾವ ಸಂಬಂಧವಿಲ್ಲದೆ ನಮ್ಮ ನಮ್ಮ ಮನೆಯಲ್ಲಿಯೇ ಇದ್ದು ತಿರುಗಿ ಬಂದುಬಿಡುತ್ತಿದ್ದೆ. ಈಗಂತೂ ನಮ್ಮ ಮನೆಯವರೆಲ್ಲ ಪಟ್ಟಣಕ್ಕೆ ಬಂದಿದ್ದಾರೆ. ಕಾಲದಲ್ಲಿ ಬದಲಾವಣೆಯಾದಂತೆ ಹಳ್ಳಿಯಲ್ಲಿಯೂ ಒಂದು ಬಗೆಯ ಬದಲಾವಣೆಯು ಆಗಿಯೇ ಆಗಿರುತ್ತದೆ. ಆದರೆ ನಮಗೂ ಹಳ್ಳಿಗೂ ಸಂಬಂಧವಿಲ್ಲದಿರುವದರಿಂದ ನಾವು ಯೋಚನೆ ಮಾಡದೆ ನಮ್ಮ ಸುತ್ತಮುತ್ತ ಮಾತ್ರ ನೋಡುವ ಅಭ್ಯಾಸವಿಟ್ಟುಕೊಂಡಿರುತ್ತೇವೆ. ಅಂದು ಮೋಟರು ತುಸು ಹೊತ್ತಾಗಿಯೇ ಹಳ್ಳಿಯನ್ನು ತಲುಪಿತು. ಅದು ಮುಚ್ಚಂಜೆಯ ಸಮಯ. ದನಕರುಗಳ ಕಾಲಿನ ಧೂಳಿ ಮುಗಿಲು ಮುಟ್ಟಿತ್ತು. ದನಗಳ ಕೊರಳೊಳಗಿನ ಗಂಟೆಗಳ ನಾದ ವಾತಾವರಣದಲ್ಲಿ ಬೆರೆತು ಒಂದು ಬಗೆಯ ಆನಂದವನ್ನುಂಟು ಮಾಡುತ್ತಿತ್ತು. 'ಬಾರೋ ಬಸವಣ್ಣ ಬಾ' ಎಂಬ ದನಗಾಯಿಗಳ ಜಾನಪದ ಸಂಗೀತ

---

* ಶ್ರೀ ವಾಡಪ್ಪಿಯವರು ಧಾರವಾಡದ ಖ್ಯಾತ ಕನ್ನಡ ಶಿಕ್ಷಕರು, ಲಲಿತ ಪ್ರಬಂಧಕಾರರೆಂದು ಹೆಸರುವೆತ್ತವರು. ೧೯೪೯ ರಲ್ಲಿ ಮೊದಲ ಬಾರಿ ಪ್ರಕಟವಾದ ಅವರ 'ಯಾರು ಹೊಣೆ? ' ಎಂಬ ಕಥಾಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಆ ಕಾಲದ ಕಥಾತಂತ್ರದ ಹಾಗು ಅಂದಿನ ಪ್ರಚಲಿತ ಗದ್ಯ ಶೈಲಿಯ ಪರಿಚಯ ನಿಮಗಾಗುವುದು.

ಅಲ್ಲಿ ಇಲ್ಲಿ ಕೇಳಿ ಬರುತ್ತಿತ್ತು. ಸಹಜ ಸೌಂದರ್ಯವು ಹಳ್ಳಿಯನ್ನು ಸುತ್ತಿಕೊಂಡಿತ್ತು. ನನಗೂ ಒಂದು ಬಗೆಯ ಆನಂದವಾಯಿತು.

ನಾನು ಸಣ್ಣವನಿರುವಾಗ ಈಗ ಮೋಟರು ನಿಂತುಕೊಳ್ಳುವ ಸ್ಥಳದಲ್ಲಿ ಏನೂ ಇರಲಿಲ್ಲ! ಈಗ ಮಾತ್ರ ಒಂದು ಚಹದ ಅಂಗಡಿ, ನಾಲ್ಕಾರು ಬೀಡಿ ಅಂಗಡಿಗಳು ಶೋಭಿಸುತ್ತವೆ. ಅಲ್ಲಿಯೇ ಜನರು ಕಿಕ್ಕಿರಿದು ತುಂಬಿರುತ್ತಾರೆ. ನಾನು ಮೋಟರಿನಿಂದ ಕೆಳಗಿಳಿದು ಕತ್ತಲಲ್ಲಿ ಹೇಗೆ ಊರಲ್ಲಿ ಹೋಗುವುದೆಂದು ಯೋಚಿಸತೊಡಗಿದೆ. ಹತ್ತಿರವೇ ಇರುವ ಗುಡಿಸಲೊಂದರಲ್ಲಿ ಪೆಟ್ರೋಮ್ಯಾಕ್ಸ್ ಬೆಳಕು ಹೊರಸೂಸಿ ಬರುತ್ತಿತ್ತು. ತುಸು ಮುಂದಕ್ಕೆ ಬಂದು ನೋಡಿದೆ. 'ಚಾ ಕಾಫಿ ಫರಾಳದ ಅಂಗ್ಡಿ' ಎಂಬ ಶುದ್ಧ ಕನ್ನಡ ಅಸ್ತವ್ಯಸ್ತ ಅಕ್ಷರಗಳ ಬೋರ್ಡು! ಸಂತೋಷ ಎಂದುಕೊಂಡು ಒಳಹೊಕ್ಕೆ. ಎದುರಿಗೆ ಒಂದು ಸದ್ದಾಮುದ್ದಾ ಕಪಾಟು ಇಟ್ಟಿದೆ. ಅದರ ಮೇಲೆ ಲಕ್ಷ್ಮೀ ಸರಸ್ವತಿಯರ ಚಿತ್ರಗಳು ಕಂಗೊಳಿಸುತ್ತಿವೆ! ರೂಢಿಯಲ್ಲಿ ಫರಾಳವೆಂದು ಹೇಳಿಕೊಳ್ಳುವ ವಸ್ತುಗಳೇನು ಕಾಣದಿದ್ದರೂ ಕಪಾಟಿನಲ್ಲಿ ತಿನ್ನುವ ಪದಾರ್ಥಗಳು ಕಣ್ಣಿಗೆ ಕಾಣಿಸುತ್ತಿದ್ದವು. ನಾಲ್ಕಾರು ಉದ್ದನ್ನ ಕಟ್ಟಿಗೆಯ ಫಳಿಗಳನ್ನು ಅಂತರ ಹಾಗಿಟ್ಟು ಜನರಿಗೆ ಕೂಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಅವುಗಳನ್ನು ಬೇಕಾದರೆ ನಾವು 'ಬೆಂಚು' ಎಂದೆನ್ನಬಹುದು. ನಾನು ಒಳಹೊಕ್ಕು ಸುತ್ತಮುತ್ತ ನೋಡಿ ಹಾಗೆಯೇ ನಿಂತುಕೊಂಡೆ. ನನಗೆ ಮಾತ್ರ ಅಲ್ಲಿ ಯಾರ ಗುರುತೂ ಸಿಕ್ಕಲಿಲ್ಲ. ಆದರೆ ಅಲ್ಲಿಯೇ ಬೆಂಚಿನ ಮೇಲೆ ಕುಳಿತಿರುವ ಒಬ್ಬ ವ್ಯಕ್ತಿ, "ಯಾಕರೀ...ರಾಯರ ಯಾವಾಗ ಬಂದ್ರಿ?" ಎಂದ. ನಾನು, "ಈಗ ಮೋಟರಿಗೆ ಬಂದೆ." ಎಂದು ನುಡಿದು ಅಲ್ಲಿಯೇ ಕುಳಿತುಕೊಂಡೆ. ನನ್ನನ್ನು ಮಾತನಾಡಿಸಿದ ವ್ಯಕ್ತಿಯ ಕಡೆಗೆ ದೃಷ್ಟಿ ತಿರುವಿದೆ. ಆದರೂ ಗುರುತು ಸಿಕ್ಕಲಿಲ್ಲ. ವ್ಯಕ್ತಿಯಾದರೋ ಮಹಮ್ಮದೀಯ ಕ್ಯಾಪು, ಮೈಯಲ್ಲಿ ಖಾಕಿ ಕೋಟು ಕಾಲಲ್ಲಿ ಮಿರಿ ಮಿರಿ ಮಿಂಚುವ ಸ್ಲಿಪರ್ಸ್ ಆ ವ್ಯಕ್ತಿಗೆ ಒಂದು ಅಪೂರ್ವ ಕಳೆ ತಂದುಕೊಟ್ಟಿವೆ. ನಿರಾಯಾಸವಾಗಿ ಸಿಗರೇಟು ಹೊಗೆ ಬಿಡುವ ಆ ವ್ಯಕ್ತಿ ಯಾರಿರಬಹುದು? ತುಸು ತಲೆ ತುರಿಸಿಕೊಂಡು "ನೀವು... ನಮ್ಮ..." ಎಂದು ಪ್ರಾರಂಭಿಸಿದೆ. ಅದಕ್ಕೆ ಅವನು "ನಾನು ಮೋಟರ ಮಹಮ್ಮದ ಸಾಬರಿ...ನಾವೂ ನೀವೂ ಕೂಡೇ ಸಾಲಿ ಕಲತೇವಿ,ಗುರತ ಸಿಗವಲ್ತ್ರ?" ಎಂದ. "ಓಹೋ...ನೀನು...ಮಹಮ್ಮದಸಾಬ ಈಗ ಏನ ಮಾಡತೀಪಾ?" ಎಂದು ಕೇಳಿದೆ.

"ರಾಮಣ್ಣಾರ ನಮ್ಮ ಧಂದೇವು ಏನ್ರೀ... ಹೀಗ..." ಎಂದ. ನಾನು ಮಾತನಾಡದೆ ಅವನನ್ನು ಹುಳುಹುಳು ನೋಡಿದೆ. ಸುತ್ತಮುತ್ತಲಿನ ಒಕ್ಕಲಿಗರೂ ನನ್ನ ಕಡೆಗೆ ನೋಡಿದರು. ಮತ್ತೆ ಮಹಮ್ಮದ ಸಾಬನೇ ನುಡಿದ, "ಮೋಟರ ಧಂದೇವ್ರಿ ನಮ್ಮದು. ಏನು ನಿಮ್ಮಾಂಗ ಕಲ್ತೇವ್ರೆ ನಾವು?"

"ನೀ ಈಗ ಡ್ರಾಯಿವ್ಹರ್ ಆಗಿ ಏನು?"

"ಡ್ರಾಯಿವ್ಹರನೂ ಆಗಿದ್ದೆ. ಈಗ ಮಾಲಕನೂ ಆಗೇನಿ" ಎಂದು ಒಮ್ಮೆ ನಕ್ಕು ಮತ್ತೆ ಸಿಗರೇಟು ಜಗ್ಗಿದ!

"ಅಲ್ಲಪ್ಪಾ ಮಹಮ್ಮದಸಾಬಾ, ಎಷ್ಟ ಮೋಟರ ಆದಾವು ನಿನ್ನವು?" ಎಂದು ಮತ್ತೆ ಮಾತಿಗೆ ಮೊದಲು ಮಾಡಿದೆ.

"ನನ್ನವು ಈಗ ನಾಲ್ಕು ಮೋಟರ ಆದಾವ್ರಿ ಇದ ವರ್ಷ ಒಂದು ಹಿಟ್ಟಿನ ಗಿರಣೀನೂ ಚಾಲೂ ಮಾಡೇನಿ" ಎಂದ.

ಇಷ್ಟರಲ್ಲಿಯೇ ಹೊರಗೆ ಮತ್ತೆ ಮೋಟರ ಪೊಂ ಪೊಂ ಸಪ್ಪಳ. ಮಹಮ್ಮದನು ಎದ್ದು, "ಕೂಂತ ಗೋರಿ ರಾಮಣ್ಣಾರ. ರಾಮನಗರದ ಮೋಟರ ಬಂತು. ನಾ ಈಗ ಬರತೇನಿ. ಅಂದು ಹೊರಗೆ ಹೋದ. ನನಗೆ ಮಹಮ್ಮದ ಸಾಬನ ಮಾತು ಕೇಳಿ ಬಹಳ ಆಶ್ಚರ್ಯವೆನಿಸಿತು. ನಾನು ಮುಂದಿನ ವಿದ್ಯಾಭ್ಯಾಸದ ನಿಮಿತ್ತವಾಗಿ

ಸ್ವಾತಂತ್ರ್ಯವಂತೂ ನನಗಿಲ್ಲ. ಆದರೆ ಮಹಮ್ಮದ ಸಾಬ ಈಗ ನಾಲ್ಕು ಮೋಟರಿನ ಮಾಲಿಕ. ಸ್ವತಂತ್ರಜೀವಿ. ಎಂಥ ಬದಲಾವಣೆ! ಹೀಗೆ ಏನನ್ನೋ ಯೋಚಿಸುತ್ತ ಎದುರಿನಲ್ಲಿ ನೋಡಿದೆ. ಚಹದ ಅಂಗಡಿಯ ಗೋಡೆಗೆ ಕೈಲಾಸನಾಥನ ಚಿತ್ರವು ತೂಗು ಬಿದ್ದಿದೆ! ಕೈಲಾಸ ಪರ್ವತದಲ್ಲಿ ಪಾರ್ವತಿಯನ್ನು ವಾಮಾಂಕದೊಳಿರಿಸಿ, ಯಾವ ತೊಂದರೆ ಇಲ್ಲದೆ ನಿರಾಯಾಸವಾಗಿ ತನ್ನ ಎಲ್ಲ ಆಯುಧಗಳನ್ನು ಯಾವಾಗಲೂ ಹಿಡಿದುಕೊಂಡು ಕುಳಿತ ಶ್ರೀ ಶಂಕರನು ಇಲ್ಲಿ ಈ ಚಹದ ಅಂಗಡಿಯಲ್ಲಿ ಹೊಗೆ ಕುಡಿದು ಬೇಸತ್ತಿರಬಹುದೇ? ಎಂದು ಏನೋ ವಿಚಾರಿಸುತ್ತಿರುವಾಗಲೇ "ರಾಯರ ಚಾ ಕಾಸೇನಿ. ಸಿಂಗಲ್ಲ ಕೊಡಲೋ ಡಬ್ಬಲ್ ಬೇಕೋ" ಎಂಬ ಧ್ವನಿ! ಅಂಗಡಿಯ ಮಾಲಿಕ ನನ್ನೆದುರು ನಿಂತಿದ್ದ. ತನ್ನ ಕರವಸೂಲಿ ಬಿಟ್ಟಾನೆ "ಸಿಂಗಲ್ ಸಾಕು. ಸ್ವಚ್ಛ ಕಪ್ಪು ಬಸಿ ತೊಳೆದು ಕೊಡು" ಎಂದೆ. ಅದಕ್ಕೆ ಆತ "ನಮ್ಮೂರ ಚಾನರS ಕುಡದು ನೋಡ್ರಿ ಮುಂಬಯಿದಾಗೂ ಸಿಗಾಕಿಲ್ಲ ಇಂಥಾದು" ಎಂದ. ನಾನು ಮನದಲ್ಲಿಯೇ ಮುಂಬಯಿಯಾಗ ಇಂಥಾ ಚಹಾ ಸಿಕ್ಕೀತಾದರೂ ಹೇಗೆ ಎಂದು ಯೋಚಿಸಿದೆ. ಅವನು ಕೊಟ್ಟ ಚಹಾ ಹಾಗೂ ಹೀಗೂ ಮಾಡಿ ಕುಡಿದೆ. ನನ್ನ ಪಾರ್ಟಿ ಮುಗಿಯುವುದರಲ್ಲಿಯೇ ಮಹಮ್ಮದ ಸಾಬ ಬಂದು "ಊರಾಗ ಹೋಗೋಣ ಬರ್ರಿ ರಾಮಣ್ಣ..." ಅಂದ.

ಪೆಟ್ರೋಮ್ಯಾಕ್ಸ್ ಹೊತ್ತುಕೊಂಡು ಒಂದು ಹುಡುಗ ಮುಂದೆ ಮುಂದೆ ನಡೆದ. ನಾನು ಮಹಮ್ಮದಸಾಬನ ವೈಭವಕ್ಕೆ ಬೆರಗಾದೆ! ನಾನು ಹಾಗೂ ಮಹಮ್ಮದಸಾಬ ಇನ್ನೂ ಕೆಲವರು ಊರಲ್ಲಿ ಹೊರಟೆವು. ನಾನು ಹೋಗ ಬೇಕಾದ ಮನೆ ಸಮೀಪಿಸಲು ಮಹಮ್ಮದ, "ನಾಳೆ ಘಟ್ಟಿ ಆಗ್ತೇನಿ ರಾಯರ. ಈ ಊರಾಗ ನಾಕ ದಿವಸ ಇದ್ದ ಹೋಗ್ರಿ. ನಮಸ್ಕಾರ" ಎಂದ.

"ನನ್ನ ಹೊಲದ ಲಾವಣಿ ಕೆಲಸ ಮುಗೀತಂದ್ರ ಹೋಗತೇನಿ" ಎಂದು ನಾನು ಮರು ನುಡಿದೆ.

"ಯಾರ ಮಾಡ್ತ್ಯಾರ್ರಿ ನಿಮ್ಮ ಹೊಲಾ?"

"ಚಿತ್ತಲಮನಿ ತಿಪ್ಪ ಮಾಡ್ತ್ಯಾನ" ಎಂದು ನುಡಿದು ಮನೆಯ ಕಡೆಗೆ ಹೊರಟೆ. "ನಾಳೆ ಎಲ್ಲಾ ವಿಚಾರ ಮಾಡೋಣ್ರಿ" ಎಂದು ಮಹಮ್ಮದ ಮುಂದೆ ಸಾಗಿದ.

ನಾನು ಮನೆ ಸೇರಿದಾಗ ಸಾಕಷ್ಟು ರಾತ್ರಿಯಾಗಿತ್ತು. ಮನೆಯವರೆಲ್ಲ ನನ್ನನ್ನು ಬರಮಾಡಿಕೊಂಡರು. ಊಟವು ಮುಗಿಯಿತು. ಅಂದಿನ ರಾತ್ರಿ ಊಟ ಮುಗಿದ ಮೇಲೆ ಮಾತಿಗೆ ಮಾತು ಹೊರಟು ಅದು ಮಹಮ್ಮದಸಾಬನ ಉದ್ಯೋಗದ ಕಡೆಗೆ ಹೊರಳಿತು. ನಾನು ಅತಿಥಿಯಾದ ಮನೆಯ ಯಜಮಾನರನ್ನು ಕುತೂಹಲದಿಂದ ಕೇಳಿದೆ: "ಮಹಮ್ಮದ ಸಾಬನ ತಾಯಿ ಇನ್ನೂ ಇದ್ದಾಳೇನು?"

---



"...ಇದರ ಮೊದಲ ಹಂತವಾಗಿ, ನಾನು ಬ್ರಾಂದಿ, ವಿಸ್ಕಿಗಳೇ ಮೊದಲಾದವುಗಳ ಬದಲಾಗಿ, ಕೇವಲ 'ಕಂಟ್ರಿ'ನ ತೊಗೊಳ್ಳೊಕೆ ಶುರು ಮಾಡಿದೀನಿ...!"

ವುದಕ್ಕೆ ನಮ್ಮ ಮನೆಯವರು ಅವಕಾಶ ಕೊಡಲಿಲ್ಲ. ಏಕೆಂದರೆ ಶಾಲೆ ತಪ್ಪಿಸಿ ಅಡ್ಡಾಡಿ ಹಿಡಿಯಬಾರದೆಂಬ ಇಚ್ಛೆಯಿಂದ ಕಟು ಕಠೋರವಾದ ಕಾನೂನು ಮಾಡಿ ನನ್ನನ್ನು ಅಂದು ಶಾಲೆಗೆ ಅಟ್ಟಿಯೇ ಬಿಟ್ಟರು. ಅಂದು ಮಹಮ್ಮದ ರುಕ್ಮಿಣಿಯ ರೂಪದಲ್ಲಿ ಕಂಡುಕೊಳ್ಳುವವ. ಹೇಗೆ ನಾಟಕವಾಗುತ್ತದೋ? ನೋಡಬೇಕೆಂದು ನಾವೆಲ್ಲರೂ ಕುತೂಹಲಿಗಳಾಗಿದ್ದೆವು. ರಾತ್ರಿಯಿತು! ನಾಟಕವೂ ಪ್ರಾರಂಭವಾಯಿತು. ರುಕ್ಮಿಣಿಯು ಪ್ರವೇಶವಾದೊಡನೆ ಎಲ್ಲರೂ ಚಪ್ಪಾಳೆ ಬಾರಿಸಿದರು. ಅಂದಿನ ನಾಟಕದಲ್ಲಿ ರುಕ್ಮಿಣಿಯ ಪಾತ್ರವಹಿಸಿದ ಮಹಮ್ಮದ ಉತ್ತಮವಾಗಿ ಅಭಿನಯಿಸಿ ಊರ ಜನರಿಂದ ವಾಹವ್ವಾ ಅನಿಸಿಕೊಂಡ! ನಮ್ಮ ಶಿಕ್ಷಕರೆಲ್ಲರೂ ನಾಟಕಕ್ಕೆ ಬಂದಿದ್ದರು. ಮುಖ್ಯಾಧ್ಯಾಪಕರು ಮಹಮ್ಮದ ಬಹಳ ಜಾಣಹುಡುಗ, ಅವನಿ ಉಡಾಳ ಎಂದು ಶರಾ ಹಾಕಿದರು. ಮತ್ತೊಬ್ಬರು "ಹೌದು ಹೌದು" ಎಂದರು. ಊರ ಹೆಂಗಳೆಯರೆಲ್ಲ ಮಹಮ್ಮದನನ್ನು ನೋಡಿ ಹೊಗಳುವವರೇ. ಚಾಂದಬಿ ರುಕ್ಮಿಣಿಯ ಪಾತ್ರದಲ್ಲಿ ತನ್ನ ಮಗನನ್ನು ಕಂಡು ಸಂತೋಷ ಪಟ್ಟಳು. ತನಗೆ ಹೆಣ್ಣುಮಗು ಇಲ್ಲ ಎಂಬ ಭಾವ ಮೂಡಿರಬೇಕು ಪಾಪ ಅವಳಿಗೆ. ಮಹಮ್ಮದ ಊರ ಜನರ ಮನಸ್ಸನೆಲ್ಲ ಸೂರೆಗೊಂಡ.

*

ನಾನು ಹಿಂದಿನ ದಿನಗಳ ರಸನಿಮಿಷಗಳನ್ನು ನೆನೆಸಿಕೊಳ್ಳುತ್ತ ಕುಳಿತಾಗ ರಾಮರಾಯರು ತಮ್ಮ ಎಲೆ ಅಡಿಕೆಯ ಸಾಮಗ್ರಿ ತೆಗೆದುಕೊಂಡು ಬಂದು. "ಮತ್ತೇನು? ಎಲ್ಲಾ ಆರಾಮ ಧಾರವಾಡದಾಗ?" ಎಂದು ನನ್ನ ವಿಚಾರದೆಳೆಯನ್ನು ಹರಿದರು.

"ಹೂಂ. ನೆಟ್ಟಗ ನಡದದ. ಹಳ್ಳೀನ ನೆಟ್ಟಗ

ಆಂತಾರ ಓರೇರು" ಎಂದು ಆಕಳಿಸಿದೆ.

"ಹೌದರಿ...ಹಳ್ಳಿ ನೆಟ್ಟಗ ಐರೆ. ಆದರ ಈಗ ರೈತರು ಮೊದಲಿನ್ಹಾಂಗ ದುಡಿಯೂದಿಲ್ಲಾ" ಎಂದು ಹೇಳಿದರು.

ನಮ್ಮ ರೈತ ಲಾವಣೀ ದುಡ್ನ ಕೊಟ್ಟಿಲ್ಲ ಎಂದು ನಾನು ಹೇಳಿದೆ. ಅದಕ್ಕೆ ರಾಯರು "ನಿಮ್ಮ ರೈತ ಯಾರು? ಹ್ಹ...ಹ್ಹ...ಅವನ ಓತ್ಲಮನಿ ತಿಪ್ಪ!" ಎಂದು ನಕ್ಕರು. ಅವರ ನಗುವಿನಲ್ಲಿಯೂ ಒಂದು ಅರ್ಥವಿತ್ತು.

ನಾನು ಆ ಮಾತು ಅಲ್ಲಿಯೇ ಮುಗಿಸಿ ಮತ್ತೆ ಮುಹಮ್ಮದಸಾಬನ ಮಾತು ಎತ್ತಿದೆ. "ಮುಹಮ್ಮದಸಾಬಾ ನಾಲ್ಕು ಮೋಟರ ಇಟ್ಟಾನಂತಲ್ಲಾ..." ಅದಕ್ಕೆ ರಾಯರು ಸುಮ್ಮ ಎದ್ದು ತಂಬಾಕು ಉಗುಳಿ "ಎಲ್ಲಾ ಹೇಳತೇನಿ ಕೇಳ್ರಿ." ಎಂದರು. ನನಗೂ ಬಹಳ ಹರ್ಷವಾಯಿತು. ರಾಯರು ಸುರವು ಮಾಡಿದರು. "ಈ ಮುಹಮ್ಮದ ಬಹಳ ಉಡಾಳ ಹುಡುಗ. ಇವನವ್ವ ಚಾಂದಬಿ ಇವನ ಕಾಲಾಗ ಗೋಳಾಡಿ ಗೋಳಾಡಿ ಸತ್ತು ಹೋದಳು. ಆಮೇಲೆ ಇದ್ದ ಒಂದು ಮನಿ ಮಾರಿ ಮೋಟರ್ ಕೊಂಡುತಂದ. ಮೋಟರ ಧಂದೆ ಕೇಳಬೇಕ? ದಿನ ಬೆಳಗಾದ್ರ ರೊಕ್ಕ ಬರಲಿಕ್ಕೆ ಹತ್ತಿತು. ನಾಲ್ಕು ವರ್ಷ ಅನ್ನೊದರಾಗ ಮುಹಮ್ಮದ ನಾಲ್ಕು ಮೋಟರೇ ಖರೀದಿಮಾಡಿದ! ಈ ವರ್ಷ ಒಂದು ಗಿರಣೀನೂ ಹಾಕ್ಯಾನ ಎಂದು ಮತ್ತೆ ತಂಬಾಕು ಹಾಕಿಕೊಂಡರು.

"ಈಗ ಯಾರ ಮನ್ಯಾಗ ಇರತಾನ? ಎಂದೆ."

"ಅದನ್ನೂ ಹೇಳತೇನಿ ಕೇಳ್ರಿ. ಹೋದ ವರ್ಷ ಒಂದು ದೊಡ್ಡ ಮನೀನ ಖರೀದಿ ಹಿಡದಾನ ನಮ್ಮ ಗೌಡರ ಮನಿ ಬಲಗಡೆ ಮನೀನs!"

"ಅಂ! ಆ ಮನಿ ಮುಹಮ್ಮದ್ ಖರೀದಿ ಹಿಡದಾನ?" ಎಂದು ನಾನು ಬೆರಗಾಗಿ ಆಳಿದೆ. ಮತ್ತೆ ರಾಯರು "ಲಕ್ಷ್ಮೀ ಬರೋ ಕಾಲಾ. ಇರಲಿ–ಈಗ ನಮ್ಮ ಮನ್ಯಾಗ ಚಿಮಣೀಯಣ್ಣಿ ಇಲ್ಲ. ಆದರ ಮುಹಮ್ಮದನ ಮನ್ಯಾಗ ದಿನಾ ಪೆಟ್ರೋಮ್ಯಾಕ್ಸ್ ಉರಿಸ್ತಾನ ತಿಳೀತ?" ಎಂದರು.

"ಹಂಗಾರ ಮುಹಮ್ಮದ ಈಗ ಸಾವುಕಾರ ಅನ್ರಿ."

"ಸಾವುಕಾರನೂ ಆಗ್ಯಾನ ಊರಾಗ ದೊಡ್ಡ ಮನಸ್ಯಾನೂ ಆಗ್ಯಾನ. ಹುಡುಗ ಒಳ್ಳೇವ. ನಮ್ಮ ಮಾತಂತೂ ಎಂದೂ ಮೀರೂದುಲ್ಲ" ಎಂದು ಅಭಿಪ್ರಾಯಪಟ್ಟರು.

ನಾನು ಮತ್ತೆ "ಲಗ್ನಾ ಮಾಡಿಕೊಂಡಾನೇನು ಸಾಬಾ" ಎಂದೆ.

"ಓಹೋ ತಿರುಗಿ ನಾಲ್ಕು ಮಕ್ಕಳಾಗ್ಯಾವ. ಎಲ್ಲಾ ಛೊಲೋ ನಡದದ. ಈ ಹುಡುಗಾ ಇಷ್ಟು ಮುಂದ ಬಂದಾನು ಅಂತ ಯಾರಿಗೆ ತಿಳಿದಿತ್ತು?" ಎಂದು ನುಡಿದು ಎದ್ದರು. ಈಗಾಗಲೇ ರಾತ್ರಿ ಬಹಳವಾಗಿತ್ತು. ನಾನೂ ದಣಿದಿದ್ದೆ ಮಲಗಿಕೊಂಡೆ. ರಾತ್ರಿಯೆಲ್ಲ ಸುಖವಾಗಿ ನಿದ್ದೆಗೈದೆ!

ಮರುದಿನ ನಸುಕಿನಲ್ಲಿಯೇ ಎದ್ದು ಮೋರೆ ತೊಳೆದುಕೊಂಡು ನಮ್ಮ ರೈತನ ಮನೆಗೆ ಹೋದೆ. ತಿಪ್ಪಣ್ಣ ತನ್ನ ಎತ್ತಿನ ಮೈ ತಿಕ್ಕುತ್ತ ನಿಂತಿದ್ದ. ನನ್ನನ್ನು ಕಂಡು ಏನರೀ ರಾಯರ ಕುಂದರ್ರಿ ಎಂದು ಕಂಬಳಿ ಹಾಸಿದ ತಿಪ್ಪಣ್ಣ ನನ್ನ ಮೋರೆ ನೋಡಿ. ನೀವು ನಮ್ಮ ರಂಗಾಚಾರ ಮಕ್ಕಳಲ್ಲ?" ಎಂದು ಪ್ರಶ್ನಿಸಿದ.

ನಾನು "ಹೌದು ತಿಪ್ಪಣ್ಣ" ನಮ್ಮ ಲಾವಣೀ ಹಣ ಇಷ್ಟು ಕೊಟ್ಟುಬಿಡಪಾ", ಎಂದೆ. ತಿಪ್ಪಣ್ಣ ತುಸು ಮೋರೆ ಗಂಟಿಕ್ಕಿ, "ಈ ವರಸಾ ಕರಿಗಾಲಾ. ನನ್ನ ಕಡಿಂದ ಏನೂ ಕೊಡಾಕ ಆಗೂದಿಲ್ಲರಿ..." ಎಂದು ಕಣ್ಣು ಕೆಂಪಗೆ ಮಾಡಿದ! ನನಗೂ ಸಿಟ್ಟು ಬಂತು. "ನಾನು ಏನಾದ್ರೂ ಬಿಡೂದುಲ್ಲಾ" ಎಂದು ಗಟ್ಟಿಯಾಗಿಯೇ ಹೇಳಿದೆ. ತಿಪ್ಪಣ್ಣ ಏನು ತಿಳಿದುಕೊಂಡನೋ ಒಮ್ಮಿಂದೊಮ್ಮೆಲೇ "ರಾಯರ, ಈ ಜಗದಾಟಾ ಬ್ಯಾಡಾ. ನಮ್ಮ ಮುಹಮ್ಮದಸಾಬರ ಕಡೇ ನಡೀರಿ. ಅವರು ಹೇಳಿದ್ಹಾಂಗ ಮಾಡೋಣ" ಎಂದು ಅತ್ತಕಡೆ ಹೊರಟೇಬಿಟ್ಟ. ಮುಹಮ್ಮದ ಸಾಬ ಇಷ್ಟು ಪ್ರತಿಷ್ಠಿತ ಮನುಷ್ಯನಾದನ್ನು ಕೇಳಿ ನನಗೆ ಅವನ

ಮಹಮ್ಮದಸಾಬನ ಮನೆಗೆ ಹೋರಟೆ. ನಾನೂ ಬಾಗಿಲಿಗೆ ಬರುತ್ತಲೇ ಮಹಮ್ಮದಸಾಬ ಬಹಳ ಆದರದಿಂದ ನನ್ನನ್ನು ಬರಮಾಡಿಕೊಂಡ. ಎಲ್ಲರೂ ಕುಳಿತುಕೊಂಡೆವು. ನಮ್ಮ ರೈತ ತನ್ನ ದುಃಖವನ್ನೆಲ್ಲ ತೋಡಿಕೊಂಡ. ನಾನೂ ಎಲ್ಲವನ್ನೂ ಹೇಳಿದೆ. ಮಹಮ್ಮದಸಾಬ ಏನೋ ಯೋಚನೆ ಮಾಡಿ ತಿಪ್ಪಣ್ಣನಿಗೆ "ಎಷ್ಟು ಲಾವಣಿ ಹಣ?" ಎಂದ.

"ನಾಕನೂರು ರೂಪಾಯಿ ಹ್ಯಾಂಗ ಕೊಡೋದು ನೀವs ಹೇಳ್ರಿ" ಎಂದ.

"ತಿಪ್ಪಣ್ಣಾ ನಾ ಖರೆ ಮಾತ ಹೇಳತೇನಿ. ರಾಯರು ಒಳ್ಳೆ ಮನುಷ್ಯರು. ನೀ ಅವರಿಗೆ ಇಲ್ಲದ್ದs ಹೇಳಬ್ಯಾಡ" ಎಂದು ಮಹಮ್ಮದ ತಿಳಿಹೇಳಿದ.

ತಿಪ್ಪಣ್ಣ ಮತ್ತೆ "ಸಾಬರ ನೀವು ಹ್ಯಾಂಗ ಹೇಳತೀರಿ ಹಾಂಗ ಮಾಡತೇನ್ರಿ" ಎಂದು ಒಪ್ಪಿಕೊಂಡ.

ಮಹಮ್ಮದಸಾಬ ನನ್ನ ಕಡೆಗೆ ತಿರುಗಿ "ರಾಯರ ಈ ವರ್ಷ ಬಹಳ ಕೇಡು ಮುನ್ನೂರು ರೂಪಾಯಿ ತಗೊಂಡು ಮುಗಿಸಿಕೊಳ್ರಿ" ಎಂದು ಹೇಳಿಬಿಟ್ಟ. ನಾನೂ ಒಪ್ಪಿಕೊಂಡೆ. ಮಹಮ್ಮದ ಸಾಬನ ಈ ತೀರ್ಪು ಬಹಳ ಜಾಣತನದ್ದು. ತಂಟೆಯ ಮೂಲವನ್ನೇ ಮುರಿದು ಮತ್ತೆ ನಮ್ಮ ರೈತನಿಗೂ ನಮಗೂ ಮೊದಲಿನಂತೆ ನಡೆದು ಕೊಳ್ಳುವುದಕ್ಕೆ ಹೇಳಿದ. ತಿಪ್ಪಣ್ಣ ಆಗಲೇ ರೂಪಾಯಿ ತಂದು ಒಪ್ಪಿಸಿದ! ನಮ್ಮ ಹಿರಿಯರು ನಾಲ್ಕು ಸಲ ಅಡ್ಡಾಡಿ ಹೋಗಿದ್ದರೂ ತಿಪ್ಪಣ್ಣ ಮಣಿದಿರಲಿಲ್ಲ. ಮಹಮ್ಮದಸಾಬನ ಮಾತಿಗೆ ಇಷ್ಟೊಂದು ಬೆಲೆ ಇರಬೇಕಾದರೆ ಅವನಲ್ಲಿ ಹಳ್ಳಿಗರ ಜೀವನದಲ್ಲಿ ಬೆರೆತು ಬಾಳುವ ಹದ ಇರಲೇ ಬೇಕು.

ಮಹಮ್ಮದಸಾಬ ನನಗೆ ನಾಲ್ಕಾರು ದಿವಸ ಹಳ್ಳಿಯಲ್ಲಿದ್ದು ಹೋಗಬೇಕೆಂದು ಬಹಳ ಆದರ ಪೂರ್ವಕವಾಗಿ ಹೇಳಿದ. ಆದರೆ ನಾನು ಮಾತ್ರ ಅನೇಕ ಕೆಲಸಗಳ ಗದ್ದಲದಲ್ಲಿದ್ದೆನಾದ್ದರಿಂದ ಮತ್ತೊಮ್ಮೆ ರಜೆಯ ದಿನಗಳಲ್ಲಿ ಬರುವೆನೆಂದು ಹೇಳಿದೆ. ಸಂಜೆಯ ಮೋಟರಿಗೆ ಊರಿಗೆ ಹೊರಡುವುದು ಗೊತ್ತಾಯಿತು.

ನಾನೂ ರಾಮರಾಯರ ಮನೆಗೆ ಬಂದು ಎಲ್ಲವನ್ನೂ ಹೇಳಿದೆ. ಅವರು "ಮಹಮ್ಮದಸಾಬಾ ಬಾಯಿ ಹಾಕಿದಾ ಅಂದ್ರ ಈ ಊರಾಗಿನ ರೈತರು ಹೇಳಿದಾಂಗ ಕೇಳತಾರ" ಎಂದು ಹೇಳಿ ನನ್ನನ್ನು ಊಟಕ್ಕೆಬ್ಬಿಸಿದರು. ಊಟ ಮುಗಿಸಿಕೊಂಡು ವಾಮಕುಕ್ಷಿಯಾದ ಬಳಿಕ ಮೋಟರ ಸ್ಟ್ಯಾಂಡಿಗೆ ಹೋದೆ. ಮಹಮ್ಮದಸಾಬ ಅಧಿಕಾರಿಯಂತೆ ಗಿಡದಡಿಯಲ್ಲಿಯ ಬೆಂಚಿನ ಮೇಲೆ ಕುಳಿತು ಕೊಂಡಿದ್ದ. ನಾನು ಬಂದ ಕೂಡಲೇ ಮೋಟಾರಿನಲ್ಲಿ ಫ್ರಂಟ್ ಸೀಟಿಗೆ ಕುಳ್ಳಿರಿಸಿ. "ಹೋಗಿ ಬರ್ರಿ. ನಮ್ಮನ್ನ ಮರೀಬ್ಯಾಡ್ರಿ" ಎಂದು ಹೇಳುವಾಗಲೇ ಮೋಟರ ಹೊರಟಿತು.

ಮೋಟರ್ ವೇಗವು ಹೆಚ್ಚಾದಂತೆ ಹಳ್ಳಿಯು ಕಾಣದಾಯಿತು. ಮಹಮ್ಮದಸಾಬನ ಮೂರ್ತಿ ಮಾತ್ರ ನನ್ನ ಮನದಲ್ಲಿ ಅಚ್ಚೊತ್ತಿದಂತೆ ಇನ್ನೂ ಉಳಿದಿದೆ. ✡

---

ನ್ಯೂಯಾರ್ಕಿನ, ಕಾಣೆಯಾದವರನ್ನು ಪತ್ತೆ ಹಚ್ಚುವ ಕಚೇರಿಗೆ ಕೆಲ ವರ್ಷಗಳ ಹಿಂದೆ ಒಬ್ಬ ಬಂದ. ವಯಸ್ಸು ಐವತ್ತರ ಆಚೀಚೆ ಇರಬೇಕು. ಅಲ್ಲಿನ ಅಧಿಕಾರಿ ಯೆದುರು ತನ್ನ ಹೆಂಡತಿ ಕಾಣೆಯಾಗಿದ್ದಾಳೆ, ಹುಡುಕಿ ಕೊಡಿ ಎಂದ.

ಆಕೆಯ ಹೆಸರು, ವಯಸ್ಸು, ಫೋಟೋ ಮತ್ತಿತರ ವಿವರಗಳನ್ನು ಕೇಳಿದ ಆ ಅಧಿಕಾರಿ ಕೊನೆಗೆ, "ಎಷ್ಟು ದಿನಗಳಿಂದ ಕಾಣೆಯಾಗಿದ್ದಾರೆ ನಿಮ್ಮಾಕೆ?" ಎಂದು ಕೇಳಿದ.

"೧೫ ವರ್ಷಗಳಿಂದ" ಎಂದುತ್ತರಿಸಿದ ಆ ವ್ಯಕ್ತಿ.

ಇದನ್ನು ಕೇಳಿ ಅಧಿಕಾರಿಗೆ ಅಚ್ಚರಿಯಾಯಿತು. "ಅರೆ, ಇಷ್ಟು ದಿನಗಳಾದರೂ ನೀವು ಈಗ ಬಂದು ಹೇಳುತ್ತಿದ್ದೀರಲ್ಲ" ಎಂದಾಗ,

"ಏನು ಮಾಡಲಿ ಹೇಳಿ. ಈಗೀಗ ಒಂಟಿತನ ಕಾಡುತ್ತಿದೆ" ಎಂದ ಆತ.

ನಿನ್ನ ನೆನಪಿನ ಮೇಲೆ
ಬಾಂಬುಗಳ ಮಳೆಗರೆಯಲು
ಯುದ್ಧ ಬಣದ ಮಧ್ಯ ಸೇರಿದೆ
ಲೆಫ್ಟ್ ರೈಟಿನ ಶಿಸ್ತಿನಲ್ಲೂ
ನಿನ್ನ ನೆನಪು ವಾಲುತ್ತಿತ್ತು………
ಹಿಮಗಿರಿಯ ಕಂದರಕೆ ಕಳುಹಿಸಿದರು
ಗಡಗಡನೆ ನಡುಗುವ ಚಳಿಯಲ್ಲಿ
ನಿನ್ನ ನೆನಪನ್ನೇ ಹೊದ್ದು
ಗಡಿಯ ಕಾಯ್ದೆ
ಯುದ್ಧ !
ಭಯಂಕರ !!
ಸುತ್ತೆಲ್ಲ ಸತ್ತರು
ಸತ್ತವರು
ಸ್ವರ್ಗಕ್ಕೇರಿದರು
ಹೆಣಗಳನ್ನು ಮಾತ್ರ ಬೂದಿ ಮಾಡಿದರು
ಇದನ್ನೋದಿದವರು
"ದೇಶಪ್ರೇಮಿಗಳು"
ಎಂದು ಹೊಗಳಿದರು.
ಹೊಟ್ಟೆಗಾಗಿ ಹೋದವರ ಬಟ್ಟೆ ಬಂದಾಗ
ಹೆತ್ತವರ ಒಡಲಲ್ಲಿ ಬೆಂಕಿ ಬಿತ್ತು
ಅದು ಬಾಂಬಿಗಿಂತಲು ಮಿಗಿಲಾಗಿತ್ತು
ತನಗೋ ಮೈತುಂಬ ಗಾಯಗಳು
ಸಕಲ ಸನ್ಮಾನಗಳೊಂದಿಗೆ

ಮನೆಗೆ ಕಳಿಸಿದರು
ಕುಂಟುತ್ತ ಬರುವಾಗ
ನಿನ್ನ ನೆನಪು ಕೋಲಾಗಿತ್ತು
ಊರು ಹೊಕ್ಕ ಹೊಸತರಲ್ಲೇ
ಚಂಡಮಾರುತ ಬಂದ
ಜೀವ ಜೀವಗಳನ್ನೆಲ್ಲ ಕೊಂಡೊಯ್ದ
ತನ್ನ ಜನರು
ಚಂಡಮಾರುತವನ್ನೇ
ತಿರುವಿ ಹಾಕುವ ಉತ್ತುಂಗ
ಮಹಲು–ಮಂದಿರ–ಮಸೀದೆ-ಚರ್ಚು
ಗಳನ್ನೆಲ್ಲ ಕಟ್ಟಿದ ಜನರು
ಆಶ್ರಯವಿಲ್ಲದೆ
ಹೆಣಗಳಾದರು-ಕೊಳೆತರು-ನಾರಿದರು.
ಇದ ಕಂಡು ಬೆಚ್ಚಿಗಿದ್ದವರೂ
ಅತ್ತರು ಮತ್ತು
ಪರಿಹಾರಧನವೆತ್ತಿ ಮನೆಗೆ ಹೋದರು
ತಮಸೋಮಾ……ಅನುವವರು ಬಂದರು
ಕನ್‌ಫೆಶನ್ ಶುರುವಾಯ್ತು
ಅಲ್ಲಾ ಹೋ ಅಕ್ಬರ್ ಮುಗಿಯಿತು
ಇಬ್ಬಣದ ರಾಜಕಾರಣಿಗಳೂ ಬಂದರು
ಹೆಣದ ಗುಡ್ಡಗಳನ್ನೆಲ್ಲ ಹತ್ತಿ
'ಸಂಜೀವಿನಿ'ಗಾಗಿ ಹೊಡೆದಾಡಿದರು
ನಾನಿಲ್ಲಿ ಹೀಗೆಯೇ
ಈ ಪೂರದಲ್ಲಿ ಹರಿಯುತ್ತ
–ನಿನ್ನ ನೆನಪಿನ ಮೇಲೆ ತೇಲುತ್ತ–ಹೊರಟರೂ
ಮನದ ಕ್ಯಾಮರ ಮಾತ್ರ
ಇನ್ನೂ ಕ್ಲಿಕ್ಕಿಸುತ್ತಲೇ ಇದೆ.

# ವಿಚಾರ ತರಂಗ

**ಶಿಲಜೋ**

ಸಂವಿಧಾನವನ್ನು ದುರುಪಯೋಗಪಡಿಸಿದರೆ ಅದು ಕಾಯ್ದೆಯಾಗಿ ಉಳಿಯಲಾರದು.

* ಜನರ ಇಚ್ಛೆಯಂತೆ ಸರಕಾರಗಳು ನಡೆಯುವದಾದರೆ ಸರಕಾರಗಳು ಉಳಿಯುವುದಿಲ್ಲ. ಜನರು ಮಾತ್ರ ಉಳಿಯುತ್ತಾರೆ.

* ಜನತೆಗೆ ಬೇಕಾಗಿರುವುದು ಸ್ವಾತಂತ್ರ್ಯ ಮಾತ್ರವಲ್ಲ. ಜನತೆಗೆ ಬೇಕಾದುದೆಲ್ಲ ದೊರೆತರೆ ಅದು ಸ್ವಾತಂತ್ರ್ಯವಲ್ಲ. ಸ್ವಾತಂತ್ರ್ಯವೆಂದರೆ ನಮ್ಮ ಜೀವನದ ಅಧಿಕಾರ ನಮಗೆ ದೊರೆಯುವುದು.

* ಮುಂದುವರಿದವ ಬಿಳಿಯರ ಜೀವನದಲ್ಲಿ ಬಹಳಷ್ಟೋ ಸಲ ತಮ್ಮ ನೈಮಿತ್ತಿಕ ಕಾರ್ಯಗಳನ್ನು ನಿರ್ವಹಿಸಲು ಕೂಡ ಆಸ್ಪದವಿರುವುದಿಲ್ಲ.

* ಭಾರತದಲ್ಲಿ ಧರ್ಮವಿದೆಯೆಂದು ದೇಶ ಬದುಕಿದೆ. ರಾಜಕಾರಣದಿಂದ ದೇಶ ಬದುಕುವುದಿಲ್ಲ.

* ಭಾರತದಲ್ಲಿ ರಾಜಕಾರಣ ಬೆಳೆಯುತ್ತಿದೆ. ಸ್ವಾರ್ಥಿಗಳು ಬೆಳೆಯುತ್ತಿದ್ದಾರೆ. ಅಂತಸ್ತಿನ ಮನೆಗಳು ಬೆಳೆಯುತ್ತಿವೆ. ಪೇಟೆಯ ಬೆಲೆಗಳು ಬೆಳೆಯುತ್ತಿವೆ. ಹಣವೂ ಬೆಳೆಯುತ್ತಿದೆ. ಜನಸಂಖ್ಯೆಯೂ ಬೆಳೆಯುತ್ತಿದೆ. ಬೆಳವಣಿಗೆಯು ಮುಂದುವರಿದ ನಾಗರಿಕ ಲಕ್ಷಣವಾಗಿದ್ದರೆ ಜಗತ್ತೇ ಇಂದು ಬೆಳೆಯುತ್ತಿದೆ.

* ಜೀವನ ಬೆಳೆದರೆ ಮಾತ್ರ ಜಗತ್ತು ಬೆಳೆಯುತ್ತದೆ. ಜಗತ್ತು ಮಾತ್ರ ಬೆಳೆದರೆ ಸಾಲದು.

* ನಾವಿರುವುದು ಮನೋಮಯ ಜಗತ್ತಿನಲ್ಲಿ. ನಮ್ಮ ಮನಸ್ಸಿನ ಕಲ್ಪನೆಯೇ ನಮ್ಮನ್ನು ಹಿಡಿದು ಹಾಕುತ್ತದೆ.

* ಅಸತ್ಯದಿಂದ ಸತ್ಯಕ್ಕೆ. ಕತ್ತಲೆಯಿಂದ ಬೆಳಕಿಗೆ. ಮೃತತ್ವದಿಂದ ಅಮೃತತ್ವಕ್ಕೆ ಕರೆದೊಯ್ಯುವುದೆ ನಿಜವಾದ ಧರ್ಮ. ನಮ್ಮ ಅಜ್ಞಾನ ಕತ್ತಲು ಕಳೆದು ಮರಣದಿಂದ ಅಮರತ್ವ ಪಡೆದರೆ ಅದೇ ಮೋಕ್ಷ; 'ಇಂದಿನ' ಮೋಕ್ಷ ನಾಳೆ. ಇಂದಿನ 'ಜ್ಞಾನ' ನಾಳಿನ ಸೋಪಾನ.

* ಇಸ್ಲಾಂ ಧರ್ಮಕ್ಕೆ ಶಾಂತಿ. ಕ್ರಿಸ್ತ ಧರ್ಮಕ್ಕೆ ಸಹನೆ ಮತ್ತು ಹಿಂದು ಧರ್ಮಕ್ಕೆ ತ್ಯಾಗ ಶೋಭಿಸುತ್ತದೆ.

* ಮನೋಧರ್ಮ ಬದಲಾದಂತೆ ದೇವರುಗಳೂ ಬದಲಾಗುತ್ತವೆ. ಮನೋವೇಗದಲ್ಲಿ ಚಲಿಸುವ ಜಗತ್ತಿನಲ್ಲಿ ನಾವೆಲ್ಲಾ ಹಿಂದುಳಿದವರು. ನಮ್ಮೊಂದಿಗಿರುವ ಮನಸ್ಸು ನಮ್ಮ ಆಗುಹೋಗುಗಳ ಸೀಮೆಯಲ್ಲಿ ಬಂಧಿತವಾಗಿರುತ್ತದೆ.

* ದೇಹಕ್ಕೆ ಅನ್ನ-ಆಶ್ರಯ ಆರೈಕೆ ದೊರೆತರೆ ಮನಸ್ಸು ಬೆಳೆಯುತ್ತದೆ. ನಾವಿನ್ನೂ 'ಅ ಆ' ದಲ್ಲಿಯೇ ಇದ್ದೇವೆ.

* ಸ್ತ್ರೀಯು ಮಾಯಾ ಸ್ವರೂಪಿ: ಆಕೆ ಮಾಯೆಯಲ್ಲಿ ಜಗತ್ತು ಉಳಿಯುತ್ತದೆ. ಅಳಿಯುತ್ತದೆ. ಅವಳು ಜಗನ್ಮಾಯೆ.

* ಸ್ತ್ರೀ ಅನ್ನಪೂರ್ಣೆ. ನಾವು ಹುಟ್ಟಿ ಬೆಳೆದು ನಿಂತಿರುವ ಭೂಮಿಯ ಪ್ರತೀಕ. ಅವಳ ಕರುಣೆಯಿಂದಲೇ ಸಂತಾನ ಉಳಿದು ಬೆಳೆದಿದೆ. ಅವಳು ಬಂಜೆಯಾದರೆ ಯಾವುದೂ ಉಳಿಯುವುದಿಲ್ಲ.

* ದೇವರ ಜಗತ್ತಿನಲ್ಲಿ ಪಾಪ ಪುಣ್ಯವೆಂಬುದು ಯಾವುದೂ ಇರುವುದಿಲ್ಲ. ಮಾನವ ಜನ್ಮದಿಂದ ಪಾಪ ಪುಣ್ಯ ಹುಟ್ಟುತ್ತದೆ. ಒಬ್ಬ ದೇವರು ಇರುವನಾದರೆ ಜಗತ್ತಿನಲ್ಲಿ ಒಂದೇ ಧರ್ಮ, ಒಂದೇ ಆಡಳಿತ. ಒಂದೇ ಜೀವನವಿರಬೇಕು. ಆಳುವ ಅರಸ ಒಬ್ಬನೇ ಇದ್ದಾಗ ಮಾತ್ರ ಇದು ಸಾಧ್ಯ.

* ದೇವರು ಹಲವು. ಧರ್ಮ ಹಲವು. ದೇವರು. ರಾಷ್ಟ್ರ ಮತ್ತು ಧರ್ಮ ಇವು ಮೂರೂ ಒಂದಾದಾಗ ಜನರಿಗೆ ಸುಖಸಿಗುತ್ತದೆ. ಭಾರತದಲ್ಲಿ ಇದೊಂದು ಕನಸು.

* ಸಮಾಜವು ನಮ್ಮ ಧರ್ಮಕ್ಕನುಗುಣವಾಗಿರದಿದ್ದರೆ ಸಮಾಜವೇ ಬೇರೆ ಧರ್ಮವೇ ಬೇರೆ. ಆದ್ದರಿಂದ ನಮ್ಮ ಜೀವನವನ್ನು ಸಾಮಾಜಿಕ ಮತ್ತು ಧಾರ್ಮಿಕ ಎಂದು ಎರಡು ಬಗೆಯಿಂದ ವಿಂಗಡಿಸಿಕೊಳ್ಳಬೇಕಾಗಿದೆ.

* ಆರ್ಥಿಕ ಭದ್ರತೆ ಸಾಮಾಜಿಕ ಜೀವನಕ್ಕೆ ಅತ್ಯಗತ್ಯ. ಅದೇ ಅಡಿಪಾಯ. ಆದ್ದರಿಂದ ಎಲ್ಲ ಸಮಾಜವಾದಿಗಳೂ ಆರ್ಥಿಕ ಭದ್ರತೆಯಲ್ಲಿ ಮಾತನಾಡುತ್ತಾರ. ನಿಜವಾದ ಧಾರ್ಮಿಕ ಜೀವನಕ್ಕೆ ಆರ್ಥಿಕ ಅಡಿಪಾಯವಿರುವುದಿಲ್ಲ. ಧರ್ಮವೇ ಅಡಿಪಾಯವಾಗಿರುತ್ತದೆ. ಧರ್ಮವೇ ರಕ್ಷಿಸುತ್ತದೆ. ಧರ್ಮವೇ ತಾರಕವಾಗುತ್ತದೆ. ಧರ್ಮದ ಪ್ರವಾಹದಲ್ಲಿ ಜೀವನವು ಹೊಳೆಯಾಗಿ ಹರಿಯುತ್ತದೆ.

* ವೇದಾಂತದೊಂದಿಗೆ 'ನಾನು' ಮುಗಿಯುವುದಿಲ್ಲ. ನನ್ನೊಂದಿಗೆ ವೇದಾಂತವು ಮುಗಿಯುತ್ತದೆ. ಏಕೆಂದರೆ ನಾನಿನ್ನೂ ಬದುಕಿದ್ದೇನೆ.

* ವೇದಾಂತಕ್ಕೂ ಜೀವನಕ್ಕೂ ನಿಕಟ ಸಂಬಂಧವಿದೆ. ಹೇಳುವುದೆಲ್ಲ ಹಳೆಯ ವೇದಾಂತ. ನಡೆಯುವುದೆಲ್ಲ ಜೀವನ ವೇದಾಂತ.

* ಧರ್ಮದ ರಹಸ್ಯ ಜೀವನದಲ್ಲಿದೆ. ಜೀವನವೆಂದರೆ ಪ್ರಕೃತಿ. ಪ್ರಾಣಿ. ಪಶು-ಪಕ್ಷಿಗಳನ್ನೊಳ



ಗೊಂಡದ್ದು.

* ಮನೋಧರ್ಮವನ್ನನುಸರಿಸಿ ಸಮಾಜ ಜೀವನ ಪ್ರಾಕೃತಿಕ ಧರ್ಮವನ್ನನುಸರಿಸಿ ಪ್ರಾಣಿ ಜೀವನ ಬೆಳೆದಿದೆ.

* ಮನುಷ್ಯನಿಗೂ ಪ್ರಾಣಿಗೂ ಇರುವ ಅಂತರ ಚಿಂತನೆ. ಚಿಂತನೆಯಿಂದ ಜೀವನ ವಿಕಾಸವಾಗುತ್ತದೆ.

* ಹಿಂದು ಧರ್ಮದ ಉತ್ಕೃಷ್ಟಾವಸ್ಥೆಯೇ ಬೌದ್ಧ ಧರ್ಮ. ಅಲ್ಲಿ ತ್ಯಾಗ, ಅಹಿಂಸೆ. ವೈರಾಗ್ಯಗಳಿವೆ.

* ತ್ಯಾಗ-ವೈರಾಗ್ಯಗಳಿಗಿಂತ ಹೆಚ್ಚಿನ ಸಂಪದ ಬೇರೆ ಯಾವುದೂ ಇಲ್ಲ.

* ಹಿಂದು ಧರ್ಮ ನಾಶವಾದರೆ ಹಿಂದು ದೇಶವೇ-ನಾಶವಾಗುತ್ತದೆ. ಉಳಿದೆಲ್ಲ ಧರ್ಮಗಳಲ್ಲಿರುವುದೆಲ್ಲ ಹಿಂದು ಧರ್ಮದಲ್ಲಿದೆ. ಹಿಂದೂ ಧರ್ಮವು ಪ್ರಾಕೃತಿಕ ಧರ್ಮವನ್ನು ಒಳಗೊಂಡಿದೆ. ಪ್ರಕೃತಿಯು ಅವಶ್ಯಕ ಬದಲಾದಂತೆ ಹಿಂದು ಧರ್ಮವು ಬದಲಾಗುತ್ತದೆ. ವಿಕಾಸಗೊಳ್ಳುತ್ತದೆ.

* ಹಿಂದು ಧರ್ಮ ಸಾರ್ವಕಾಲಿಕ ಧರ್ಮ.

* ಜನಾಂಗ ಬೆಳೆದಂತೆ ಧರ್ಮ ಬೆಳೆಯುತ್ತದೆ.

* ಧರ್ಮ ನಶಿಸಿ ಜನಾಂಗ ಉಳಿದರೆ ಜನಾಂಗ ದಿಕ್ಕು ತಪ್ಪುತ್ತದೆ.

* ಹಿಂದು ಧರ್ಮ ಅನಾದಿ ಕಾಲದಿಂದ ಬಂದುದಲ್ಲ. ವೈದಿಕ ಧರ್ಮದಿಂದ ಬಂದುದಾಗಿದೆ. ಅದು ಹಿಂದು ಧರ್ಮದ ನೆಲೆಯಾಗಿದೆ.

* ಹಿಂದು ಧರ್ಮ ವೈದಿಕ ಧರ್ಮವನ್ನುಳಿಸದಿದ್ದರೆ ಹಿಂದು ಧರ್ಮ ನಶಿಸಿ ಹೋಗುತ್ತದೆ.

* ವೈದಿಕ ಧರ್ಮವೆಂದರೆ ಯಾಗ ಯಜ್ಞ ಪೂಜೆ ಬಲಿ ಮುಂತಾದುಗಳನ್ನೊಳಗೊಂಡ ದೌರ್ಜನ್ಯವಲ್ಲದ ಸದಾಚಾರ ಸಂಪನ್ನತೆಯಿಂದ ಕೂಡಿದ ಜೀವನ ಧರ್ಮ.

* ಅನ್ನ ನೀರು ಆಶ್ರಯಗಳಿಲ್ಲದಿರುವಲ್ಲಿಯೂ ದೇವರಿದ್ದಾನೆ. ದೇವರಿರುವಲ್ಲಿ ಮೋಕ್ಷವಿದ್ದೇ ಇದೆ.

* ಜನನಕ್ಕೂ ಮರಣಕ್ಕೂ ಮೋಕ್ಷ ಕಾರಣ. ಮೋಕ್ಷವೆಂದರೆ ಅನುಭವಜನ್ಯ ಜ್ಞಾನ. ಜನನಕ್ಕೂ ಮರಣಕ್ಕೂ ನಡುವೆ ಇರುವ ಅಂತರವೇ ಜೀವನ. ಈ ಅಂತರವು ಪ್ರತಿಕ್ಷಣವೂ ಕರ್ಮದಿಂದ ತುಂಬಿದೆ.

* ಧರ್ಮವು ಹೇಳುವುದೆಲ್ಲವೂ ನ್ಯಾಯವಲ್ಲ. ನ್ಯಾಯಕ್ಕೂ ವೇದಾಂತವಿದೆ. ಧರ್ಮಕ್ಕೆ ವೇದಾಂತ ಕೊನೆಯಾಗುವುದಿಲ್ಲ.

* ಜಗತ್ತಿನಿಂದ ಹುಟ್ಟಿರುವ ಜೀವನಕ್ಕೂ ಜೀವನದಿಂದ ಹುಟ್ಟಿರುವ ಜಗತ್ತಿಗೂ ಭೇದವಿದೆ. ನಮ್ಮ ಜೀವನದಿಂದ ಹುಟ್ಟಿದ ಜಗತ್ತಿನಿಂದ ಜಗತ್ತಿನ ಜೀವನಕ್ಕೆ ಹೊಂದಿಕೊಳ್ಳಬೇಕಾಗಿದೆ.

* ಜಗತ್ತು ಎಂದರೆ ನಮ್ಮ ಕಲ್ಪನೆ ಮೂಡಿದುದಾಗಿದೆ. ನಮ್ಮಿಂದ ಹುಟ್ಟಿ ನಮ್ಮೊಂದಿಗೆ ಕೊನೆಗೊಳ್ಳುವ ಜಗತ್ತೆ ನಮಗೆ ಕೊನೆಯದು.

* 'ನಾನು' ಯಾರು? ಎಂಬ ಪ್ರಶ್ನೆಗೆ 'ನಾನು' ನನ್ನ ಪ್ರಜ್ಞೆ ಮಾತ್ರ. ಇದು 'ಪ್ರಜ್ಞಾನ ಬ್ರಹ್ಮ' ಜಗತ್ತು. ಇಲ್ಲಿರುವುದೆಲ್ಲ ಒಳ್ಳೆಯದಲ್ಲ. ಇದು 'ಪ್ರಜ್ಞಾನಾನಂದ' ಜಗತ್ತು ಆಗಬೇಕು.

* ಎಲ್ಲವೂ ಸತ್ಯ. ಶಿವಂ ಸುಂದರಂ ಆಗಬೇಕು. ಏಕೆಂದರೆ ಸತ್ಯಕ್ಕಿಂತ ಘೋರವಾದದ್ದು ಮತ್ತು ಸುಂದರವಾದದ್ದು ಮತ್ತೊಂದಿಲ್ಲ. ಸತ್ಯವೇ ನಿತ್ಯವಾಗಿರುವುದರಿಂದ ಅದು ಸುಂದರವಾಗಿರಬೇಕು ✡

**ಯುದ್ಧದಲ್ಲಿ ಲಕ್ಷಾನುಲಕ್ಷ ಜನರ ಮೇಲೆ ವಿಜಯ ಸಾಧಿಸುವವನಿಗಿಂತ ತನ್ನ ಆತ್ಮದ ಮೇಲೆಯೆ ವಿಜಯ ಸಾಧಿಸುವವನನ್ನು ಪರಮ ವೀರನೆಂದು ಪರಿಗಣಿಸಬೇಕು.**

# ಸ್ಯಾಮುಎಲ್ ಬೆಕೆಟ್

**ಆಧುನಿಕ ಯುರೋಪಿಯನ್ ಸಾಹಿತ್ಯದ ಮೇಲೆ ಪ್ರಗಾಢವಾದ ಪ್ರಭಾವವನ್ನು ಬೀರಿದ ಕೆಲವೇ ಕೆಲವು ವ್ಯಕ್ತಿಗಳ ಪೈಕಿ ಸ್ಯಾಮುಎಲ್ ಬೆಕೆಟ್ಟನೂ ಒಬ್ಬ. ನಂಬಿದ ತತ್ವಗಳನ್ನೇ ಜೀವಿಸಿದ ಜೀವನ- ತತ್ವಗಳನ್ನು ಬರವಣಿಗೆಯಲ್ಲಿ ಎರಕ ಹೊಯ್ದು ಓದುಗರಿಗೆ ಹೊಸ ಜೀವನ ದೃಷ್ಟಿಕೋನವನ್ನು ಪರಿಚಯಿಸಿದ ಈತ ಗದ್ಯ ಸಾಹಿತ್ಯಕ್ಕೆ ಹೊಸ ತಿರುವನ್ನೇ ಕೊಟ್ಟ. ಬರವಣಿಗೆಯನ್ನೇ ಶುದ್ಧ ಕರ್ಮವನ್ನಾಗಿ ಸ್ವೀಕರಿಸಿ, ತನ್ನೆಲ್ಲ ಸುಖ-ಸಮಾಧಾನಗಳನ್ನು ಅದಕ್ಕೆ ಬಲಿಗೊಟ್ಟ ಬೆಕೆಟ್ಟನ ಜೀವನ ಆತನ ಬರವಣಿಗೆಗಿಂತ ಕಡಿಮೆ ಮನೋರಂಜಕವೇನೂ ಆಗಿರಲಿಲ್ಲ. ೧೯೬೯ರಲ್ಲಿ ನೋಬೆಲ್ ಬಹುಮಾನ ದೊರೆತ ಸುದ್ದಿಯನ್ನಾತ ನಿರಾಸಕ್ತ ಭಾವದಿಂದಲೇ ಸ್ವೀಕರಿಸಿದ. ಬಂದದ್ದೆಲ್ಲವನ್ನು ತೊಂದರೆಯಲ್ಲಿರುವವರಲ್ಲಿ ಹಂಚಿಬಿಟ್ಟ. ಬೆಕೆಟ್ಟನ ಅಘಟಿತ ಘಟನಾಮಯ ಜೀವನದೊಡನೆ ಆತನ ಸಾಹಿತ್ಯವನ್ನು ಇಲ್ಲಿ ಪರಿಚಯಿಸಲಾಗಿದೆ.**

ಬೆಕೆಟ್ ಹುಟ್ಟಿದ್ದು ಐರ್ಲೆಂಡಿನಲ್ಲಿ; ಬೆಳೆದದ್ದು ಫ್ರಾನ್ಸಿನಲ್ಲಿ. ಐರ್ಲೆಂಡಿನ ಪ್ರತಿಭಾವಂತರ ಪಿಂಡಾಂತರ ಶಾಪ ಆತನಿಗೂ ತಟ್ಟಿತು.

ಫಾಕ್ಸ್‌ರಾಕ್ ಡಬ್ಲಿನ್ನಿನ ಹೊರ ಭಾಗ. ಟಿಕ್ನೋಕ್ ಪರ್ವತದ ತಪ್ಪಲಿನಲ್ಲಿ ವಿಸ್ತಾರವಾದ ಹಸಿರು ತೋಟದ ಮಧ್ಯದಲ್ಲಿ ಮೂರಂತಸ್ತಿನ ಮನೆ ಕೂಲ್ಡ್ರಿಂಗ್. ಸುತ್ತಲೂ ಇಟ್ಟಿಗೆಗಳ ಎತ್ತರವಾದ ಗೋಡೆಗಳು. ಮರ, ಬಳ್ಳಿಗಳಿಂದ ಸಂಪೂರ್ಣವಾಗಿ ಆವೃತವಾದ ಆ ಕಟ್ಟಡ ಭವ್ಯ ಏಕಾಂತಕ್ಕೆ ಸಾಕ್ಷಿಯಾಗಿ ನಿಂತಿತ್ತು.

ಸ್ಯಾಮುಎಲ್ ಎರಡನೆಯ ಮಗ. ಹುಟ್ಟಿದ ದಿನದ ಬಗ್ಗೆ ಖಚಿತತೆ ಇಲ್ಲ. ೧೯೦೬, ಶುಭ ಶುಕ್ರವಾರದ ೧೩ರಂದು ಎಂದು ಸ್ಯಾಮುಎಲ್ ಹೇಳಿದ್ದಾನೆ. ಜಾತಕದಲ್ಲಿ ಮೇ ೧೩ ಎಂದು ತೋರಿಸಲಾಗಿದ್ದರೆ ಸರಕಾರಿ ಕಾಗದಪತ್ರಗಳಲ್ಲಿ ಜೂನ್ ೧೩ ಎಂದು ನೋಂದಾಯಿಸಲಾಗಿದೆ. ಐರ್ಲೆಂಡಿನ ಸಂಪ್ರದಾಯದಂತೆ ಅಲ್ಲಿನ ಜನ ಮಗು ಹುಟ್ಟಿದ ಬಳಿಕ ಸಾಯುತ್ತದೆಯೋ ಉಳಿಯುತ್ತದೆಯೋ ಎಂಬುದನ್ನು ನೋಡಲು ಒಂದು ತಿಂಗಳವರೆಗೆ ಕಾಯ್ದು ಹುಟ್ಟಿದ ದಿನಾಂಕವನ್ನು ದಾಖಲು ಮಾಡುತ್ತಾರಂತೆ.

ಸ್ಯಾಮುಎಲ್ ಹುಟ್ಟಿದಾಗ ರೋಗಿಷ್ಟ. ಉದ್ದವಾಗಿ ಸಣಕಲಾಗಿದ್ದ. ಸದಾ ರೋದನದ ಶ್ರುತಿ ಹಾಗಾಗಿಯೇ ಇರಬೇಕು ಉಳಿದವರಿಗೆ ಒಂದು ತಿಂಗಳವಾದರೆ, ಈತನಿಗೆ ಎರಡು ತಿಂಗಳು.

ತಂದೆ ವಿಲಿಯಂ ಫ್ರಾಂಕ್ ಬೆಕೆಟ್; ತಾಯಿ ಮೇರಿ ಜೋನ್ಸ್ ರೋ. ಕೆಥೋಲಿಕ್ ರಾಷ್ಟ್ರವಾದ ಐರ್ಲೆಂಡಿನಲ್ಲಿ ಪ್ರೊಟೆಸ್ಟಂಟ್ ಮನೆತನ ಅವರದು. ಮೊದಲು ಬಟ್ಟೆ ವ್ಯಾಪಾರಸ್ಥರಾದ ಅವರು ಮುಂದೆ ಕಟ್ಟಡದ ಗುತ್ತಿಗೆದಾರರಾಗಿ ಶ್ರೀಮಂತ ಉದ್ದಿಮೆದಾರರೆನಿಸಿಕೊಂಡರು.

ದುಂಡು ಮುಖದ ಗಡಸು ಧ್ವನಿಯ ಗೂಳಿ ಕುತ್ತಿಗೆಯ ವಿಲಿಯಂ ಆರು ಅಡಿ ಎತ್ತರದ ಆಳು. ಚಟುವಟಿಕೆಯ ಸ್ವಭಾವದವ. ಜೀವನವನ್ನು ಲಘುವಾಗಿ, ವ್ಯಾಪಾರವನ್ನು ಗಂಭೀರವಾಗಿ ತೆಗೆದುಕೊಂಡ ಲವಲವಿಕೆಯ ವ್ಯಕ್ತಿ. ಫ್ರಾಂಕ್– ಮೊದಲನೆಯ ಮಗ– ತಂದೆಯಂತಿದ್ದ. ತಾಯಿ ಸ್ವತಂತ್ರ ಪ್ರವೃತ್ತಿಯವಳು. ಡಬ್ಲಿನ್ನಿನ ಪ್ರಸಿದ್ಧ ಸಿಪ್ಪ

ಗೃಹಸ್ಥನ ಮಗಳಾದ ಆಕೆ ಸಂಪ್ರದಾಯಗಳನ್ನು ಮುರಿಯುವಲ್ಲಿ ನಿಸ್ಸೀಮಳು. ಅದಿಲೇಡ್ ಆಸ್ಪತ್ರೆಯಲ್ಲಿ ದಾಯಿಯಾಗಿ ಕೆಲಸಕ್ಕೆ ಸೇರಿದಳು. ರೋಗಿಯಾಗಿ ಅದೇ ಆಸ್ಪತ್ರೆಯನ್ನು ಸೇರಿದ ವಿಲಿಯಂನನ್ನು ಪ್ರೀತಿಸಿ ಮದುವೆಯಾದಳು. ನೀಳವಾದ ತೆಳು ದೇಹ. ತಿಳಿ ನೀಲಿಗಣ್ಣು, ಬಂಗಾರ ಬಣ್ಣದ ವಿಪುಲ ಕೂದಲು, ಕೊಕ್ಕೆ ಮೂಗು. ಗಂಭೀರ ನಿಲುವು, ತೀರಾ ಮೂದಿಯಾದ ಕಣ್ಣು. ಕತ್ತೆಯನ್ನು ಕಂಡರೆ ಬಲು ಮೆಚ್ಚು; ಕತ್ತೆಗೂ ಹೆಸರಿಟ್ಟು ಸಿಂಗರಿಸುತ್ತಿದ್ದಳು.

ಸ್ಯಾಮುಎಲ್ ತಾಯಿಯನ್ನೇ ಹೋಲುತ್ತಿದ್ದ.

"ನನ್ನ ಬಾಲ್ಯ ಘಟನಾರಹಿತವಾದದ್ದು. ಅನುಕೂಲಗಳು ಬೇಕಾದಷ್ಟು ಇದ್ದವು. ಆದರೆ ಸುಖಪಡುವ ಒಲುವೆ ನನಗೆ ಕಡಿಮೆ, ದುಃಖದ ಕಡೆ ಹೆಚ್ಚು ಗಮನ. ನಾನು ಎಲ್ಲರ ಮಧ್ಯ ಒಂಟಿ. ತಂದೆ ನನಗೆ ಹೊಡೆಯುತ್ತಿರಲಿಲ್ಲ. ತಾಯಿ ನನ್ನನ್ನು ತಿದ್ದಲು ನಾನು ಹುಟ್ಟಿದಂದಿನಿಂದಲೂ ತಾನು ಸಾಯುವವರೆಗೆ ಪ್ರಯತ್ನಿಸಿ ನಿರಾಶೆಪಟ್ಟಳು," ಎಂದು ಸ್ಯಾಮುಎಲ್ ಹೇಳುತ್ತಾನೆ.

ಪೈನ್ ವೃಕ್ಷದ ತುಟ್ಟ ತುದಿಗೆ ಹತ್ತಿ ಕೈಕಾಲು, ಅಗಲಿಸಿ ಹಕ್ಕಿಯಂತೆ ಹಾರುತ್ತಿದ್ದ ಸಾಮುಎಲ್ ಯಾವುದಾದರೂ ಟೊಂಗೆಗೆ ಸಿಲುಕಿ ಬದುಕಿಕೊಂಡಿದ್ದ. ತಾಯಿ ಚೆನ್ನಾಗಿ ಥಳಿಸುತ್ತಿದ್ದಳು. ತಾಯಿಗೆ ಸಿಟ್ಟು ತರಿಸಬೇಕೆಂಬ ಉದ್ದೇಶದಿಂದ ಇಂಥದೇ ಒಂದಲ್ಲ ಒಂದು ಆಟ ಹುಡುಕುತ್ತಿದ್ದ. ಒಮ್ಮೆ ಗ್ಯಾಸೋಲಿನ್ ಡಬ್ಬಿಯೊಳಗೆ ಬೆಂಕಿ ಕಡ್ಡಿ ಕೊರೆದು ಒಗೆದಿದ್ದ. ಆತನಿಗೆ ಹೆದರಿಕೆಯಾಗಲಿ ಪ್ರೀತಿಯಾಗಲಿ ಪರಿಣಾಮವನ್ನೇ ಮಾಡುತ್ತಿರಲಿಲ್ಲ. ಆತನಲ್ಲಿ ಸಾಮಾನ್ಯ ಭಾವನೆಗಳನ್ನು ತುಂಬುವುದಕ್ಕಾಗಿ ತಾಯಿ ಅನೇಕ ಶಿಕ್ಷೆಗಳನ್ನು ಸಂಶೋಧಿಸಿದಳು. ಈಗ ಸಾಮಾನ್ಯ ಭಾವನೆಗಳು ಒಳಗೆ ಬಾರದಂತೆ ತಟಸ್ಥ ಗೋಡೆಯೊಂದನ್ನು ಮನಸ್ಸಿನ ಸುತ್ತ ಕಟ್ಟಿಕೊಂಡಿದ್ದ. ಆತ ತನ್ನ ವೈಯಕ್ತಿಕ ಅನಿಸಿಕೆಗಳನ್ನು ಸಾರ್ವಜನಿಕ ತಿಳುವಳಿಕೆಗೆ ಬರದಂತೆ ಸದಾ ಎಚ್ಚರ ವಹಿಸಿದ್ದ.

ತಾಯಿ ಮತ್ತು ಅಣ್ಣ ಫ್ರಾಂಕ್ ಪ್ರೊಟೆಸ್ಟಂಟ್ ನೀತಿಯನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಚರ್ಚಿಗೆ ನಿಯಮಿತವಾಗಿ ಹೋಗಬೇಕೆಂದೂ ಮಲಗುವಾಗ ತಪ್ಪದೆ ಪ್ರಾರ್ಥಿಸಬೇಕೆಂದೂ ಕಟ್ಟುನಿಟ್ಟಾಗಿ ಸ್ಯಾಮುಎಲ್‌ಗೆ ಹೇಳಲಾಗಿತ್ತು. ಧರ್ಮದ ಕರ್ಮಭಾಗಕ್ಕೂ, ಧರ್ಮನಿಷ್ಠೆಗೂ ಹಿರಿಯರಲ್ಲಿ ಕಂಡುಬರುವ ಮಹದಂತರದಿಂದಾಗಿ ಬೆಕೆಟ್ಟನಲ್ಲಿ ಅಶ್ರದ್ಧೆ ಬೆಳೆಯತೊಡಗಿತು.

"ಸಾಂಘಿಕ ಧರ್ಮಗಳು ಶೋಷಣಾತ್ಮಕವಾಗಿವೆ. ನಾನು ಅವುಗಳನ್ನು ಬುದ್ಧಿಪೂರ್ವಕವಾಗಿ ಮೀರಿ ಹೋಗುತ್ತೇನೆ. ನನ್ನ ತಾಯಿಗಾಗಲಿ ಅಣ್ಣನಿಗಾಗಲಿ ಅವರ ಧರ್ಮದ ನಂಬುಗೆಗಳು ಅವರ ಮರಣದ ಕಾಲದಲ್ಲಿ ನೆರವಿಗೆ ಬರಲಿಲ್ಲ. ಜೀವನದ ಸಂಘರ್ಷಗಳ ಇರುಕಿನಲ್ಲಿ ಪುನಃ ಸ್ಥೈರ್ಯವನ್ನು ಕೊಡದ ಧಾರ್ಮಿಕ ನಂಬುಗೆಗಳು ನಿರರ್ಥಕವಾದವುಗಳೆಂದು ನನ್ನ ವಿಶ್ವಾಸ...... ನನಗೆ ಕ್ರಿಶ್ಚಿಯನ್ ಧರ್ಮದ ಪೌರಾಣಿಕ ಕಲ್ಪನೆಗಳ ಬಗ್ಗೆ ತಿಳುವಳಿಕೆಯಿದೆ. ಚಿಕ್ಕವನಿರುವಾಗ ನನಗೆ ಬೈಬಲ್ಲನ್ನು ಓದಿ ಹೇಳಲಾಗುತ್ತಿತ್ತು. ಬೈಬಲ್ಲಿನಿಂದ ಪ್ರಭಾವಿತರಾದ ಮಹಾವ್ಯಕ್ತಿಗಳ ಕಥೆಗಳೂ ನನಗೆ ಗೊತ್ತು. ಅದರಂತೆ ಬೈಬಲ್ಲನ್ನು ಯಾವು ಯಾವುದಕ್ಕಾಗಿಯೋ ಉಪಯೋಗಿಸಿಕೊಳ್ಳುವವರನ್ನೂ ನೋಡಿದ್ದೇನೆ. ಇವೆರಡರ ನಡುವೆ ಬೈಬಲ್ಲಿನ ಸತ್ಯವಿದೆ. ಬೈಬಲ್ ಒಂದು ಸಾಹಿತ್ಯದ ರೂಪ. ನನಗೆ ಅದರಲ್ಲಿ ಸರಿ ಕಂಡದ್ದನ್ನು ಒಪ್ಪಿಕೊಂಡಿದ್ದೇನೆ. ಅಂದ ಮಾತ್ರಕ್ಕೆ ನನ್ನ ನಿತ್ಯ ಜೀವನದ ಮೇಲೆ ಬೈಬಲ್ ಆಳವಾದ ಪ್ರಭಾವ ಬೀರಿದೆಯೆಂದರೆ ಮಾತ್ರ ಬುದ್ಧಿಗೇಡಿಯ ಮಾತಾದೀತು," ಎಂದಿದ್ದಾನೆ ಸ್ಯಾಮುಎಲ್.

ಬೆಕೆಟ್ ಐದು ವರ್ಷದವನಿದ್ದಾಗ ಮಿಸ್ ಇಡಾ ಎಲ್ಸೀರ್ ಅವಳ ಬಾಲವಾಡಿಗೆ ಹೋದ. ಆ ಬಾಲವಾಡಿಯ ಸಹೋದರಿಯರನ್ನು ತನ್ನ 'ಮೋಲಿ' ಕಾದಂಬರಿಯಲ್ಲಿ ಚಿತ್ರಿಸಿದ್ದಾನೆ. ಅರ್ಲ್ಸ್‌ಫೋರ್ಟ್ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ. ಶಾಲೆಯಲ್ಲಿ ಆತ ಕಿತಾಪತಿಯ ಹುಡುಗ. ಆದರೆ ಶಿಕ್ಷಕರಿಲ್ಲದಿರುವುದನ್ನು ನೋಡಿ ಕಿತಾಪತಿ ಮಾಡುತ್ತಿದ್ದನಾದ್ದರಿಂದ ಅವರಿಂದ ಹೊಡೆತ ತಿಂದಿರಲಿಲ್ಲ. ತನ್ನ ಹದಿಮೂರನೆಯ ವಯಸ್ಸಿನಲ್ಲಿ ಪೊರ್ಟೋರಾ ರಾಯಲ್ ಶಾಲೆಯನ್ನು

ಸೇರಿದ. ಇಲ್ಲಿ ಆತನಿಗೆ ಒಳ್ಳೆಯ ಶಿಕ್ಷಣ ದೊರಕಿತೆಂದು ಹೇಳಿಕೊಂಡಿದ್ದಾನೆ. ಇಲ್ಲಿಯೇ ಆತ ಓರ್ವ ಉತ್ತಮ ಕ್ರಿಕೆಟ್ ಆಟಗಾರನೆಂದು ಹೆಸರು ಗಳಿಸಿದ. ವಿಶ್ವವಿದ್ಯಾಲಯದ ಆಟಗಾರರಲ್ಲಿ ಒಬ್ಬನಾಗಿದ್ದ. ಎಡಗೈ ಬ್ಯಾಟ್ಸ್‌ಮನ್ ಮತ್ತು ಬಲಗೈ ಬೌಲರ್‌ನೆಂದು ಖ್ಯಾತಿ ಪಡೆದ. ವಿಸ್ಡನ್ ಮಾಗರಿಷನ್ ಕ್ರಿಕೆಟ್ ಆಟಗಾರರ ಬೈಬಲ್. ಅವರಲ್ಲಿ ಹೆಸರು ಕಂಡುಬರುವ 'ನೊಬೆಲ್ ಪಾರಿತೋಷಕ' ವಿಜೇತರಲ್ಲಿ ಅವನೊಬ್ಬನೇ.

೧೯೨೩ರಲ್ಲಿ ಸ್ಯಾಮ್ಯುಎಲ್ ಟ್ರಿನಿಟಿ ಕಾಲೇಜನ್ನು ಸೇರಿದ. ಬರ್ಕ್ಲೀ, ದೆಕಾರ್ಟೆಗಳ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡುವ ಪ್ರಸಿದ್ಧ ತತ್ವಜ್ಞಾನಿ ಡಾ. ಎ. ಎ. ಲೂಸ್ ಅವನ ಗುರು. ಬೆಕೆಟ್ ಸ್ನೇಹಿತರನ್ನು ಆರಿಸಿಕೊಳ್ಳುತ್ತಿದ್ದ. ಒಂದು ಕ್ಷಣದಲ್ಲಿ ಬೇಕೆಂದರೆ ಎಲ್ಲರನ್ನೂ ಮೆಚ್ಚಿ ಮುಖಂಡನಾಗುತ್ತಿದ್ದ. ಬೇಡವೆಂದು ಕಂಡರೆ ಎಲ್ಲರನ್ನೂ ತೊರೆದು ಏಕಾಂಗಿಯಾಗುತ್ತಿದ್ದ. ಆಟ ಪಾಟಗಳಲ್ಲಿ ಮುಂದಿದ್ದ ಬೆಕೆಟ್ ಸ್ನೇಹಿತರ ಗುಂಪಿನಲ್ಲಿ ಎಂದೂ ಒಂದಾಗಿದ್ದಿಲ್ಲ. ಡಾ. ಎ. ಎ. ಲೂಸ್ ಹೇಳುತ್ತಾರೆ. "ಸ್ಯಾಮ್ಯುನಿಗೆ ಪ್ರಾಧ್ಯಾಪಕರ ಅವಶ್ಯಕತೆಯೇ ಬೀಳುತ್ತಿರಲಿಲ್ಲ. ಸಾದಾ ಹುಡುಗ. ಅತಿ ಕಡಿಮೆ ಮಾತನಾಡುವ ಅಂತರ್ಮುಖಿ. ವಿದ್ಯಾರ್ಥಿನಿಯರೊಡನೆ ಸಲಿಗೆ ಇಲ್ಲವೇ ಇಲ್ಲ."

ಆಧುನಿಕ ಭಾಷಾಭ್ಯಾಸವನ್ನು ಆಯ್ದುಕೊಂಡ. ರುಡ್‌ಮೋಸ್ ಬ್ರೌನ್ ಆ ವಿಷಯದ ಅಧ್ಯಾಪಕ. ಅವರ ವ್ಯಕ್ತಿತ್ವ ಘನವಾದುದು. ವಿದ್ಯಾರ್ಥಿಗಳಿಗಾಗಿ ತನ್ನ ಮನೆಯ ಬಾಗಿಲನ್ನು ಸದಾ ತೆರೆದಿಡುವ ಅವರ ವ್ಯಕ್ತಿತ್ವದಿಂದ ಬೆಕೆಟ್ ತುಂಬಾ ಪ್ರಭಾವಿತನಾದ. ಎರಡು ವರುಷಗಳ ವರೆಗೆ ಸಾಮಾನ್ಯ ವಿದ್ಯಾರ್ಥಿಯಾಗಿದ್ದ ಬೆಕೆಟ್ ಮೂರನೆಯ ವರ್ಷದಲ್ಲಿ ಪ್ರತಿಭಾಶಾಲಿಯಾದ. ಟ್ರಿನಿಯ ಫೌಂಡೇಶನ್ ಸ್ಕಾಲರ್‌ಶಿಪ್ಪನ್ನು ಪಡೆದ. ಇಟಾಲಿಯನ್, ಫ್ರೆಂಚ್, ಇಂಗ್ಲೀಷಿನಲ್ಲಿ ಪ್ರಥಮ ಸ್ಥಾನವನ್ನು ಗಳಿಸಿದ. ಅಭ್ಯಾಸದಲ್ಲಿ ಸಂಪೂರ್ಣ ತೊಡಗಿಕೊಂಡ ಸ್ಯಾಮ್ಯುಎಲ್ಲನ ವ್ಯಕ್ತಿತ್ವದಲ್ಲಿ ವ್ಯಕ್ತಿ ಮಹತ್ವದ ಬದಲಾವಣೆಗಳಾದವು. ವಾರಾಂತ್ಯದಲ್ಲಿ ಮನೆಗೆ ಹೋಗುವುದನ್ನು ಬಿಟ್ಟುಬಿಟ್ಟ. ಬೇಡವಾದಷ್ಟು ಮೌನಿಯಾದ. ಊಟ ಉಣಿಸುಗಳನ್ನು ತೀರಾ ಕಡಿಮೆ ಮಾಡಿದ. ತಾಯಿ ತಂದೆ ಅಣ್ಣನಿಂದಲೂ ತನ್ನನ್ನು ಬೇರೆಯೆಂದು ತಿಳಿದುಕೊಳ್ಳತೊಡಗಿದ. ಎಲ್ಲರಿಂದಲೂ ಮಾನಸಿಕವಾಗಿ ದೂರವಾದ. ಯಾವುದೇ ಸಭೆ, ಸಮಾರಂಭ, ಗೆಳೆಯರ



ಕೂಟಗಳಿಗೆ ಹೋಗುತ್ತಿರಲಿಲ್ಲ. ಅವನ ಸ್ನೇಹಿತ ಹೇಳುವಂತೆ, "ಬೆಕೆಟ್‌ನ ಗುರುತು ಎಲ್ಲರಿಗೂ ಇತ್ತು, ಆದರೆ ಪರಿಚಯ ಯಾರಿಗೂ ಇರಲಿಲ್ಲ."

ಆತನಿಗೆ ಫ್ರೆಂಚ್ ಕಾವ್ಯವೆಂದರೆ ಪಂಚಪ್ರಾಣ. ಡಾಂತೆ, ಡೆಕಾರ್ಟೆ, ಮ್ಯಾಕ್ಸ್ ಜಾಕೋಬ್, ವಿಲೇ ಗ್ರಿಫಿನ್, ರಿಮಿರಬಾಡ್ ಬಾಡ್ಲೇರ್ ಮತ್ತು ಎಪೋಲಿವರ್‌ನರನ್ನು ತದೇಕಚಿತ್ತದಿಂದ ಅಭ್ಯಾಸ ಮಾಡುತ್ತಿದ್ದ. ಆಕರ್ಷಕನೂ ಬುದ್ಧಿವಂತನೂ ಆಗಿದ್ದ ಅವನನ್ನು ಕಂಡರೆ ಹುಡುಗಿಯರು ಮುತ್ತುತ್ತಿದ್ದರು. ಮೈಮೇಲೆ ಬರುವ ಹುಡುಗಿಯರನ್ನು ಕಂಡರೆ ಅವನಿಗೆಂದೂ ಆಗದು. ಹುಡುಗಿಯರನ್ನು ಆರಿಸಿಕೊಂಡು ಸ್ನೇಹ ಬೆಳೆಯಿಸುವ ಅಧಿಕಾರ, ತಾಕತ್ತು ತನಗುಂಟೆಂದು ಅವನ ಭಾವನೆ. ಆದುದರಿಂದ ಬೇಕೆಂದೇ ಅವರನ್ನು ಅಸಡ್ಡೆಮಾಡುತ್ತಿದ್ದ. ಎಥ್ನಾ ಮ್ಯಾಕರ್ಥಿ ಎಂಬ ಎದೆಗಾರಿಕೆಯ ಹುಡುಗಿಯ ಹಿಂದೆ ಆತ ಕೆಲ ದಿನ ತಿರುಗಿದ. ಅವಳ ಆಧುನಿಕ ವೇಷ, ಜಿಜ್ಞ್ಮಮಾತು, ಆಡಂಬರವಿಲ್ಲದ ವ್ಯವಹಾರಗಳು ಅವನಿಗೆ ಸೇರಿಕೆಯಾಗಿದ್ದವು. ಅವನಿಗಿದ್ದ ಸವಲತ್ತು ಅವಳಿಗೂ ಇತ್ತು. ಆಕೆ ಅವನನ್ನು ಸಾಕಿದ ಪ್ರೀತಿಯ ನಾಯಿಯಂತೆ ನೋಡಿಕೊಂಡು ಸಂಬಂಧವನ್ನು ಕಡಿದುಕೊಂಡಳು! ಆಕೆಯನ್ನು ಕುರಿತು ಪ್ರೇಮಗೀತೆಗಳನ್ನು ಬರೆದ. 'ಮೊರ್ ಪ್ರಿಕ್ಸ್ ದ್ಯಾನ್ ಕಿಕ್ಸ್' ಎಂಬ ಗ್ರಂಥದಲ್ಲಿ ಅವಳನ್ನು ಪ್ರೇಮ ವಸ್ತುವನ್ನಾಗಿ ಮಾಡಿದ್ದಾನೆ. ಪ್ರತಿಭಾವಂತರಿಗೆ ಪ್ರೀತಿಸಿದವರೆಲ್ಲ ಸಿಕ್ಕರೆ ಇಷ್ಟಪಟ್ಟದೆಲ್ಲ ದೊರಕಿದರೆ ಕಲಾವಿಷ್ಕಾರದ ಅವಶ್ಯಕತೆಯೇ ಬೀಳುತ್ತಿರಲಿಲ್ಲವೇನೋ !

೧೯೨೭ರಲ್ಲಿ ಟ್ರಿನಿಟಿ ಕಾಲೇಜಿನಿಂದ ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಯಾಂಕವನ್ನು ಪಡೆದ. ದೊಡ್ಡದೊಂದು ಬಂಗಾರ ಪದಕ ದೊರಕಿತು. ಐವತ್ತು ಪೌಂಡ್ ಶಿಷ್ಯವೇತನವೂ ಸಿಕ್ಕಿತು. ರುಡ್‌ಮೋಸ್ ಬ್ರೌನರಿಗೆ ಬೆಕೆಟ್‌ನ ಸಾಧನೆ ತೃಪ್ತಿಯನ್ನು ಕೊಟ್ಟಿತು. ಆತನನ್ನು ಟ್ರಿನಿಟಿ ಕಾಲೇಜಿನಲ್ಲಿ ಅಧ್ಯಾಪಕನೆಂದು ಸೇರಿಸಬಯಸಿದರು. ಅದಕ್ಕೆ ಪೂರ್ವಭಾವಿಯಾಗಿ ಒಂಬತ್ತು ತಿಂಗಳ ಮಟ್ಟಿಗೆ ಕ್ಯಾಂಬೆಲ್ ಕಾಲೇಜಿನಲ್ಲಿ ಅಧ್ಯಾಪಕನಾಗಿ ಸೇರಿದ. ಮಧ್ಯರಾತ್ರಿಯ ವರೆಗೆ ವನ್ನು ಟ್ರಿನಿಟಿಯಲ್ಲಿ ಮಾಡಿಕೊಂಡಿದ್ದ. ಆದುದರಿಂದ ಸರಿಯಾದ ವೇಳೆಗೆ ವರ್ಗ ತೆಗೆದುಕೊಳ್ಳಲಾಗುತ್ತಿದ್ದಿಲ್ಲ. ಮಲಗುವ ಕೋಣೆಯಲ್ಲಿ ಅವನಿಗೆ ಬೇಸರ ಬರುತ್ತಿತ್ತು. ಮಕ್ಕಳನ್ನು ಬಯಲಲ್ಲಿ ಕರೆದುಕೊಂಡು ಹೋಗಿ ಕೂಡಿಸಿಕೊಂಡು ಪಾಠ ಹೇಳುತ್ತಿದ್ದ. ಪ್ರಾಂಶುಪಾಲರಿಗೆ ವಿಪರೀತ ಕೋಪ ಬರುತ್ತಿತ್ತು. "ಆ ಮಕ್ಕಳ ಭವಿಷ್ಯವನ್ನು ನಿಮ್ಮ ಕೈಯಲ್ಲಿ ಹಾಕಿದ್ದಾರೆ" ಎಂದು ಗರ್ಜಿಸುತ್ತಿದ್ದ. "ಅವರಿಗೆ ಭವಿಷ್ಯವಿಲ್ಲ. ದಪ್ಪತಲೆಯ ಶ್ರೀಮಂತ ಮಕ್ಕಳು!" ಎಂದು ಬೆಕೆಟ್ ಉತ್ತರಿಸುತ್ತಿದ್ದ. ೧೯೨೮–೩೦ರ ವರೆಗಿನ ಅವಧಿಗಾಗಿ ಏಕೋಲ್ ನಾರ್ಮಲ್ಲಿನಲ್ಲಿ ಪ್ರವೇಶ ದೊರಕಿತು. ಮ್ಯಾಕ್‌ಗ್ರೀವ್ ಅವನ ಸಹೋದ್ಯೋಗಿ. ಆತ ಅವನ ಜೀವನ ಪರ್ಯಂತ ಗೆಳೆಯನಾಗಿ ಉಳಿದ. ತರುಣ ಲೇಖಕರಿಗೂ ಕಲಾವಿದರಿಗೂ ಅವನದು ತುಂಬಾ ಪ್ರೋತ್ಸಾಹ. ಪ್ರಕಾಶಕರನ್ನೂ ಹಿರಿಯ ಲೇಖಕರನ್ನೂ ಕಿರಿಯರಿಗೆ ಪರಿಚಯ ಮಾಡಿಕೊಡುತ್ತಿದ್ದ. ಬೆಕೆಟ್‌ನಿಗೆ ಪ್ರಾಧ್ಯಾಪಕ ವೃತ್ತಿಯೇ ಒಗ್ಗುತ್ತಿರಲಿಲ್ಲ. ಮಾನಸಿಕ ಗೊಂದಲದಲ್ಲಿ ಮುಳುಗಿಬಿಡುತ್ತಿದ್ದ. ಭಾವಪರವಶತೆ, ಭಾವಾವೇಶಗಳಿಗೆ ಸಿಲುಕಿ ಸ್ತಿಮಿತ ತಪ್ಪಿದವನಂತೆ ನಡೆದುಕೊಳ್ಳುತ್ತಿದ್ದ. ರಿಚರ್ಡ್ ಎಲ್ಡಿಂಗ್‌ಟನ್ ಎಂಬ ಅವನ ಸ್ನೇಹಿತ, "ಬೆಕೆಟ್ ಐರ್ಲಂಡಿನ ಭವ್ಯ ಹುಚ್ಚ! ಊದಲು ಬಾರದ ಕೊಳಲನ್ನು ಬೆಳಗಿನವರೆಗೂ ಊದುತ್ತಿದ್ದ!" ಎಂದಿದ್ದಾನೆ. ಬದುಕಿನಲ್ಲಿ ಸಾವನ್ನು ಕುರಿತು ಹೆಚ್ಚು ಚಿಂತಿಸಿದ ಲೇಖಕನೀತ. ಆತ್ಮಹತ್ಯೆಗೆ ತಾತ್ವಿಕ ತಳಹದಿಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದ. ಮಯಕೋವಸ್ಕಿ, ಯೆಸೆನಿನ್ ಕ್ರಿವೆಲ್, ಹಾರ್ಟ್‌ಗ್ರೇನ್, ಹ್ಯಾರಿ ಕ್ರಾಸ್ಬಿಯಂಥ ಪ್ರತಿಭಾವಂತರು ಆತ್ಮಹತ್ಯೆ ಏಕೆ ಮಾಡಿಕೊಂಡರು? ಅವರೆಲ್ಲ ಹೇಡಿಗಳೆ? ಹುಚ್ಚರೆ? ಆತ್ಮಹತ್ಯೆ ಮಾಡಿಕೊಂಡ ಮಹಾಪುರುಷರ ಚರಿತ್ರೆ ಆತನನ್ನು ದಿನದಿಂದ ದಿನಕ್ಕೆ ಹೆಚ್ಚು ಅಂತರ್ಮುಖಿಯಾಗುವಂತೆ ಮಾಡಿತ್ತು. ಈ ದೃಷ್ಟಿಯಿಂದ ಜರ್ಮನಿಯ ತತ್ವಜ್ಞಾನಿ ಶಾಪೆನ್‌ಹಾವರ್ ಆತನ ಪ್ರಿಯ ತತ್ವವೇತ್ತ. ಬೇಸರ

ಪ್ಯಾರಿಸ್ಸಿನಲ್ಲಿ ಲೇಖಕರ ಎರಡು ಗುಂಪುಗಳಿದ್ದವು. ಒಂದು ಜೇಮ್ಸ್ ಜಾಯ್ಸ್ ಮತ್ತು ಅವನ ಅನುಯಾಯಿಗಳದು, ಎರಡನೆಯದು ಹೆನ್ರಿ ಮಿಲ್ಲರ್, ವಾಲ್ಟರ್ ಲಾವೆನ್‌ಫೆಲ್ಸ್, ಮೈಕೇಲ್ ಫ್ರೆಂಕಲ್‌ರದು.

ಬೆಕೆಟ್ ಜಾಯ್ಸ್‌ನ 'ಯುಲಿಸಿಸ್' ಓದಿದ್ದ. ಇಪ್ಪತ್ತನೆ ಶತಮಾನದ ಸರ್ವಶ್ರೇಷ್ಠ ಕಾದಂಬರಿಕಾರ ಜಾಯ್ಸ್ ಎಂದು ಆತ ತಿಳಿದಿದ್ದ. ಪ್ರಜ್ಞಾಪ್ರವಾಹ ಶೈಲಿಯ ಜಾಯ್ಸ್‌ನ ಪರಿಚಯವಾಯಿತು. ಆತನನ್ನು ಬೆಕೆಟ್ ಬೇಡವಾದಷ್ಟು ಹಚ್ಚಿಕೊಂಡ. ತಪ್ಪಿಸಿಕೊಳ್ಳಲಾಗದಷ್ಟು ಮಾನಸಿಕ ಅವಲಂಬನೆ ಬೆಳೆಯಿತು. ಜಾಯ್ಸ್‌ನಾದರೋ ಯಾರನ್ನೂ ಆತ್ಮೀಯತೆಯಿಂದ ನೋಡಿಕೊಳ್ಳದ ವ್ಯಕ್ತಿ. "ನನ್ನ ಹೆಂಡತಿ, ಮಕ್ಕಳಿಗೆ ನನ್ನ ಪ್ರೀತಿ ಮೀಸಲು, ಅದರಾಚೆ ಕೊಡುವಷ್ಟು ಪ್ರೀತಿ ನನ್ನ ಬಳಿ ಇಲ್ಲ" ಎಂದು ಆತ ಸ್ಪಷ್ಟವಾಗಿ ಹೇಳಿಬಿಟ್ಟಿದ್ದ. ಜಾಯ್ಸ್ ಉಪಯೋಗಿಸಿಕೊಳ್ಳುತ್ತಿದ್ದ; ಪ್ರೀತಿಸುತ್ತಿದ್ದಿಲ್ಲ. ಜಾಯ್ಸ್‌ನ ಮಗಳು ಲೂಸಿಯಾ ಬೆಕೆಟ್‌ನನ್ನು ಪ್ರೀತಿಸಿದಳು. ಜಾಯ್ಸ್‌ಗೆ ಬೆಕೆಟ್‌ನನ್ನು ಅಳಿಯನನ್ನಾಗಿ ಮಾಡಿಕೊಳ್ಳುವ ಮನಸ್ಸು. "ತಂಗಿಯಂತೆ ನೋಡಿಕೊಂಡವಳನ್ನು ಮದುವೆಯಾಗಲಾರೆ," ಎಂದ ಬೆಕೆಟ್. "ಮನೆಗೆ ಬರಬೇಡ" ಎಂದ ಜಾಯ್ಸ್. ಅಲ್ಲಿಗೆ ಅವರ ಸಂಬಂಧ ಕಡಿದು ಬಿದ್ದಿತು. ಆದರೆ ೧೯೩೯ರಲ್ಲಿ ಬೆಕೆಟ್, "ಜಾಯ್ಸ್ ನನ್ನ ದೃಷ್ಟಿಯಲ್ಲಿ ಒಂದು ನೈತಿಕ ಆದರ್ಶ. ನನ್ನ ಸಾಹಿತ್ಯದ ಮೇಲೆ ಅವನ ಪ್ರಭಾವ ಅಗಾಧವಾಗಿದೆ. ಸಾಹಿತ್ಯದಲ್ಲಿ ಸಾಹಿತ್ಯ ತತ್ವವನ್ನು ಅವನು ನನಗೆ ತಿಳಿಸಿದ್ದಾನೆ," ಎಂದಿದ್ದಾನೆ.

ಎರಡನೆ ಗುಂಪಿನವರು 'ಮೃತ್ಯು ಚಳುವಳಿ' ಎಂಬ ಸಾಹಿತ್ಯದ ಮಾರ್ಗದ ಪ್ರವರ್ತಕರು. "ಆಧುನಿಕ ಯುಗ ನಿರ್ಜೀವವಾಗಿದೆ. ಶುದ್ಧ ಕಲೆ ಆವಿರ್ಭವಿಸಬೇಕಾಗಿದೆ. ಪಶ್ಚಿಮದ ಜಗತ್ತು ಸಮುದಾಯದ ಆತ್ಮಹತ್ಯೆಯನ್ನು ಎತ್ತಿ ಹಿಡಿಯಲಾರದು. ಯುದ್ಧೋತ್ತರ ಜಗತ್ತಿಗೆ ಪಕ್ಕನೇ ಸಿಕ್ಕುವ ತತ್ವ ಆತ್ಮಹತ್ಯೆಯದು. ಆದರೆ ನಾವು ಯುದ್ಧದ ಅನಿಷ್ಟಗಳನ್ನು ಸಹಿಸಿಕೊಳ್ಳುವ ತತ್ವಕ್ಕಾಗಿ ತಡಕಾಡಬೇಕಾಗಿದೆ. ಮನಸ್ಸಿನ ಆರು ಕೃತಿಸ್ಥಿತಿ ಸ್ಥಾವರಗಳಲ್ಲಿ ಮಡುಗಿರುವ ಭಾವಗಳನ್ನೆಲ್ಲ ಸಾಹಿತ್ಯದಲ್ಲಿ ತೋಡಿಕೊಂಡು ಶುದ್ಧ ಸಾಹಿತ್ಯಕ್ಕೆ ಎಡೆಮಾಡಿಕೊಳ್ಳಬೇಕಾಗಿದೆ" ಎಂಬ ಅವರ ಮಾತು ಬೆಕೆಟ್‌ನಿಗೆ ಒಪ್ಪಿಗೆಯಾಗುತ್ತಿದ್ದರೂ ನಿರಾಶಾವಾದಿಯಾದ ಶಾಪೆನ್‌ಹಾವರನ ವಿಚಾರಗಳನ್ನು ತಿರಸ್ಕರಿಸಲು ಅವನ ಬುದ್ಧಿ ಒಪ್ಪುತ್ತಿರಲಿಲ್ಲ.

ಆತ್ಮಹತ್ಯೆಯಲ್ಲ, ಆತ್ಮಸಂರಕ್ಷಣೆಯನ್ನು ಸಾಹಿತ್ಯ ಒದಗಿಸಿಕೊಡಬೇಕೆಂಬುದು ವಿಚಾರವಂತರ ಆಸೆ. ತನ್ನಲ್ಲಿಯೇ ತಾನು ಲೀನನಾಗಿ ಸಮಾಜವನ್ನು ಅದರೊಟ್ಟಿಗೆ ಬಿಟ್ಟು ಆತ್ಮಾಭಿವ್ಯಕ್ತಿಯನ್ನು ಸಾಹಿತ್ಯ ಸಾಧಿಸಿದರೆ ಸಂನ್ಯಾಸಿ ಏಕೆ ಆಗಬಾರದೆಂಬ ಸಮಸ್ಯೆ ಏಳುತ್ತದೆ. ಸಮಾಜನಿಷ್ಠನಾಗಿ ಮಾತ್ರ ಸಾಹಿತಿ ಬದುಕಿದರೆ ಆತ್ಮವಂಚನೆ ಮಾಡಿಕೊಳ್ಳಲು ಸಾಧ್ಯತೆಯೂ ಉಂಟು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಅರ್ನಾಲ್ಡ್ ಜೀಲಿಂಕ್ಸ್‌ನ ವಿಚಾರ ಬೆಕೆಟ್‌ನ ನೆರವಿಗೆ ಬಂತು. ಮೂರು ಶತಮಾನಗಳ ಹಿಂದೆಯೇ ಆತ ಹೊಸದೊಂದು ವಿಚಾರವನ್ನು ಹೇಳಿದ್ದ. ತನ್ನ ಮನಸ್ಸನ್ನು ವ್ಯವಸ್ಥಿತಗೊಳಿಸಿಕೊಂಡರೆ ಬಾಹ್ಯ ಸ್ವಾತಂತ್ರ್ಯವೂ ದೊರಕುತ್ತದೆ. ಮನಸ್ಸನ್ನು ಪ್ರತಿಕ್ರಿಯೆಗಳಿಂದ ಬಿಡುಗಡೆಮಾಡಿಕೊಳ್ಳುವುದೊಂದೇ ಬುದ್ಧಿವಂತನಿಗಿರುವ ಸಾಧ್ಯತೆ. ಜಗತ್ತು ಅಂದರೇನು? ದೇಹಕ್ಕೆ ಸಂಬಂಧಿಸಿದ್ದೆಂದೇ ಅರ್ಥ. ವಿವೇಕವಿದ್ದವನು ದೇಹದ ಬಯಕೆಯ ವಿರುದ್ಧ ಹೋರಾಡುವುದಿಲ್ಲ. ಯಾಕೆಂದರೆ ಆ ಹೋರಾಟ ಮುಖ್ಯ ಗುರಿಯಿಂದ ನಮ್ಮನ್ನು ಎಲ್ಲೆಲ್ಲಿಯೋ ಒಯ್ದುಬಿಡುತ್ತದೆ.

ಬೆಕೆಟ್ ತನ್ನ ಪರಿಸರದ ವಿಷಯದಲ್ಲಿ ತೀವ್ರ ಸಂವೇದಿಯಾಗಿದ್ದ. ಸಂಬಂಧಿಕರು, ಸ್ನೇಹಿತರು, ಪರಿಚಿತರು, ಒಟ್ಟಿನಲ್ಲಿ ಅವಶ್ಯಕತೆಯಿರುವವರಿಗೆಲ್ಲ ಹಿಂದೆ ಮುಂದೆ ನೋಡದೆ ಸಹಾಯ ಮಾಡುತ್ತಿದ್ದ. ಆದರೆ ತನ್ನ ಅಧಿಕಾರದ ಮನೆಯ ಹಣವನ್ನು ಕೇಳುವಾಗಲೂ ತಪ್ಪಿತಸ್ಥನೆಂದು ಭಾವಿಸುತ್ತಿದ್ದ! ಅನಾಸಕ್ತಿಯಿಂದ ಸಮಾಜವನ್ನು ಆಸಕ್ತಿಯಿಂದ ಆತ್ಮವನ್ನು ನಿರೀಕ್ಷಿಸುವುದನ್ನು ಸಾಹಿತಿ ಕಲಿತುಕೊಳ್ಳಬೇಕಾಗುತ್ತದೆ ಎಂದಿದ್ದಾನೆ ಬೆಕೆಟ್. ಈ ತತ್ವವನ್ನು ೧೯೩೩ರಲ್ಲಿ ಬರೆದ ತನ

‘ಮರ್ಫಿ’ ಕಾದಂಬರಿಯಲ್ಲಿ ಪ್ರತಿಪಾದಿಸಿದ್ದಾನೆ. ಸಮಾಜದಿಂದ ಹೊರಗಿದ್ದು ಸಮಾಜವನ್ನು ಮನಸ್ಸಿನಲ್ಲಿ ತುಂಬಿಕೊಳ್ಳುವ ಅಸಾಧ್ಯ ಕೆಲಸವನ್ನು ಬೆಕೆಟ್ ಸಾಧಿಸಿತೋರಿಸಿದ್ದಾನೆ.

ಪ್ಯಾರಿಸ್ಸಿನ ನೈಟ್‌ಕ್ಲಬ್ಬುಗಳಲ್ಲಿ ಬೆಕೆಟ್ ತನ್ನ ಬಹುಕಾಲವನ್ನು ಕಳೆದ. ಒಂದು ಕ್ಲಬ್ಬು ಮುಚ್ಚಿದ ಮೇಲೆ ಮತ್ತೊಂದು ಕ್ಲಬ್ಬಿಗೆ ಸಾಗುತ್ತಿದ್ದ. ಸಾಹಿತ್ಯ ವಿಮರ್ಶೆಯನ್ನು ನಡೆಸುವ ಮಧ್ಯಮ ವರ್ಗದ ಸಾಹಿತಿಗಳಿಗೆ ಮನೆಗಳಲ್ಲಿ ಅನುಕೂಲ ವಿರುತ್ತಿರಲಿಲ್ಲ; ಹಾಗಾಗಿ, ಬೆಚ್ಚಗಿನ ಕ್ಲಬ್ಬುಗಳಲ್ಲಿ ಅವರು ವೇಳೆಯನ್ನು ಕಳೆಯುತ್ತಿದ್ದರು. ಬೆಕೆಟ್‌ನ ಈ ಮಧ್ಯರಾತ್ರಿಯ ಕೆಫೆಯ ಜೀವನವನ್ನು ಜುನಾ ಬಾರ್ನೆಸ್ ತನ್ನ ‘ನೈಟ್‌ಹುಡ್’ ಎಂಬ ಕಾದಂಬರಿಯಲ್ಲಿ ಚಿತ್ರಿಸಿದ್ದಾಳೆ. ಬೆಕೆಟ್ ತನ್ನ ಒಂದು ಸಾವಿರ ಫ್ರಾಂಕ್ ಬಹುಮಾನಿತ ‘ಹೋರೋಸ್ಕೋಪ್’ ಎಂಬ ಕೃತಿಯನ್ನು ಇಂಥದೇ ಪರಿಸರದಲ್ಲಿ ಒಂದೇ ರಾತ್ರಿಯಲ್ಲಿ ೧೯೩೦ ರಲ್ಲಿ ಬರೆದು ಮುಗಿಸಿದ. ಇದರ ಪ್ರತಿಯೊಂದನ್ನು ಬೆಕೆಟ್ ತನ್ನ ತಾಯಿ–ತಂದೆ ಕಳಿಸಿದ್ದ. ಅವರು ಅದನ್ನು ಯಾರಿಗೂ ಸಿಗದಷ್ಟು ಎತ್ತರದ ಹಲಗೆಯ ಮೇಲೆ ಸುರಕ್ಷಿತವಾಗಿ ಮಡಗಿದರು! ಅವನ ಫ್ರಾಸ್ಟ್‌ನ ಬಗೆಗಿನ ಪ್ರಬಂಧವು ವಿಮರ್ಶಕರ ಮೆಚ್ಚುಗೆಯನ್ನು ಪಡೆದಿತ್ತು.

೧೯೩೦ರಲ್ಲಿ ಅವನು ಟ್ರಿನಿಟಿ ಕಾಲೇಜಿನಲ್ಲಿ ಫ್ರೆಂಚ್ ಭಾಷೆಯ ಸಹ ಉಪಾಧ್ಯಾಯನಾಗಿ ಸೇರಿಕೊಂಡ. ಇದು ಅತಿ ಗೌರವದ ಸ್ಥಾನ; ಘನತೆಯ ಪ್ರಶ್ನೆ. ಆದರೆ ಬೆಕೆಟ್‌ನಿಗೆ ಡಬ್ಲಿನ್ ಸೇರುತ್ತಿರಲಿಲ್ಲ. ಐರ್ಲಂಡಿನವರು ಸಣ್ಣ ಮನಸ್ಸಿನವರು; ವ್ಯಕ್ತಿಸ್ವಾತಂತ್ರ್ಯವನ್ನು ಸಹಿಸದವರು–ಎಂಬ ಅಭಿಪ್ರಾಯ ಬೆಕೆಟ್‌ನಿಗೆ ಬಂದಿತ್ತು. ಡಬ್ಲಿನ್ ಜೀವನ ಬೇಸರ ತಂದಿತ್ತು. ಆತ ಇದೇ ಹೊತ್ತಿಗೆ ಫ್ರಾನ್ಸಿನ ಪ್ರಸಿದ್ಧ ಕಾದಂಬರಿಕಾರರನಾದ ರೇನಾ-ರ್ಡ್‌ನನ್ನು ಕುರಿತು ವಿಶೇಷ ಅಭ್ಯಾಸ ಮಾಡಿದ. ತನ್ನೊಳಗೇ ತಾನು ಉಳಿದು, ತನ್ನನ್ನೇ ತಾನು ನೋಡಿಕೊಳ್ಳುತ್ತ ಸುತ್ತಲಿನ ಜಗತ್ತನ್ನು ಸಮಾಧಾನದಿಂದ, ತೃಪ್ತಿಯಿಂದ ಹೇಗೆ ನೋಡಬಹುದು ಎಂಬುದನ್ನು ರೇನಾರ್ಡ್ ಬದುಕಿ ತೋರಿಸಿದ್ದ. ತನ್ನನ್ನೇ ಅತಿ ತೀಕ್ಷ್ಣ ವಿಮರ್ಶೆಗೆ ಒಳಪಡಿಸಿಕೊಳ್ಳುವ ಅವನ ಪ್ರತಿಭೆಗೆ ಬೆಕೆಟ್ ಮಾರುಹೋದ. ರೇನಾರ್ಡನ ಕಾದಂಬರಿಯ ಪಾತ್ರಗಳಿಗೂ ದಿನಾಲು ನಮ್ಮ ಕಣ್ಣೆದುರು ಹಾಯ್ದು ಹೋಗುವ ಜನಕ್ಕೂ ಯಾವ ಅಂತರವೂ ಉಳಿಯದಷ್ಟು ಸ್ವಾಭಾವಿಕವಾದ ಚಿತ್ರಣ ರೇನಾರ್ಡ್‌ಗೆ ಸಾಧ್ಯವಾಗಿತ್ತು. “ನಾಟಕದ, ಕಾದಂಬರಿಯ ಪಾತ್ರಗಳಲ್ಲಿ ಕೃತ್ರಿಮತೆ ಕಾಣದಂತೆ ನೋಡಿಕೊಳ್ಳಬೇಕಾದರೆ ಸಾಹಿತಿಗೆ ಜನಜೀವನದ ನಿಕಟ ಪರಿಚ



ಯುವಿರಬೇಕಾಗುತ್ತದೆ." ಪಾತ್ರಗಳು ನಾಟಕ ರಂಗದಿಂದ ಕ್ಷಣಕ್ಷಣಕ್ಕೆ ಮಾಯವಾಗುವುದು ಒಂದು ಕುತೂಹಲದ ವಿಷಯ. ಅವನ ಜಗತ್ಪ್ರಸಿದ್ಧ ನಾಟಕವಾದ 'ವೇಟಿಂಗ್ ಫಾರ್ ದ ಗಾಡೋ' ಮತ್ತು 'ಕ್ರಾಪ್ಸ್ ಲಾಸ್ಟ್ ಟೇಪ್'ಗಳಲ್ಲಿನ ಅತಿ ಶಯದ ಸ್ವಾಭಾವಿಕತೆಗೆ ಈ ವಿಚಾರವೇ ಕಾರಣ.

ನೋಬಲ್ ಪಾರಿತೋಷಕ ವಿಜೇತನಾದ ಡಬ್ಲ್ಯೂ.ಬಿ. ಯೀಟ್ಸ್‌ನ ಸಹೋದರನಾದ ಜೆ.ಬಿ. ಯೀಟ್ಸ್ ಪ್ರಸಿದ್ಧ ಚಿತ್ರಕಾರ; ಆತ ಬೆಕೆಟ್‌ನ ಸ್ನೇಹಿತ. ಕವಿ ಯೀಟ್ಸ್‌ನನ್ನು ಕಂಡರೆ ಬೆಕೆಟ್‌ನಿಗೆ ಅಷ್ಟಕ್ಕಷ್ಟೇ. ಆತ ತೀರಾ ಸಂಸಾರಸ್ಥನೆಂದೂ ಐರ್ಲೆಂಡಿನವರನ್ನು ಸುಳ್ಳು ಸುಳ್ಳೇ ಸಂತೋಷ ಪಡಿಸುವುದಕ್ಕಾಗಿ ಒಣ ಹೊಗಳಿಕೆಗಳನ್ನು ಮಾಡು ತ್ತಿದ್ದನೆಂದೂ ಬೆಕೆಟ್ ಹೇಳಿದ್ದಾನೆ."

ಒಟ್ಟಿನಲ್ಲಿ ಡಬ್ಲಿನ್, ಅದರಂತೆ ಪ್ರಾಧ್ಯಾಪಕ ವೃತ್ತಿ, ಎರಡೂ ಬೇಸರ ತಂದವು ಬೆಕೆಟ್ಟನಿಗೆ. ಅವನು ಎಂಥ ಶಿಕ್ಷಕನಾಗಿದ್ದನು ಎಂಬುದಕ್ಕೆ ಅವನ ವಿದ್ಯಾರ್ಥಿನಿಯೊಬ್ಬಳ ಹೇಳಿಕೆ:

"ಬಹಳ ಸುಂದರನಾದ ಪ್ರಾಧ್ಯಾಪಕ, ಮೊದ ಲನೆಯ ದಿನ ವರ್ಗಕ್ಕೆ ಹೋದಾಗ ಅವನನ್ನು ಕಂಡು ರೋಮಾಂಚನವಾಯಿತು. ಈ ಸುಂದರ ಯುವಕ ನಮ್ಮ ಮೇಲೆ ಕಣ್ಣನ್ನು ನಾಟಿಸುತ್ತಲೇ ಇರಲಿಲ್ಲ! ಅವನ ಕಣ್ಣುಗಳಲ್ಲಿ ನಮ್ಮ ಗುರುತಿನ ಚಿಹ್ನವೇ ತೋರುತ್ತಿರಲಿಲ್ಲ. ಯಾರೂ ಇಲ್ಲದ ವರ್ಗದಲ್ಲಿ ಪಾಠ ಹೇಳುವವನಂತೆ ಕಲಿಸಿ ಹೋಗು ತ್ತಿದ್ದ! ಆತನಿಗೆ ಪಾಠ ಹೇಳುವುದರಲ್ಲಿಯೇ ಆಸಕ್ತಿ ಇದ್ದಂತಿರಲಿಲ್ಲ. ತನಗೆ ಆಯಾ ಕವಿಗಳ ಬಗ್ಗೆ ಅನಿಸಿದ್ದನ್ನು ತನ್ನಷ್ಟಕ್ಕೇ ಹೇಳಿಕೊಳ್ಳುವಂತಿತ್ತು. ಆತ ಏನು ಬರೆದಿದ್ದಾನೆ ಎಂಬುದು ನಮಗೆ ತಿಳಿದಿ ರಲಿಲ್ಲ. ಆದರೆ ಆತ ಓರ್ವ ಪ್ರತಿಭಾವಂತ ವ್ಯಕ್ತಿ ಯೆಂದು ಮಾತ್ರ ಅನಿಸುತ್ತಿತ್ತು."

ಬೆಕೆಟ್‌ನ ಅನಿಸಿಕೆ:

"ಆ ಹುಡುಗಿಯರನ್ನು ಕಂಡರೆ ನನಗೆ ಸಮಾ ಧಾನವಾಗುತ್ತಿರಲಿಲ್ಲ. ಮಂಟಪ ಮತ್ತು ಶಾಲೆ ಗಳ ಮಧ್ಯೆ ಓಡಾಡಿ, ಚೆಕ್ಕಂದ ಆಡುವ ಅವರಿಗೆ ಪಾಠವಾದರೂ ಏಕೆ ಬೇಕು? ಒಮ್ಮೊಮ್ಮೆ 'ಹೊರಗೆ ಬಿದ್ದು ಹೋಗಿ; ವರ್ಗವನ್ನು ಖಾಲಿ ಮಾಡಿ' ಎಂದು ಗದ್ದರಿಸುವಾ ಎನಿಸುತ್ತಿತ್ತು." ತೆಗೆದು ಕೊಳ್ಳುವ ಸಂಬಳಕ್ಕೇ ಅನ್ಯಾಯವಾಗಬಾರದೆಂದು ಆತ ಪಾಠ ಹೇಳಿ, ಪಾಠ ಹೇಳಿದ ಪ್ರಾಯಶ್ಚಿತ್ತ ಕ್ಕಾಗಿ ರಾತ್ರಿ ವಿಪರೀತ ಕುಡಿದುಬಿಡುತ್ತಿದ್ದನಂತೆ.

ಕಲಿಸುವ ಪಂಥ ವೃತ್ತಿ ಬೇಸರ ತಂದಿತ್ತು. ಮನಸ್ಸು ಕುಗ್ಗಿ ಹೋಗಿತ್ತು. ಪ್ಯಾರಿಸ್ಸಿನ ಸ್ವತಂತ್ರ, ಸ್ವಚ್ಛಂದ ವಾತಾವರಣ ಮನಸ್ಸನ್ನು ಸೆಳೆಯುತ್ತಿತ್ತು. ಕವಿತೆ ಬರೆಯುವ ಒತ್ತಡ ಬಲವತ್ತರವಾಗಿತ್ತು. ಎದೆ ದುಗುಡದಿಂದ ಕಂಗಾಲಾಗಿತ್ತು.

ಆತ ೧೯೩೧ರಲ್ಲಿ ಜರ್ಮನಿಗೆ ಹೋದ. ಅಲ್ಲಿಂದಲೆ ತಂತಿಯ ಮೂಲಕ ರಾಜೀನಾಮೆ ಕೊಟ್ಟು ಕಳಿಸಿದ. ಎಂಟೇ ದಿನಗಳ ಮೊದಲು ಆತನಿಗೆ ಎಂ.ಎ. ಪದವೀ ಯನ್ನು ದಯಪಾಲಿಸಲಾಗಿತ್ತು. ರಾಜೀನಾಮೆ ಕೊಟ್ಟು ತಂದೆತಾಯಿಂದಿರಿಗೂ ಸ್ನೇಹಿತರಿಗೂ ತಾನು ದ್ರೋಹ ಬಗೆದೆನೆಂದು ಆತ ಬೇಸರಪಟ್ಟುಕೊಂಡ. ಕಲಿಸುವುದೊಂದು ನಿಷೇಧಾತ್ಮಕ ಕ್ರಿಯೆ; ಕಲಿ ಯುವುದು ವಿಧಾಯಕ ಕೆಲಸ. ವ್ಯಕ್ತಿ ತಾನು ಒಪ್ಪಿ ಕೊಂಡ ಜೀವನ ಶ್ರದ್ಧೆಗಳಿಗೆ ವ್ಯತಿರಿಕ್ತವಾಗಿ ನಡೆದು ಕೊಳ್ಳಬೇಕಾದ ಶಿಕ್ಷಕ ವೃತ್ತಿ ಪ್ರಾಮಾಣಿಕರಿಂದ ನಿಭಾಯಿಸಲು ಸಾಧ್ಯವಿಲ್ಲವು ಎನ್ನುತ್ತಿದ್ದ ಬೆಕೆಟ್ಟನ ಜೀವನ ಸಿದ್ಧಾಂತಕ್ಕೆ ಈ ರಾಜೀನಾಮೆ ಪ್ರಾತಿನಿಧಿಕ ಉದಾಹರಣೆ.

ಆದರೆ ಬೆಕೆಟ್ ತನ್ನ ಸ್ನೇಹಿತರಿಗೆ ಒಂದು ಮಾತು ಹೇಳುತ್ತಾನೆ: "ಒಂದು ಕಾರ್ಯ ಘಟಿಸುತ್ತದೆ. ನಾವು ಅದನ್ನು ಕುರಿತು ಪೂರ್ವಾನ್ವಯವಾಗಿ ವಿಚಾರ ಮಾಡಿದಾಗ ಅಥವಾ ಉಳಿದವರೊಡನೆ ಚರ್ಚಿಸಿದಾಗ ಕಾರಣಗಳನ್ನು ಹುಡುಕುತ್ತೇವೆ, ಹೇಳುತ್ತೇವೆ."

ಅವನಿಗೆ ಜರ್ಮನಿಯಲ್ಲಿ ಒಂದು ಸಂಶಯಾ ಸ್ಪದವಾದ ಆಕರ್ಷಣೆಯಿತ್ತು. ಪೆಗ್ಗಿ ಸಿಂಕ್ಲೇರ್ ಎಂಬ ಚೆಂದ ಸ್ವಭಾವದ ಚೆಲುವೆಯಾದ ಹುಡುಗಿ. ಆಕೆ ಬೆಕೆಟ್ ಕುಟುಂಬಕ್ಕೆ ಸೇರಿದವಳು. ಆದರೆ ಬೆಕೆಟ್‌ನ ತಾಯಿಗೆ ಮಗನು ಅವಳ ಸಂಬಂಧ ಹಚ್ಚಿಕೊಳ್ಳುವುದು ಬೇಕಿರಲಿಲ್ಲ. ಮಹಾಯುದ್ಧದ ಕಾಲದಲ್ಲಿ ಜರ್ಮನಿ ಸಂಪೂರ್ಣ ನೈತಿಕ ಅಧಃಪತ ನಕ್ಕೀಡಾಗಿದೆಯೆಂದು ಐರ್ಲೆಂಡಿನವರ ಅಭಿಪ್ರಾಯ ವಾಗಿತ್ತು. ಪೆಗ್ಗಿ ಹಸರುಗಣ್ಣಿನ ಹುಡುಗಿ. ಅವಳು ಜರ್ಮನ್ ತರುಣನೊಬ್ಬನಲ್ಲಿ ಅನುರಕ್ತಳಾಗಿದ್ದಳು.

ವಿಧಿ ಇಬ್ಬರಿಂದಲೂ ತಪ್ಪಿಸಿ ಅವರಿಗೆ ಅಕಾಲ ಮೃತ್ಯುವನ್ನು ತಂದೊಡ್ಡಿತು ! ಬೆಕೆಟ್‌ನ ಮತ್ತೊಂದು ಪ್ರೇಮಪ್ರಕರಣ ಚರಿತ್ರೆಯಿಲ್ಲದೇ ಹೋಯಿತು.

ಕೆಲ ದಿನ ಜರ್ಮನಿಯಲ್ಲಿದ್ದು ಪ್ಯಾರಿಸ್ಸಿಗೆ ಮರಳಿದ. ಪ್ಯಾರಿಸ್ ಸಾಹಿತ್ಯ ಚಟುವಟಿಕೆಗಳ ಕೇಂದ್ರವಾದದ್ದರಿಂದ ಅಲ್ಲಿ ಪತ್ರಿಕೆಗಳಿಗೆ ಬರೆದು ಬದುಕಬಹುದೆಂದುಕೊಂಡ. ಪರಿಸ್ಥಿತಿ ಹಾಗಿರಲಿಲ್ಲ. ಆ ಕಾಲದ ಜನಕ್ಕೆ ಎಂಥ ಸಾಹಿತ್ಯ ಬೇಕೆಂಬುದಕ್ಕೆ ಪತ್ರಿಕಾ ಸಂಪಾದಕರಿಗೆ ಸರಿಯಾದ ಕಲ್ಪನೆಯಿಲ್ಲದ್ದು, ಸಾಹಿತ್ಯದಲ್ಲಿ 'ಆತ್ಮಾಭಿವ್ಯಕ್ತಿವಾದಿಗಳು' (Surrealits) ಗೊಂದಲವನ್ನೇ ಎಬ್ಬಿಸಿದ್ದರು. ಜಾಯ್ಸ್‌ನ ಪೂಜೆ ಒಂದು ಕಡೆ ವೈಭವದಿಂದ ಸಾಗಿತ್ತು. ಹೆಸರು ಗಳಿಸಿದವರ ಕಾಲವಾಗಿತ್ತು: ಹೆಸರುಗಳಿಸುವವರದಲ್ಲ. ಒಮ್ಮೆ ಲೋಪೆನ್‌ಫೆಲ್ಸ್ ಆ ಕಾಲಕ್ಕೆ ಬೇಕಾದ ಸಾಹಿತ್ಯವನ್ನು ಕುರಿತು ಭಾಷಣ ಬಿಗಿಯುತ್ತಾ, "ಬೆಕೆಟ್ ಜಾಯ್ಸ್‌ನ ಅನುಕರಣೆ ಮಾಡುವಷ್ಟು ನೀಸು ಎರಡನೆಯ ದರ್ಜೆಯ ಸಾಹಿತಿಯಲ್ಲ; ಮಹಾಪ್ರತಿಭಾವಂತ!" ಎಂದಿದ್ದ.

ಪ್ಯಾರಿಸ್ಸಿನಲ್ಲಿ 'ಎನಾನಿಮಸ್' ಎಂಬ ಪತ್ರಿಕೆ ಹೊರಡುತ್ತಿತ್ತು. ಅದರಲ್ಲಿ "ಈ ಯುಗದಲ್ಲಿ ಎಲ್ಲರೂ ನೈತಿಕ ಸ್ಥೈರ್ಯವನ್ನು ಕಳೆದುಕೊಂಡಿದ್ದಾರೆ. ಕಲಾವಿದರು ಅನಾಮಿಕರಾಗಿ ಉಳಿಯಬೇಕು. ಆಗ ಮಾತ್ರ ಅವರು ಸೃಷ್ಟಿಸಿದ ಕೃತಿಗಳು ಶುದ್ಧವಾಗಿ ಉಳಿಯಬಲ್ಲವು. ತಮ್ಮ ಹೆಸರುಗಳನ್ನು ಬಚ್ಚಿಡಬೇಕು. ಆಗ ಮಾತ್ರ ಅವರ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಸಾಹಿತಿ ಬೇರೆ ಬೇರೆಯಾಗಿ ಉಳಿಯಬಾರದು. ಎಲ್ಲರೂ ಹೆಸರನ್ನು ಕಳೆದುಕೊಂಡು ಈ ಕಾಲಕ್ಕೆ ಬೇಕಾಗುವ ಒಟ್ಟು ಸಾಹಿತ್ಯವನ್ನು ಸೃಷ್ಟಿಸಬೇಕು. ಅದು ಸಾಹಿತಿಗಳ ಅಭಿವ್ಯಕ್ತಿಯಾಗಿರದೆ, ಆ ಕಾಲದ ಜನರ ಆಶೋತ್ತರಗಳ ಅಭಿವ್ಯಕ್ತಿಯಾಗಬೇಕು" ಎಂದೆಲ್ಲ ಬರೆಯಲಾಗುತ್ತಿತ್ತು. ಬೆಕೆಟ್ ಒಮ್ಮೆ ಈ ಅಭಿಪ್ರಾಯದ ಸಾಹಿತಿಗಳ ಮಧ್ಯ ತುಟಿ ಪಿಟಿಕ್ ಎನ್ನದೆ ಮೂಲೆಯಲ್ಲಿ ಕುಳಿತಿದ್ದ. ಓರ್ವನಿಗೆ ಸಿಟ್ಟು ಬಂದು, "ಇಡೀ ಜಗತ್ತು ಪುಡಿ ಪುಡಿಯಾಗಿ ಹೋಗುತ್ತಿರುವಾಗ ನೀನು ತಣ್ಣಗಿದ್ದೆ! ನಿನಗೇನು ಬೇಕು? ನೀನೇನು ಮಾಡಬೇಕೆಂದು ಮಾಡಿದ್ದೀಯೆ?" ಎಂದ.

ಬೆಕೆಟ್ ಕಾಲ ಮೇಲೆ ಕಾಲು ಹಾಕಿ ಕುಳಿತು, "ವಾಲ್ಟರ್ ನನಗೆ ಕತ್ತೆಯ ಮೇಲೆ ಕುಳಿತು ಹೂಂಸು ಬಿಡುತ್ತ ದಾಂತೆಯ ಬಗ್ಗೆ ವಿಚಾರ ಮಾಡಬೇಕಾಗಿದೆ!" ಎಂದು ಶಾಂತಚಿತ್ತದಿಂದ ಉತ್ತರ ಕೊಟ್ಟ. ಸಾಹಿತ್ಯವನ್ನು ಸಮಾಜಶಾಸ್ತ್ರಗಳಿಗೂ ಪ್ರಚಲಿತ ರಾಜಕಾರಣಕ್ಕೂ ನಂಟು ಹಾಕಿಕೊಂಡು ಬರೆಯುವುದಕ್ಕಿಂತ ಜೊಪ್ಪೆ ಹೊಡೆಯುವುದೇ ಹೆಚ್ಚು ಮಾಡಿಕೊಂಡ ಅವನಿಗೆ ಅದಕ್ಕಿಂತ ಗಂಭೀರವಾದ ಉತ್ತರವನ್ನು ಕೊಡುವ ಮನಸ್ಸು ಬೆಕೆಟ್‌ನಿಗಾಗಲಿಲ್ಲ !

೧೯೩೨ರಲ್ಲಿ 'ಎ ಡ್ರೀಮ್ ಆಫ್ ಫೆರರ್ ಟು ಮಿಡ್ಲಿಂಗ್ ವಿಮೆನ್' ಎಂಬ ಕಾದಂಬರಿಯನ್ನು ಬರೆದ. ಅದರಲ್ಲಿ ಅವನ ಆತ್ಮಕಥೆಗೆ ಸಂಬಂಧಿಸಿದ ವಿಷಯಗಳು ಹೆಚ್ಚಿವೆ. ತನ್ನ ಬದುಕಿನಲ್ಲಿ ಬಂದು ಹೋದವರನ್ನು ಅದರಲ್ಲಿ ಚಿತ್ರಿಸಿದ್ದಾನೆ. ತನ್ನ ವಿಚಾರದ ಬೆಳವಣಿಗೆಯನ್ನು ವ್ಯಕ್ತಪಡಿಸಿದ್ದಾನೆ. ವಿಚಾರವಿರುವುದು ಎರಡು ಹೇಳಿಕೆಗಳ ಮಧ್ಯದಲ್ಲಿ — ಆ ಮಧ್ಯದ ಮೌನದಲ್ಲಿ–ಎಂಬ ಬೆಕೆಟ್‌ನ ಮಾತು ಅವನ ಒಟ್ಟಿನ ಸಾಹಿತ್ಯಕ್ಕೆ ಅನ್ವಯವಾಗುತ್ತದೆ. ಈ ಕಾದಂಬರಿ ದೊಡ್ಡದಿತ್ತು. ಪ್ರಕಾಶಕರು ಮುಂದೆ ಬರಲಿಲ್ಲ. ಪತ್ರಿಕೆಗಳಿಗೆ ಒಪ್ಪಿಗೆಯಾಗಲಿಲ್ಲ. ಆತನಿಗೆ ದುಡ್ಡು ಬೇಕಿತ್ತು. ಲೈಂಗಿಕ ವಿಕ್ಷಿಪ್ತತೆ, ಸ್ವಲಿಂಗರತಿಗಳಿರುವ ಆ ಕಾದಂಬರಿಯನ್ನು ಪ್ರಕಾಶಕರು ನಿರ್ದಾಕ್ಷಿಣ್ಯವಾಗಿ ಹಿಂದಿರುಗಿಸಿದರು. ಅದೇ ವೇಳೆಗೆ ರಶಿಯದ ತಲೆತಿರುಕನೊಬ್ಬ ಫ್ರಾನ್ಸಿನ ಅಧ್ಯಕ್ಷರ ಕೊಲೆ ಮಾಡಿದ. ಪ್ಯಾರಿಸ್ಸಿನಲ್ಲಿರುವ ವಿದೇಶಿಯರಿಗೆ ತೊಂದರೆ ಆಯಿತು. ದೇಶ ಬಿಟ್ಟು ಹೋಗುವಾ ಎಂದರೆ ಬೆಕೆಟ್‌ನ ಹತ್ತಿರ ಹಣವಿರಲಿಲ್ಲ. ಆದುದರಿಂದ ಆತ ತಲೆ ಮರೆಸಿಕೊಂಡು ಯಾವ ಯಾವುದೋ ಬೀದಿಯಲ್ಲಿ ಅಡ್ಡಾಡಿದ! ತಾಯಿ ಯಾವುದಾದರೂ ನೌಕರಿ ಹುಡುಕಿ ಸುಖವಾಗಿರು ಎಂದು ಒತ್ತಾಯಿಸುತ್ತಿದ್ದಳು. ಎಲ್ಲೆಲ್ಲಿಂದಲೋ 'ಬೇಡಿಕೆಯ ಭಾಗ'ವನ್ನು ಕತ್ತರಿಸಿ ಮಗನಿಗೆ ಕಳಿಸುತ್ತಿದ್ದಳು. ಬೆಕೆಟ್ ಒಮ್ಮೆ ಒಂದು ನೌಕರಿಗೆ ಅರ್ಜಿಯನ್ನೇನೋ ಬರೆದ

ಆದರೆ ಅವರಲ್ಲಿ ತನ್ನ ವಿಳಾಸವನ್ನೇ ಕೊಡಲಿಲ್ಲ!

ತಂದೆ ಸತ್ತ. ಸಾಯುವಾಗ ೪೩೪೫೫ ಪೌಂಡ್ ಆಸ್ತಿಯನ್ನು ಬಿಟ್ಟು ಹೋದ. ತನ್ನ ಮರಣ ಪತ್ರದಲ್ಲಿ ಇಪ್ಪತ್ತೈದು ವರುಷದವರೆಗೆ ಮಾತ್ರ ಮಕ್ಕಳ ಪರಿಪಾಲನೆ ಮಾಡಬೇಕೆಂದೂ ಆಮೇಲೆ ಕೇವಲ ೨೦೦ ಪೌಂಡ್ ವಾರ್ಷಿಕ ವೇತನವನ್ನು ಅವರಿಗೆ ಕೊಡಬೇಕೆಂದೂ ಬರೆದಿದ್ದ! ಆದುದರಿಂದ ಆಸ್ತಿಯ ಹಕ್ಕೆಲ್ಲ ತಾಯಿಗೇ ಉಳಿಯಿತು. ಉದ್ಯೋಗವಿಲ್ಲ; ಬರವಣಿಗೆಯಿಂದ ಬದುಕು ಸಾಗುವಂತಿಲ್ಲ. ಮೇಲೆ ಆರೋಗ್ಯದ ತೊಂದರೆ. ಯಾವಾಗಲೂ ತಲೆ ಸಿಡಿತ, ಹಗಲು ಕತ್ತಲೆ ಕೋಣೆಯಲ್ಲಿ ಕೂಡುತ್ತಿದ್ದ. ಕುತ್ತಿಗೆಯ ಮೇಲೆ, ಬಾಯಿಯ ಒಳಗೆ ಗಡ್ಡೆಗಳು ಏಳುತ್ತಿದ್ದವು. ರಾತ್ರಿ ನಿದ್ರೆ ಬರುತ್ತಿರಲಿಲ್ಲ. ನಿದ್ರೆ ಬಂದರೆ ದುಃಸ್ವಪ್ನ. ಗಾಬರಿಯಿಂದ ಬೆವೆತು ಉಸಿರಾಡಲೂ ಆಗದೆ ತೇಕುತ್ತಿದ್ದ. ಎಷ್ಟೋ ಸಾರೆ ಅವನ ಅಣ್ಣ ಹತ್ತಿರವೇ ಮಲಗುತ್ತಿದ್ದ. ಬೆಕೆಟ್‌ನ ಗೆಳೆಯನಾದ ಡಾ. ಥಾಮ್ಸನ್ ಮಾನಸಿಕ ಚಿಕಿತ್ಸೆಗಾಗಿ ಲಂಡನ್ನಿಗೆ ಹೋಗಲು ಹೇಳಿದ. ಲಂಡನ್ನಿನಲ್ಲಿ ೧೩೩ ಸಾರೆ ಮನೋವಿಜ್ಞಾನಿಯೆದುರು ಕುಳಿತು ಚಿಕಿತ್ಸೆ ಮಾಡಿಸಿಕೊಂಡ. ರೋಗ ಹಾಗೆಯೇ ಉಳಿಯಿತು. ಮಾನವನ ರೋಗಕ್ಕೂ ಅವನ ಕರ್ಮಕ್ಕೂ ಏನಾದರೂ ಸಂಬಂಧವಿರಬಹುದೇ ಎಂದು ಯೋಚಿಸಿದ. ಜೀವನವೇ ಒಂದು ರೋಗ. ಬಾಲ್ಯ ಅಂದರೆ ಪ್ರಾರಂಭ. ಪರರನ್ನು ಅವಲಂಬಿಸಿಕೊಳ್ಳದೆ ಬದುಕಲಾರದ ಮಾನವ ರೋಗಿಯಲ್ಲದೆ ಮತ್ತೇನು? ಎಂದುಕೊಂಡ. ಈ ಕಾಲದಲ್ಲಿ ಫ್ರಾಯ್ಡ್ ಮತ್ತು ಯೂಂಗ್‌ರ ಮನೋವಿಶ್ಲೇಷಣಾವಾದದಿಂದ ಎಲ್ಲ ಲೇಖಕರೂ ಪ್ರಭಾವಿತರಾಗಿದ್ದರು. ಅವರ ಸಿದ್ಧಾಂತಕ್ಕೆ ಸಿಲುಕದ ಸಾಹಿತಿ ತಾನೊಬ್ಬನೇ ಎಂದು ನವ್ಯ ವಿಮರ್ಶಕ ಎಜ್ರಾ ಪೌಂಡ್ ಹೇಳಿಕೊಳ್ಳುತ್ತಿದ್ದ. ಬೆಕೆಟ್ ಸ್ವತಃ ಯೂಂಗ್‌ನ 'ಮನಶ್ಶಾಸ್ತ್ರ ಮತ್ತು ಕಾವ್ಯ' ಎಂಬ ಗ್ರಂಥವನ್ನು ಅಭ್ಯಾಸ ಮಾಡಿದ್ದ. ಜನರಿಂದ ತಪ್ಪಿಸಿಕೊಳ್ಳಲು ಮನಸ್ಸಿನ ಗೌಪ್ಯಗಳನ್ನು ಜೋಪಾನವಾಗಿಟ್ಟುಕೊಳ್ಳಲು ತಾನು ಮಾಡುವ ಪ್ರಯತ್ನಗಳು ಮನೋದೈಹಿಕ ರೋಗಗಳಿಗೆ ಕಾರಣವಾಗಿರಬೇಕೆಂದುಕೊಂಡು ಸಾಮಾನ್ಯ ಜೀವನಕ್ಕೆ ಹೊಂದಿಕೊಳ್ಳಲಾಗದ ತನ್ನ ಕಳ್ಳ ಪ್ರಯತ್ನಗಳನ್ನು ಗುರುತಿಸಿಕೊಂಡ.

ಟಿ. ಎಸ್. ಎಲಿಯಟ್‌ನ ಪರಿಚಯವಾಯಿತು; ಫಲಿಸಿಗಲಿಲ್ಲ. ಎಲಿಯಟ್ 'ಕ್ರೈಟೇರಿಯನ್' ಎಂಬ ಪತ್ರಿಕೆ ಹೊರಡಿಸಿದ್ದ. ಅದರಲ್ಲಿ ಬರೆಯುವ ಅವಕಾಶ ಬೆಕೆಟ್‌ನಿಗೆ ದೊರೆಯಲಿಲ್ಲ. ಉಳಿದ ಐರ್ಲಂಡಿನ ಲೇಖಕರಂತೆ ಎಲಿಯಟ್‌ನ ವಿಮರ್ಶೆ, ಸಾಹಿತ್ಯ ಕೃತಿಯಲ್ಲಿ ಬೆಕೆಟ್‌ನಿಗೂ ವಿಶ್ವಾಸ ಕಡಿಮೆ.

ದುಡ್ಡಿಗಾಗಿ ಆತ ಯಾವುದಾದರೂ ಪುಸ್ತಕವನ್ನು ಬರೆಯಲೇಬೇಕಿತ್ತು. 'ಎಕೋಸ್ ಬೋನ್ಸ್' ಎಂಬ ಕವನ ಸಂಕಲನವನ್ನು ಪ್ರಕಟಿಸಿದ. ದುಡ್ಡು ಬರಲಿಲ್ಲ. ಫೋಟೋಗ್ರಾಫರ್ ಆಗಬೇಕೆಂದು ವಿಚಾರ ಮಾಡಿದ. ಬಣ್ಣದ ಮುದ್ದೆಗಳಲ್ಲಿ ಮಾನವರನ್ನು ಹಿಡಿದಿಡುವುದು ಅವರಿಗೆ ಸಲ್ಲಿಸುವ ಯೋಗ್ಯ ಗೌರವವಾದೀತೆಂದುಕೊಂಡ! ಮಾನವ ಏಕಾಂಗಿ ಪ್ರತಿಯೊಬ್ಬರೂ ಒಬ್ಬರಿಗೊಬ್ಬರು ಪರಕೀಯರೇ. ಮಾನವರಿಗೆಲ್ಲ ಅನ್ವಯವಾಗುವ, ಎಲ್ಲರನ್ನು ಒಮ್ಮೆಲೇ ಸ್ಪಂದಿಸುವ ಒಂದು ಭಾವನೆಯಿಲ್ಲ, ವಿಚಾರವಿಲ್ಲ. ದೇವರಿಗೆ ನಾವು ಹೊರಗಿನವರು; ಅವನು ನಮಗೆ ಅಪರಿಚಿತ. ಬದುಕು ಅಸಂಬದ್ಧ. ಅಪಹಾಸ್ಯ, ಈ ಶತಮಾನದ ನಮಗೆ ದ್ವೇಷಿಸಲೂ ಬಾರದು; ಪ್ರೀತಿಸಲೂ ಬಾರದು. ಈಗ ಉಳಿದದ್ದು ನಮ್ಮನ್ನು ನಾವು ತಿರಸ್ಕರಿಸಿಕೊಳ್ಳುವುದು; ಇಲ್ಲವೇ ಸಾಧ್ಯವಾದರೆ ಮರೆತುಕೊಳ್ಳುವುದು. ಬೆಕೆಟ್‌ನಿಗೆ ಬದುಕು ತನ್ನ ವಿರಾಟ ಸ್ವರೂಪವನ್ನು ತೋರಿಸಿತ್ತು. "ಹೊಟ್ಟೆಗೂ ಹೃದಯಕ್ಕೂ ಬುದ್ಧಿಗೂ ಸಂಬಂಧ ಕಡಿದುಹೋದಾಗ ದೇವರಲ್ಲಿ ನಂಬುಗೆಯಿಟ್ಟು ಕೊಳ್ಳುವುದು ಸಾಧ್ಯವೇ ಇಲ್ಲ. ನಾನು ಒಳ್ಳೆಯವನಾಗಿರಬೇಕೆಂದು ಬಯಸಿದೆ. ಆದರೆ ಹೃದಯದ ಬಡಿತ, ತಲೆಸಿಡಿತ ಕಡಿಮೆಯಾಗಲಿಲ್ಲ. ನನ್ನ ಶಾಲಾ ದಿನಗಳಿಂದ ಉಳಿದವರಿಂದ ಆದಷ್ಟು ಪ್ರತ್ಯೇಕವಾಗಿ ಉಳಿಯಬಯಸಿದೆ. ನಾನು ಅಸುಖಿ. ಈ ಭಾವನೆ ನನಗೆ ತೀರಾ ಹತ್ತಿರವಾದ ಅನಿಸಿಕೆ. ನನ್ನ ದುಃಖ, ಒಂಟಿತನ, ಅನಾಸ್ಥೆಗಳೆಲ್ಲ ಅಹಂಕಾರದ ಲಕ್ಷಣಗಳಿರಬಹುದು. ಆದರೆ ಅವು ನನಗೆ ಅಸ್ವಾಭಾವಿಕವಾಗಿ ತೋರುವುದಿಲ್ಲ. ನನ್ನ ಮನಸ್ಸನ್ನು

ಮೃತ್ಯುಭಯ ಮುಸುಕಿಲ್ಲವಾಗಿದ್ದರೆ ನಾನು ಇಷ್ಟು ವಿಚಾರಿಸುತ್ತಿರಲಿಲ್ಲ ಎಂದು ತೋರುತ್ತಿದೆ" ಎಂಂದು ಬೆಕೆಟ್ ತನ್ನ ಅನಾಥ ಬದುಕನ್ನು ವಿಶ್ಲೇಷಿಸಿಕೊಂಡಿದ್ದಾನೆ. 'ಮರ್ಫಿ' ಕಾದಂಬರಿ ಹುಟ್ಟಿನಲ್ಲಿತ್ತು. ಆದರೆ ಅದು ಬೆಳೆಯುತ್ತಲೇ ಇರಲಿಲ್ಲ. ಒಮ್ಮೆ ಯುಂಗ್‌ನ ಭಾಷಣಕ್ಕೆ ಹೋಗಿದ್ದ. ಆತನ ಒಂದು ಮಾತು ಅವನ ಮನಸ್ಸನ್ನು ಕ್ರಿಯಾಶೀಲವನ್ನಾಗಿ ಮಾಡಿತ್ತು. ಹತ್ತು ವರುಷದ ಹುಡುಗಿಯ ಕತೆ ಹೇಳಿದ್ದ. ಆಕೆಗೆ ಪೌರಾಣಿಕ ಕನಸುಗಳು ಬೀಳುತ್ತಿದ್ದವಂತೆ. ಆ ಕನಸುಗಳು ಸನ್ನಿಹಿತವಾದ ಮೃತ್ಯುವಿನ ಸಂಕೇತಗಳಾಗಿದ್ದವಂತೆ. ಆಕೆ ಕೆಲವೇ ದಿನಗಳಲ್ಲಿ ಸಾಯುತ್ತಾಳೆ. ಆಗ ಯುಂಗ್ ಹೇಳಿದ: "ಕೆಲವರು ಪೂರ್ಣವಾಗಿ ಹುಟ್ಟಿರುವುದೇ ಇಲ್ಲ" ಬೆಕೆಟ್‌ನಿಗೆ ತಾನೂ ಪೂರ್ಣವಾಗಿ ಹುಟ್ಟಿದವನಲ್ಲವೆನಿಸಿತು. ಈ ವೈಚಾರಿಕ ಬೆಳಕು ಬೆಕೆಟ್‌ನಿಗೆ ತನ್ನ ಬಾಲ್ಯ, ತಾಯಿಯನ್ನು ಬಿಡಲಾಗದೆ, ಬಿಟ್ಟರೂ ಬೆಳೆಯದೆ ಕೊಳೆಯುವ ಅವಸ್ಥೆಯನ್ನು ತೋರಿಸಿಕೊಟ್ಟಿತು. 'ಮರ್ಫಿ' ಮುಗಿಯಿತು. 'ಆಲ್ ದೈಟ್ ಫಾಲ್' ಎಂಬ ನಾಟಕವೂ ಹುಟ್ಟಿತು.

ಮಾನವನ ಒಳಮನಸ್ಸಿನ ಪ್ರಾಮಾಣಿಕ ಕಥೆಯಾದ 'ಮರ್ಫಿ' ಪ್ರಕಾಶಕರಿಂದ ತಿರಸ್ಕರಿಸಲ್ಪಟ್ಟಿತು. ಸಾಮಾಜಿಕ, ರಾಜಕೀಯ ಮೌಲ್ಯಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಬರೆಯಲ್ಪಡುವ ಕಾದಂಬರಿಗಳ ಕಾಲವಾದ ಆಗ ಆತ್ಮನಿಷ್ಠ ತತ್ವಗಳ ನಿವೇದನೆಯಾದ 'ಮರ್ಫಿ' ಹಿಂದಿನ ಶತಮಾನದ ಕಾದಂಬರಿ ಆಯಿತು. ಮರ್ಫಿ ಐರ್ಲಂಡಿನಲ್ಲಿ ಒಂದು ಸಾಮಾನ್ಯವಾದ ಅಡ್ಡ ಹೆಸರು. ಆತ ತಕ್ಕಷ್ಟು ಕಲಿತವನು, ಡಬ್ಲಿನ್ನಿನವ. ಯಾವ ನೌಕರಿಯೂ ಇಲ್ಲದವ. ಸಂಸಾರ ಕಟ್ಟಿಕೊಳ್ಳದ ಏಕಾಂಗಿ. ಯಾರೂ ಹೋಗದ ಹೋಟೆಲ್ ರೂಮಿನಲ್ಲಿ, ಲಂಡನ್ನಿನಲ್ಲಿ ಉಳಿದಿರುತ್ತಾನೆ. ಎಲ್ಲ ಬಟ್ಟೆಗಳನ್ನು ಕಿತ್ತೊಗೆಯಬೇಕು; ತಿರುಗುವ ಖುರ್ಚಿಯಲ್ಲಿ ಕೂಡಬೇಕು, ಹಗ್ಗದಿಂದ ತನ್ನನ್ನೇ ಖುರ್ಚಿಗೆ ಕಟ್ಟಿಕೊಳ್ಳಬೇಕು. ಆಗ ಅವನಿಗೆ ಸ್ಫೂರ್ತಿ; ಬಿಡುಗಡೆ; ಆನಂದದ ತಂದ್ರಾವಸ್ಥೆ. ಆಗ ತನ್ನ ಕಥೆ ಪ್ರಾರಂಭಿಸುತ್ತಾನೆ.

ಬೆಕೆಟ್‌ನ ಎಲ್ಲ ಕಾದಂಬರಿಗಳಲ್ಲಿ 'ಮರ್ಫಿ' ಹೆಚ್ಚು ಸಂಯಮದಿಂದ ಕೂಡಿದ ಅಭಿಜಾತ ಲಕ್ಷಣವುಳ್ಳ ಸಂಕೀರ್ಣಕಾದಂಬರಿಯೆಂದು ಇಂದು ಖ್ಯಾತವಾಗಿದೆ. ಆದರೆ ಅಂದು ತಿರಸ್ಕರಿಸಿದ ಪ್ರಕಾಶಕರ ಸಂಖ್ಯೆ ನಲ್ವತ್ತೆಂಟು ಎಂದು ಬೆಕೆಟ್ ಯಾದಿ ಮಾಡಿದ್ದ! "ನೀವು ಪ್ರಕಟಿಸುವುದಾದರೆ ತಲೆಬರೆಹವೊಂದನ್ನು ಬಿಟ್ಟು ಎಲ್ಲವನ್ನೂ ತೆಗೆದುಹಾಕಲು ಸಿದ್ಧನಿದ್ದೇನೆ" ಎಂದು ಎಷ್ಟೋ ಪ್ರಕಾಶಕರಿಗೆ ಪತ್ರ ಬರೆದಿದ್ದ.

ಬೆಕೆಟ್‌ನಿಗೆ ಮೂವತ್ತು ವಯಸ್ಸಾದಾಗ ಬೆಟ್ಟಿ ಸ್ಟಾಕ್ಟನ್ ಎಂಬ ಹುಡುಗಿಯಲ್ಲಿ ಆಕರ್ಷಣೆ ಉಂಟಾಯಿತು. ಆತನಿಗೆ ಈಗಾಗಲೇ ಎಷ್ಟೋ ಹೆಣ್ಣುಗಳ ಸಂಬಂಧ ಬಂದಿತ್ತು. ತನ್ನ ಗೆಳೆಯರಿಗೆ ಬರೆದ ಅನೇಕ ಪತ್ರಗಳಲ್ಲಿ ತನ್ನ ಲೈಂಗಿಕ ಸಂಬಂಧಗಳನ್ನು ಕುರಿತು ಬರೆದಿದ್ದಾನೆ. ಅಂಥ ಅಲ್ಪ ಕಾಲದ ಸಂಬಂಧದ ಹೆಣ್ಣುಗಳನ್ನು 'ಸಂಜೆಯ ಹೆಣ್ಣುಗಳು' ಎಂದು ಕರೆದಿದ್ದಾನೆ. ಅವರಿಗೆಲ್ಲ ತನ್ನ ಕಥೆ ಕಾದಂಬರಿ, ಪದ್ಯಗಳಲ್ಲಿ ಅಲ್ಪಸ್ವಲ್ಪ ಸ್ಥಾನವನ್ನು ಕೊಟ್ಟಿದ್ದಾನೆ. ಗಂಡಸರೊಡನೆ ಸಮಾನಸ್ಕಂದರಂತೆ; ಬಿಚ್ಚುಸಂಬಂಧದ, ಉದ್ಯೋಗಸ್ಥ ಹೆಣ್ಣುಗಳು ಕೆಲವಾದರೆ, ಹೃದಯದ ಮೇಲೆ ಮಿಂಚಿನ ಗೆರೆಗೀರಿ ಹೋದ ಎಳೆ ಹರೆಯದ ಹುಡುಗಿಯರು ಹಲವರು. ಹೆಣ್ಣುಗಳೊಂದಿಗಿನ ತನ್ನ ಸಂಬಂಧ ಕ್ಷಣಿಕವಾದದ್ದು. ಅದೊಂದು ಮಾನಸಿಕ ಚಿಕಿತ್ಸೆ' ಎಂದು ಆತ ಹೇಳಿದ್ದಾನೆ. ತನ್ನನ್ನು ಮರೆತು ಉಳಿದವರೊಡನೆ ಆತ ಹೆಚ್ಚು ಕಾಲ ಸಂಬಂಧ ಇಟ್ಟುಕೊಳ್ಳಲು ಅಸಮರ್ಥನಾಗಿದ್ದ. ಅವನು ಯಾರನ್ನಾದರೂ ಸ್ಥಾಯಿಯಾಗಿ ಪ್ರೀತಿಸಿದ್ದರೆ, ತನ್ನೊಬ್ಬನನ್ನೇ! ಪ್ರಣಯದ ಪ್ರೀತಿ (Romantic Love) ಯನ್ನು ಕಂಡರೆ ಆತನಿಗೆ ಹೇಸಿಗೆ.

ಸ್ಟಾಕ್ಟನ್ ಆತ ಪ್ರಿತಿಯಿಂದ ಕಳಿಸಿದ ಪದ್ಯಗಳನ್ನೆಲ್ಲ ಒಗೆದು ಬಿಡುತ್ತಿದ್ದಳು. ಆತನ ಕ್ಷಣಿಕ ಪರಿಚಯವಿದ್ದ ಆಕೆ ಅವನಿಗೆ ಪತ್ತೆಯನ್ನು ಕೊಡದೆ ಹೊರಟುಹೋದಳು. ಅಷ್ಟರಲ್ಲಿಯೇ ಆತ 'ಫ್ರಿಕಾ' ಎಂದು ಹೆಸರಿಟ್ಟುಕೊಂಡ ಹುಡುಗಿಯೊಡನೆ ಎಲ್ಲ ಸಂಬಂಧವನ್ನು ಬೆಳೆಸಿಯಿಸಿಕೊಂಡಿದ್ದ. "ಪ್ರೀತಿ ಎಂಬ ಶಬ್ದಕ್ಕೆ ವಿಶೇಷವೇನಾದರೂ ಅರ್ಥವುಂಟೆ? ದೇಹ ಸಂಬಂಧವೊಂದೇ ಅಲ್ಲವೆ? ಗಂಡಿಗೆ ಹೆಣ್ಣಿನ ಉಪಯೋಗ ಆವರ ದೇಹವಲ್ಲದೆ ಮತ್ತೇನು?

ಲೈಂಗಿಕ ಆಕರ್ಷಣೆಯೊಂದಲ್ಲದೆ ಅವರಲ್ಲಿ ಏನಿದ್ದೀತು? ಹೆಣ್ಣಾಗಿ ಬೇರೆ ವಿಚಾರವನ್ನು ಮಾಡುವವರು ತಮ್ಮ ಆಯುಷ್ಯವನ್ನು ಸುಮ್ಮನೇ ಅಪವ್ಯಯ ಮಾಡಿಕೊಂಡಿದ್ದಾರೆ," ಎಂದಿದ್ದಾನೆ ಬೆಕೆಟ್. ಬೆಕೆಟ್ಟನಿಗೆ ತನಗಿಂತ ಹಿರಿಯರಾದ ಹೆಣ್ಣುಗಳೊಡನೆಯೇ ಸಂಬಂಧ ಹೆಚ್ಚು. ಅದೇ ಹೆಚ್ಚು ದಿನ ನಡೆದುಬಂದದ್ದು.

ಬೆಕೆಟ್ ಒಂದು ಸಂಜೆ ತನ್ನ ಕೋಣೆಗೆ ಹಿಂದಿರುಗುತ್ತಿದ್ದ. ರಸ್ತೆಯಲ್ಲಿ ಸಿಕ್ಕಿದ ಓರ್ವ ತಲೆಹಿಡುಕ 'ದುಡ್ಡು ಕೊಡು' ಎಂದು ಹಟ ಹಿಡಿದ; 'ಹುಡುಗಿ ಕೊಡಿಸುತ್ತೇನೆ.' ಎಂದ. ಬೆಕೆಟ್ ಒಪ್ಪಲಿಲ್ಲ. ಆಗ ಒಮ್ಮಿಂದೊಮ್ಮೆಲೇ ಅವನ ತೋಳು ಹಿಡಿದು ಎದೆಗೆ ಚಾಕು ಹಾಕಿದ. ರಕ್ತ ಸುರಿಸುತ್ತ ರಸ್ತೆಯ ಬದಿಯಲ್ಲಿ ಬಿದ್ದ ಬೆಕೆಟ್‌ನನ್ನು ಆಕಸ್ಮಿಕವಾಗಿ ಭೇಟಿಯಾಗಿ ಉಪಚರಿಸಿದವಳು ಸುಝಾನೆ–ಡೆಸ್ಕೆವಾಕ್ಸ್ ಡುಮೆಸ್ನಿಲ್. ಆಕೆ ಅವನ ಜೀವನ ಸಂಗಾತಿಯಾದಳು.

ಸುಝಾನೆ ಬೆಕೆಟ್‌ನ ಜೀವನವನ್ನು ಸಮರ್ಥ ಆಡಳಿತಗಾರಳಾಗಿ ಆತನ ಆರೋಗ್ಯದ ಮೇಲ್ವಿಚಾರಕಳಾಗಿ ಪ್ರವೇಶಿಸಿದಳು. ಆತನಿಗಿಂತ ಆಕೆ ಏಳು ವರ್ಷ ಹಿರಿಯಳು. ಆಕೆಗೆ ಆಗ ೩೮ ವರುಷ. ಎತ್ತರವಾಗಿದ್ದಳು, ಸದೃಢಳಾಗಿದ್ದಳು. ಸುಂದರವಾಗಿದ್ದಳು. ಗಂಭೀರಳಾಗಿದ್ದಳು; ಬೆಕೆಟ್‌ನನ್ನು ಚೆನ್ನಾಗಿ ಅರಿತಿದ್ದಳು. ಅವನನ್ನು ಏನು ಕೇಳಬೇಕು; ಏನು ಕೇಳಬಾರದು; ಅವನಿಗೆ ಏನು ಹೇಳಬೇಕು; ಏನು ಹೇಳಬಾರದು–ಎಂಬುದನ್ನು ತಿಳಿದುಕೊಂಡವಳು. ಆತ ಹೇಗೆ ಕೆಲವು ವಿಷಯಗಳಲ್ಲಿ ಅಪರಿಚಿತನಾಗಿಯೇ ಉಳಿಯ ಬಯಸಿದನೋ ಆಕೆಯು ಅದೇ ವ್ಯವಹಾರವನ್ನು ಇಟ್ಟುಕೊಂಡಿದ್ದಳು. ತನ್ನ ಅಂತರಂಗದ ಸುತ್ತ ಕಬ್ಬಿಣದ ಗೋಡೆಯನ್ನು ಕಟ್ಟಿಕೊಂಡಳು.

ತಾಯಿಯನ್ನು ಬಿಟ್ಟಿರಲಾಗದ ಬೆಕೆಟ್‌ನಿಗೆ ಸುಝಾನೆಯ ಸಂಬಂಧ ನಿಶ್ಚಿಂತತೆಯನ್ನು ತಂದಿತು. ಆತನ ಬಟ್ಟೆ ಬರೆ, ಊಟ ಕುಡಿತದ ವ್ಯವಸ್ಥೆಯಿಂದ ಹಿಡಿದು ಅವನ ಪುಸ್ತಕಗಳ ಪ್ರಕಾಶನ ನಾಟಕಗಳ ಪ್ರದರ್ಶನಗಳ ವರೆಗಿನ ವ್ಯವಹಾರವನ್ನು ಆಕೆ ನೋಡಿಕೊಂಡಳು. ನಿರ್ಗತಿಕವಾದ ಅವನ ಬದುಕನ್ನು ಗೌರವಾನ್ವಿತಗೊಳಿಸಿದಳು. ಹೊಟ್ಟೆಗಿಲ್ಲದ ಪರಿಸ್ಥಿತಿಯಲ್ಲಿ ಬಟ್ಟೆ ಹೊಲಿದು ಮನೆಯನ್ನು ನಡೆಸಿದಳು. ಆದರೆ ಅವರು ಮದುವೆಯಾಗದೆ ಜೊತೆಗೆ ಉಳಿದಿದ್ದರು, ಹೀಗಾಗಿ ಆಕೆ ಬೆಕೆಟ್‌ನೊಡನೆ ಸಾರ್ವಜನಿಕ ಸಮಾರಂಭ ಸ್ನೇಹಿತರ ಕೂಟಗಳಲ್ಲಿ ಪಾಲುಗೊಳ್ಳುತ್ತಿರಲಿಲ್ಲ!

ಆತ ಜಗತ್ಪ್ರಸಿದ್ಧ ಸಾಹಿತಿಯಾದಮೇಲೆ ತನ್ನ ಅಪರಿಮಿತ ಗಳಿಕೆಗೆ ವಾರಸುದಾರರೊಬ್ಬರು ಬೇಕೆಂದು ಸಂಬಂಧವನ್ನು ಕಾಯ್ದೆಬದ್ಧಗೊಳಿಸಲು ವಿವಾಹವನ್ನು ನೋಂದಾಯಿಸಿಕೊಂಡ. ಅವನು ಮದುವೆಯಾದಾಗ ಆಕೆಗೆ ಅರವತ್ತೊಂದು ವರುಷ, ಅವನಿಗೆ ಐವತ್ತೇಳು ವರುಷಗಳಾಗಿದ್ದವು.

■

೧೯೩೯, ಮಾರ್ಚ್ ೫ ರಂದು ಜರ್ಮನಿ ಝೆಕೊಸ್ಲೋವಾಕಿಯಾವನ್ನು ವಶಪಡಿಸಿಕೊಂಡಿತು. ಕೆಲವೇ ದಿನಗಳಲ್ಲಿ ಹಿಟ್ಲರ್ ಪಶ್ಚಿಮ ಯುರೋಪಿನ ಅನೇಕ ರಾಷ್ಟ್ರಗಳನ್ನು ಆಕ್ರಮಿಸಿದ. ಸಪ್ಟೆಂಬರ್ ಮೂರರಂದು ಇಂಗ್ಲೆಂಡ್ ಜರ್ಮನಿಯ ಮೇಲೆ ಯುದ್ಧ ಸಾರಿತು.

ಬೆಕೆಟ್‌ನಿಗೆ ಪ್ಯಾರಿಸ್ಸಿನಲ್ಲಿರುವುದು ಅಸಾಧ್ಯವಾಯಿತು. ಅವನು ನಿಜವಾಗಿ ತಟಸ್ಥ ರಾಷ್ಟ್ರದ ನಾಗರಿಕ. ಆದರೆ ಐರ್ಲೆಂಡಿನ ನಾಗರಿಕತೆಯ ಅಧಿಕಾರಪತ್ರ ಅವನಿಗಿರಲಿಲ್ಲ. ಫ್ರಾನ್ಸಿನ ದಕ್ಷಿಣದ ಭಾಗ ಸುರಕ್ಷಿತವಾಗಿತ್ತು. ಆ ಕಡೆ ಕಾಲುನಡಿಗೆಯಿಂದ ಹೊರಟ. ರಸ್ತೆಯಲ್ಲಿ ಮಲಗಿದ. ಉಪವಾಸ ಬಿದ್ದ. ತಲೆ ಮರೆಸಿಕೊಂಡ. ಏನೂ ಮಾಡಿದರೂ ಯುದ್ಧದ ಉರಿಯಲ್ಲಿ ಬಿದ್ದಿರುವ ಪ್ಯಾರಿಸ್ಸನ್ನು ಬಿಡುವ ಮನಸ್ಸಾಗಲಿಲ್ಲ. ಪ್ಯಾರಿಸ್ಸಿನಲ್ಲಿರುವ ತನ್ನ ಫ್ರೆಂಚ್ ಸ್ನೇಹಿತರಿಗೆ ಸಹಾಯಮಾಡಬೇಕೆಂದು ಆತ ಬಯಸಿದ. ರಾಜಕಾರಣದಲ್ಲಿ ಸಕ್ರಿಯವಾಗಿಯಲ್ಲ; ಆ ವಿಷಯದ ಬಗ್ಗೆ ಮಾತನಾಡುವುದೂ ಒಂದು ವ್ಯರ್ಥ ಮೂರ್ಖ ಪ್ರಯತ್ನವೆಂದು ನಂಬಿಕೊಂಡಿದ್ದ ಬೆಕೆಟ್‌ನಿಗೆ ತಟಸ್ಥವಾಗಿ ಉಳಿಯುವುದು ಅಸಾಧ್ಯವಾಯಿತು. "ನಾಝಿಗಳನ್ನು ಕಂಡು ನನ್ನ ರಕ್ತ ಕುದಿಯುತ್ತಿದೆ. ಯಹೂದ್ಯರನ್ನು ಪಶುಗಳಂತೆ ಗುಂಡಿಟ್ಟು ಕೊಲ್ಲುವುದನ್ನು ನೋಡಿ ಸಿಟ್ಟು ನೆತ್ತಿಗೇರುತ್ತದೆ. ನಾನು ಜರ್ಮನ್ನರ ವಿರುದ್ಧ ಕತ್ತಿ ಕಟ್ಟುತ್ತೇನೆ. ರಾಷ್ಟ್ರಾಭಿಮಾನದಿಂದಲ್ಲ; ಸ್ವಾತಂತ್ರ್ಯಪ್ರೇಮದಿಂದಲ್ಲ;

# ಸುವಾಸಿತ ಹಾಗೂ ಸ್ವಾದಿಷ್ಟ
# ಮುಖಶುದ್ಧಿಗಾಗಿ




ಚಮನ್ ಇದು ಅತ್ಯಂತ ಸ್ವಾದಿಷ್ಟ ಹಾಗೂ ರುಚಿಕರವಾದ ಚೂರ್ಣವಾಗಿದೆ. ಇದನ್ನು ಸೇವಿಸುವದರಿಂದ ಬಾಯಿಯು ಸುವಾಸಿತವಾಗುತ್ತದೆ.

## ಚಮನದಲ್ಲಿ ಏನೆಲ್ಲ ಇದೆ?



ಈ ಚಮನದಲ್ಲಿ ಜೇಷ್ಠಮಧು, ಕೇಶರ, ಏಲಕ್ಕಿ. ಲವಂಗ, ಪತ್ರಿ, ಜಾಜಿಕಾಯಿ, ಬಡಿಸೋಪ್, ಮೆಂಥಾಲ್‌ಗಳಂಥ ಅನೇಕ ಬಗೆಯ ಸುಗಂಧಿತ ಹಾಗೂ ರುಚಿಕರ ವಸ್ತುಗಳು ಒಳಗೊಂಡಿರುವವು. ಅದಕ್ಕೆಂದೇ ಇದು ಚಿಕ್ಕಮಕ್ಕಳಿಂದ ವೃದ್ಧರವರೆಗೆ ಎಲ್ಲರಿಗೂ ಅಚ್ಚುಮೆಚ್ಚು.

**ಸ್ಟಾರ್ ಕಂಪನಿ, ಬೆಳಗಾಂವ್**

M. K. Publicity

ಪ್ರಜಾಪ್ರಭುತ್ವದ ಹೆಸರಿನಲ್ಲಲ್ಲ; ನನ್ನ ಸ್ನೇಹಿತರ ಬದುಕನ್ನು ನರಕವಾಡುತ್ತಿದ್ದಾರೆಂಬ ಒಂದೇ ಒಂದು ಕಾರಣದಿಂದ" ಎಂದ ಬೆಕೆಟ್ ೧೯೪೦ರಲ್ಲಿ 'ಫ್ರೆಂಚ್ ಪ್ರತಿರೋಧಿಗಳು' ಎಟೋಲ್ ಗುಂಪಿಗೆ ಸೇರುತ್ತಾನೆ. ಗುಪ್ತಚಾರರು ಸಂಗ್ರಹಿಸಿದ ಸುದ್ದಿಗಳನ್ನು ಇಂಗ್ಲೀಷಿಗೆ ತರ್ಜುಮೆಗೊಳಿಸುವ, ಕೆಲವೊಮ್ಮೆ ಜರ್ಮನ್ ಸೈನ್ಯಠಾಣೆಯ ವರೆಗೂ ಹೋಗಿ ಸುದ್ದಿ ಸಂಗ್ರಹಿಸುವ ಕೆಲಸವನ್ನು ಮಾಡಿದ. ಬೆಕೆಟ್ ಕೆಲವು ದಿನ ಫ್ರಾನ್ಸ್ ಅನಾಕ್ರಮಿತ ಪ್ರದೇಶದಲ್ಲಿ ಉಳಿದು ಬಟಾಟೆಯ ಹೊಲದಲ್ಲಿ ಕೂಲಿಕಾರನಂತೆ ದುಡಿದಿದ್ದ.

ಬೆಕೆಟ್‌ನ ಯುದ್ಧಕಾಲದ ಸೇವೆಯನ್ನು ಗುರುತಿಸಿ ಜನರಲ್ ಡಿ ಗಾಲ್ ೧೯೪೫ರಲ್ಲಿ 'ಕ್ರಾಕ್ಸ್ ಡಿ ಗುರೆ' ಎಂಬ ಬಿರುದನ್ನು ಕೊಟ್ಟು ಗೌರವಿಸಿದ.

*

ಯುದ್ಧೋತ್ತರ ಕಾಲದ ಜಗತ್ತಿನ ಮನಸ್ಸನ್ನು ಸೆಳೆದ ಬೆಕೆಟ್‌ನ ಸಾಹಿತ್ಯಕ್ಕೆ ಈ ಯುದ್ಧ ಅವನ ಮನಸ್ಸಿನ ಮೇಲೆ ಮಾಡಿದ ವಿರೇಚನ ಪರಿಣಾಮವೇ ಕಾರಣವಾಯಿತು. ಯುದ್ಧ ಮುಗಿದಿತ್ತು. ಆದರೆ ಪ್ಯಾರಿಸ್ಸು ವಿಧವೆಯಂತೆ ದುಃಖಿತಪ್ತವಾಗಿತ್ತು. ೧೯೪೩ ರಲ್ಲಿ ಬೆಕೆಟ್ ರೂಸ್ಸೋ-ಲಿನ್ನಿನ ಬಟಾಟೆಯ ಹೊಲದಲ್ಲಿ ಕೂಲಿಯಾಗಿ ದುಡಿಯುತ್ತಿರುವಾಗ 'ವ್ಯಾಟ್' ಎಂಬ ಎರಡನೆಯ ಕಾದಂಬರಿ ಬರೆದ. ಓದುವವರೇ ಇಲ್ಲದಾಗ ಬರೆಯುವುದು ಹುಡುಗಾಟಿಕೆಯೆಂಬುದು ಬೆಕೆಟ್‌ನಿಗೆ ಗೊತ್ತಿತ್ತು. ಎಲ್ಲವೂ ಹಾಳಾಗಿ ಹೋದಾಗ ಇಂಥ ಮೂರ್ಖತನದ ಕೆಲಸವೂ ಸಹನೀಯ ಎಂಬ ಅಭಿಪ್ರಾಯ ಅವನದು. "ಇದೊಂದು ಆಟ. ತಲೆ ಪೂರ್ಣ ಕೆಟ್ಟು ಹೋಗಬಾರದೆಂಬುದಕ್ಕೆ ಆಡಿದ್ದು," ಎಂದು ವ್ಯಾಟ್‌ನ್ನು ಕುರಿತು ಆತ ಹೇಳಿದ್ದಾನೆ. ತನ್ನ ಮನಸ್ಸಿನ ಗೊಂದಲಗಳನ್ನೆಲ್ಲ ಈ ಕೃತಿಯ ಮುಖಾಂತರ ಅಸ್ಪಷ್ಟ-ಸಂಕೀರ್ಣ ಪರದೆಯ ಹಿಂದೆ ನಗ್ನವಾಗಿ ನಿಲ್ಲಿಸಿದ್ದಾನೆ. ಯಾವ ಸಂಕೇತವೂ ಇಲ್ಲ, ಯಾವ ಉದ್ದೇಶವೂ ಇಲ್ಲ. ನಾನೇನು ಬರೆದಿದ್ದೇನೆಂಬುದೋ ಅಷ್ಟೇ ಅರ್ಥ ಅದಕ್ಕೆ, ಎಂದು ಗೊಂದಲದಲ್ಲಿ ಬಿದ್ದ ವಿಮರ್ಶಕರಿಗೆ ಉತ್ತರ ಕೊಟ್ಟಿದ್ದಾನೆ. ಸ್ನೇಹಿತ ಜಾನ್ ಮಾಂಟೆಗೂನಿಗೆ ಬೆಕೆಟ್ ಒಂದು ಮಾತು ಕೇಳುತ್ತಾನೆ: "ಪದ್ಯವನ್ನು ಬರೆಯಲು ಅಷ್ಟೇಕೆ ಕಷ್ಟಪಡುತ್ತಿ ಮಾಂಟೇಗೂ ಸ್ವಗತ! ಸ್ವಗತ ಬೇಕು. ಅಷ್ಟೇ ಸಾಕು!"

ದುಃಖವನ್ನು ಹತ್ತಿಕ್ಕಿಕೊಂಡಾಗ ಅದರ ನೆರಳನ್ನು ಮೂಲೆಗೆ ತಳ್ಳಿಕೊಂಡಾಗ ಕಾವ್ಯದ ಬೆಳಕು ತೋರುತ್ತದೆಯೆಂದಿದ್ದಾನೆ ಬೆಕೆಟ್. ಮನಸ್ಸು-ಭಾವನೆ, ಸ್ಮರಣೆ, ಕನಸು, ಆಸೆಗಳ ಭಂಡಾರ. ಅದನ್ನು ಒಡೆದರೆ ಎಲ್ಲ ರತ್ನಗಳೂ ಹೊರಬೀಳುತ್ತವೆಂಬುದು ಬೆಕೆಟ್‌ನ ಅಭಿಪ್ರಾಯ.

೧೯೪೬-೫೦ರ ಕಾಲಾವಧಿಯಲ್ಲಿ ಬೆಕೆಟ್ ಆಶ್ಚರ್ಯಕಾರಕ ಪ್ರತಿಭಾವಲಯವನ್ನು ಸೇರಿದ. ಫ್ರೆಂಚ್ ಭಾಷೆಯಲ್ಲಿ ಅವನು ಮೂರು ಕಾದಂಬರಿ-ಗಳನ್ನು ಇದೇ ಕಾಲದಲ್ಲಿ ಬರೆದ. ಮೋಲಿ, ಮಲೋನ್ ಡೈಯ್ಸ್ ಮತ್ತು ಅನ್ನೇಬಲ್ ಎಂಬವುಗಳು ಒಂದೇ ಕಾದಂಬರಿಯ ಮೂರು ಭಾಗಗಳು, ಇಲ್ಲಿ ಕಾಲದ ಮಿತಿ ಸ್ಥಳದ ಗಡಿ ಸಂವಿಧಾನದ ಕಟ್ಟುಗಳನ್ನೊಡೆದು ಮಾನವರ ತುಂಬು ಬದುಕಿನ ಸಾರ್ವಕಾಲಿಕ ಅಭಿವ್ಯಕ್ತಿಯನ್ನಾಗಿಸಿದ್ದಾನೆ. "ನನ್ನ ಮನಸ್ಸಿನ ತಿಪ್ಪೆಗಳನ್ನು ಕೆದಕುತ್ತಿದ್ದೇನೆ, ಕಾರುತ್ತಿದ್ದೇನೆ," ಎಂದಿದ್ದಾನೆ ಬೆಕೆಟ್. ಈ ಕಾದಂಬರಿಗಳನ್ನು ಬರೆಯುವ ತಪ್ತ ಕಾಲದಲ್ಲಿ. "ಆಶಾವಾದವು ನನ್ನ ಜೀವನಸಿದ್ಧಾಂತವಲ್ಲ. ನಾನು ಯಾವಾಗಲೂ ವ್ಯಾಕುಲ ಸ್ವಭಾವದವನು. ಈ ನಿರಾಶಾವಾದವೇ ನನ್ನ ವ್ಯಕ್ತಿತ್ವವನ್ನು ನಡೆ-ಯಿಸುವ ತತ್ವವೆಂಬುದು ತಿಳಿದುಕೊಂಡಾಗಿದೆ. ಈ ಅನಿಸಿಕೆ ನನಗೆ ಸಮಾಧಾನವನ್ನು ತಂದಿದೆ. ಇದನ್ನು ಆತ್ಮಸಾತ್ ಮಾಡಿಕೊಂಡಿದ್ದೇನೆ. ಈಗ ನನಗೆ ಸೃಜನಶೀಲ ಹಗುರಾಗಿದೆ," ಎಂದ ಬೆಕೆಟ್‌ನೇ 'ಮೋಲಿ' ಕಾದಂಬರಿಯ ಪಾತ್ರವಾದ ಮೊರೆಸನ ಬಾಯಿಂದ ಬದುಕು ಸಾವುಗಳ ಮಧ್ಯದ ಅರ್ಥವಿಲ್ಲದ ಪ್ರಯತ್ನವೆಂದು ಹೇಳಿಸಿದ್ದಾನೆ. ಭೌತಿಕ ಬದುಕಿನಂತೆ ವೈಚಾರಿಕ ಬದುಕೂ ಅರ್ಥಹೀನ. ಅಂದರೆ ಗತಿಯಿಲ್ಲ ಏನಾದರೂ ಮಾಡಬೇಕು; ಮಾಡಲು ಏನೂ ಇಲ್ಲ! "ಬೆನ್ನೆಲಬಿಲ್ಲದ ಅಸ್ತಿತ್ವದ ಅಪಹಾಸ್ಯದ ಯತ್ನಗಳು" ಎಂದು ತನ್ನೆಲ್ಲ ಸಾಹಿತ್ಯ ಕೃತಿಗಳನ್ನು ಕರೆದುಕೊಂಡಿದ್ದಾನೆ.

ಈ ಕಾದಂಬರಿಗಳ ಮುಖಾಂತರ ಮಾನವನ ಬದುಕಿನ ಬಗೆಗಿನ ನಮ್ಮ ತಿಳುವಳಿಕೆಯನ್ನು

ಶ್ರೀಮಂತಗೊಳಿಸಿದ್ದಾನೆ. ಅವರಂತೆ ಭಾಷೆಗೆ ಕಾಯಕಲ್ಪ ಮಾಡಿಲ್ಲದನ್ನು ಜೀವಂತಗೊಳಿಸಿದ್ದಾನೆ. ಬೆಕೆಟ್‌ನ ಪ್ರಕಾರ ಓರ್ವ ಸಾಹಿತಿಯ ಎಲ್ಲ ಕೃತಿಗಳು ಒಂದಕ್ಕೊಂದು ಹೊಂದಿಕೊಂಡವು; ಅವು ಪ್ರತ್ಯೇಕವಾದವುಗಳಲ್ಲ.

ಕಾದಂಬರಿಯ ಗದ್ಯದಿಂದ ಸೋತುಹೋದ ಬೆಕೆಟ್ ಲಕ್ಷ್ಯವನ್ನು ಹೊರಳಿಸುವುದಕ್ಕಾಗಿ ನಾಟಕವನ್ನು ಬರೆದ. ಅವನನ್ನು ಜಗತ್ಪ್ರಸಿದ್ಧ ಮಾಡಿದ ಕೃತಿ 'ವೇಟಿಂಗ್ ಫಾರ್ ಗಾಡೊ.' 'ಹ್ಯಾಪಿ ಡೇಸ್' ಅಲ್ಲದೇ ವರ್ಡ್ಸ್ ಆ್ಯಂಡ್ ಮ್ಯೂಸಿಕ್, 'ಕಮ್ ಆ್ಯಂಡ್ ಗೊ,' 'ದಿ ಲಾಸ್ಟ್ ಲೂಜ್ ಒನ್ಸ್ ಎಂಬ ರೇಡಿಯೋ ಟೆಲಿವಿಜನ್ ನಾಟಕಗಳನ್ನು ಬರೆದಿದ್ದಾನೆ. ಅವನಿಗೆ ಕಾದಂಬರಿಯನ್ನು ಬರೆಯಬೇಕೆಂಬ ಇಚ್ಛೆ ಎಷ್ಟೋ ಸಾರೆ ಬರುವದುಂಟಂತೆ: ಆದರೆ ಬರೆದದ್ದೆಲ್ಲ ನಾಟಕವಾಗುತ್ತದೆಯೆಂಬ ಅಸಮಾಧಾನ.

'ವೇಟಿಂಗ್ ಫಾರ್ ಗಾಡೋ'ವನ್ನು ಕುರಿತು ನಡೆದಷ್ಟು ಚರ್ಚೆ, ವಿಮರ್ಶೆ ಇಪ್ಪತ್ತನೆಯ ಶತಮಾನದ ಯಾವ ಕೃತಿಯ ಮೇಲೆಯೂ ನಡೆಯಲಿಲ್ಲವೆಂದು ಹೇಳಲಾಗುತ್ತಿದೆ. ಈ ನಾಟಕದ ಮೊದಲನೆಯ ಮಾತೇ 'ಮಾಡಲೇನೂ ಇಲ್ಲ' ಎಂಬುದು. ಇದು ಇಪ್ಪತ್ತನೆಯ ಶತಮಾನದ ಬುದ್ಧಿಜೀವಿಗಳ ಸಮಸ್ಯೆ. ಏನೂ ಮಾಡಲು ಇಲ್ಲವೆಂದರೇನು? ಏನು ಮಾಡಿದರೂ ಪ್ರಯೋಜನವಿಲ್ಲವೆಂದೇ ಇರಬೇಕು 'ಕಾಯುವ ಕ್ರಿಯೆ. ಈ ನಾಟಕದ ವಸ್ತು ಇಲ್ಲದ್ದಕ್ಕಾಗಿ ಕಾಯುವುದು ಗಾಡೋ ಒಂದು ಫ್ರೆಂಚ್ ಗ್ರಾಮ್ಯಪದ. ಅರ್ಥ ಬೂಟು ಎಂದು; ಕೇವಲ ನಾಲ್ಕು ಪಾತ್ರಗಳು. ಒಬ್ಬ ಹುಡುಗ. ಎಸ್ಟ್ರಾಗನ್ ವ್ಲಾಡಿಮಿರ್ ರ್‍ಶೋ, ಲಕಿ ತಿಣುಕು ತಿಣುಕು ನಾಟಕಗಳು, ಎರಡೇ ಅಂಕ; ಒಂದು ಒಣಮರ.

ಕೆಲವು ವಿಮರ್ಶಕರು 'ಫ್ರೆಂಚ್ ಪ್ರತಿರೋಧಿಗಳು' ತಮ್ಮ ತಮ್ಮ ವಿಶಿಷ್ಟ ಅಜ್ಞಾತ ಸ್ಥಳಗಳಿಗಾಗಿ ಕಾಯುತ್ತಿದ್ದರ ಕಥೆಯೆಂದರು. ಮಹಾಯುದ್ಧದ ಐದು ವರ್ಷಗಳಲ್ಲಿ ಲಕ್ಷಾನುಲಕ್ಷ ಜನರ, ಬದುಕು ಹೇಗೆ ನಿರ್ಜೀವವಾಗಿ ಅಧೀನರಹಿತವಾಗಿ ಬಿದ್ದಿತ್ತೆಂಬುದನ್ನು ಚಿತ್ರಿಸುತ್ತಿವೆಯೆಂದರು. ಈ ನಾಟಕ ಅಲೌಕಿಕವಾಗಿಯು, ಯುಗಯುಗಗಳಿಂದ ಮಾನವಕುಲ ಸಂಧಿಸಲಾಗದ ಚೇತನದ ಆಗಮನವನ್ನು ನಿರರ್ಥಕವಾಗಿ ಕಾಯುತ್ತಿದ್ದುದರ ಸಂಕೇತವೆಂದರು. ಗಾಡೋ ಎಂದರೆ ಅದರ ಧ್ವನಿಯ ಸಾಮ್ಯದಿಂದ ಗಾಡ್ ಎಂದೂ ಕೆಲವರು ಅರ್ಥ ಹಚ್ಚಿದರು. ಆದರೆ ಬೆಕೆಟ್ ಮಾತ್ರ ವಿಮರ್ಶಕರ ಪ್ರಶ್ನೆಗಳಿಗೆ ಉತ್ತರಕೊಡಲು ಸಿದ್ಧನಿಲ್ಲ. "ನೀವು ಹೇಳಿದಂತೆ ಅದರ ಅರ್ಥ ಇರಬೇಕೆಂದಾದರೆ, ಹಾಗೆಯೇ ಬರೆಯುತ್ತಿದ್ದೆನಲ್ಲ!" ಎಂದಿದ್ದಾರೆ. "ನಾನೊಬ್ಬ ದಡ್ಡ. ವಿಮರ್ಶಕರಿಗೆ ನನಗಿಂತ ಹೆಚ್ಚು ಗೊತ್ತು. ಬರವಣಿಗೆಯ ಬಗ್ಗೆ ನನ್ನನ್ನು ಕೇಳಿ. ಆದರೆ ಪ್ರತ್ಯೇಕ ಕೃತಿಯನ್ನು ಕುರಿತಲ್ಲ. ಬರೆಯುವುದಕ್ಕಿಂತ ಸಾರ್ಥಕ ಕೆಲಸ ಮತ್ತಾವುದೂ ಇಲ್ಲ ಎನ್ನುವುದಕ್ಕಾಗಿ ಬರೆಯುತ್ತಿದ್ದೇನೆ, ಎಂದಿದ್ದಾನೆ ಬೆಕೆಟ್. ಒಮ್ಮೆಲೇ ವಿಶ್ವವಿಖ್ಯಾತವಾದ, ಜಗತ್ತಿನ ಎಲ್ಲಾ ಭಾಷೆಗಳಿಗೂ ತರ್ಜುಮೆಗೊಂಡ, ಜಗತ್ತಿನ ಪ್ರಸಿದ್ಧ ನಟರೂ ನಿರ್ದೇಶಕರೂ ಪಾಲುಗೊಂಡ ಈ ನಾಟಕದ ಮಹಿಮೆಯನ್ನು ನೋಡಿ ಬೆಕೆಟ್‌ನೇ ಬೆರಗಾಗಿ "ವಿಚಿತ್ರ" ಎಂದು ಉದ್ಗರಿಸಿದ್ದಾನೆ.

೧೯೫೫ರಲ್ಲಿ ಬೆಕೆಟ್‌ನ ಹಸ್ತಪ್ರತಿಗಳನ್ನು ನೋಡಿದ ಉತ್ಸಾಹಿ ಮತ್ತು ಪ್ರಗತಿಪರ ಪ್ರಕಾಶಕನಾದ ಜೆರೋಮ್ ಲಿಂಡನ್, ಅವನ ಕೃತಿಗಳ ಪ್ರಕಟಣೆಯನ್ನು ಪ್ರಾರಂಭಿಸಿದ. ಇಪ್ಪತ್ತನೆಯ ಶತಮಾನದ ಮಾನವ ಕುಲದ ಉನ್ನತ ಅಭಿವ್ಯಕ್ತಿಗಳಾದ ಬೆಕೆಟ್‌ನ ಕೃತಿಗಳು ಅತ್ಯಾಧುನಿಕವೆಂದು ಆತ ಹೇಳಿದ್ದಾನೆ. ಗಾಡೋ ನಾಟಕದ ಗೌರವಧನದಿಂದ ಬೆಕೆಟ್‌ನ ಜೀವನ ಸುಧಾರಿಸಿತು. ಇಂಗ್ಲಂಡು–ಅಮೇರಿಕಗಳಿಂದ ಅಪರಿಮಿತ ಗೌರವಧನ ಬರತೊಡಗಿತು. ಆದರೆ ಬೆಕೆಟ್‌ನಿಗೆ ವ್ಲಾಡಮೀರ್ ಮತ್ತು ಎಸ್ಟ್ರಾಗನ್‌ರ ಸಂಭಾಷಣೆ ನೆನಪಿಗೆ ಬಂದಿತ್ತು.

"ಹೇಳು, ನಾನು ಸುಖವಾಗಿದ್ದೇನೆ.

ನಾನು ಸುಖವಾಗಿದ್ದೇನೆ.

ನಾನು ಸಹ.

ನಾನೂ ಕೂಡಾ.

ನಾವಿಬ್ಬರು ಸುಖವಾಗಿದ್ದೇವೆ.

ನಾವು ಸುಖವಾಗಿದ್ದೇವೆ (ಮೌನ) ನಾವು ಸುಖವಾಗಿದ್ದೇವೆ– ಆದರೆ ಏನು ಮಾಡುವುದು?"

# ಗುಡಿ ಕೈಗಾರಿಕೆಗೆ ಪ್ರೋತ್ಸಾಹ

ಗುಡಿ ಕೈಗಾರಿಕೆಗೆ ಪ್ರೋತ್ಸಾಹ ನೀಡಿ ಅಭಿವೃದ್ಧಿಗೊಳಿಸಿ ಗ್ರಾಮೀಣ ಅಭಿವೃದ್ಧಿ ಹಾಗೂ ನಿರುದ್ಯೋಗವನ್ನು ಹೋಗಲಾಡಿಸುವುದು ಸರ್ಕಾರದ ಬೃಹತ್ ಕಾರ್ಯಕ್ರಮಗಳಲ್ಲಿ ಒಂದು.

ಧನಸಹಾಯ ತಾಂತ್ರಿಕ ಹಾಗೂ ಮಾರುಕಟ್ಟೆ ಸೌಲಭ್ಯಗಳನ್ನು ಒದಗಿಸಿ ಕುಶಲ ಕರ್ಮಿಗಳಿಗೆ ಪ್ರೋತ್ಸಾಹ ನೀಡುವುದು, ಪರಿಣಾಮ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಕರಕುಶಲ ತರಬೇತಿ ಸಂಸ್ಥೆಗಳನ್ನು ವ್ಯವಸ್ಥಿತವಾಗಿ ಮಾರ್ಪಡಿಸಲು ಯೋಜನೆ ಇದೆ. ಇದರಿಂದ ಗ್ರಾಮೀಣ ಪ್ರದೇಶಕ್ಕೆ ಅವಶ್ಯಕವಾದ ತಾಂತ್ರಿಕ ಸಿಬ್ಬಂದಿಯು ನೆರವು ಪಡೆಯಲು ಅನುವು ಆಗುತ್ತದೆ.

ಗ್ರಾಮೀಣ ಹಾಗೂ ಸಣ್ಣ ಕೈಗಾರಿಕೆಗಳಿಗಾಗಿ ಕಳೆದ ವರ್ಷ ೬.೫ ಕೋಟಿ ರೂಪಾಯಿಗಳನ್ನು ನಿಗದಿ ಮಾಡಲಾಗಿತ್ತು.

**ಪ್ರಕಟಣೆ – ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**
**ಬೆಂಗಳೂರು**

ದುಃಖದ ಬಗ್ಗೆ ನಾವು ದುಃಖಿಸಬಹುದು; ಆದರೆ ಸುಖವಾಗಿದ್ದರೂ ಅತೃಪ್ತಿಯ ಮಾತಾಗುವ ಇಂದಿನ ಪರಿಸ್ಥಿತಿ ತೀರಾ ವಿಚಿತ್ರವಾದರೂ ಅತಿ ಸ್ವಾಭಾವಿಕ, ಜೀವನದಲ್ಲಿ ಆಗಲೇ ನಾಲ್ವತ್ತು ವರುಷಗಳ ಬೇಗುದಿಯನ್ನುಂಡ ಬೆಕೆಟ್‌ನಿಗೆ ಹಣ ಬಂದರೂ ಕೀರ್ತಿಬಂದರೂ ವಿಶೇಷ ಅನಿಸಲಿಲ್ಲ.

ಪ್ರಕಾಶಕರು ಅಮೇರಿಕ–ಇಂಗ್ಲಂಡುಗಳಿಂದ ಆತನ ಕೃತಿಗಳನ್ನು ಬೇಡಿ ಬರೆಯಹತ್ತಿದರು. ಬೆಕೆಟ್ಟನಿಗೆ ಉತ್ಸಾಹವಿರಲಿಲ್ಲ. ಅವನಿಗೆ ಪ್ರಕಾಶಕರು ಕೊಡುವ ಸನ್ಮಾನ ಅವರ ಜ್ಞಾನ, ಯೋಗ್ಯತೆಯ ವಿಷಯ ಅರ್ಥವಾಗಿ ಹೋಗಿತ್ತು! ಫ್ರೆಂಚಿನಿಂದ ಇಂಗ್ಲೀಷಿಗೆ ತಾನೆ ತರ್ಜುಮೆ ಮಾಡಿದ ತನ್ನ ಕೃತಿಗಳನ್ನು.

ಅವನ ನಾಟಕಗಳ ನಿರ್ದೇಶನದ ಜವಾಬುದಾರಿಯನ್ನು ರೋಜರ್ ಬ್ಲಿನ್ ಹಮ್ಮಿಕೊಂಡು ಅವನು ತನ್ನ ನಾಟಕಗಳ ಪೂರ್ವ ತಯಾರಿಯ ಪ್ರಸಂಗಗಳಲ್ಲಿ, ಅವುಗಳ ನಿರ್ದೇಶನದಲ್ಲಿ ಹೃತ್ಪೂರ್ವಕವಾಗಿ ಸಹಕರಿಸುತ್ತಿದ್ದ. ಬೆಕೆಟ್ಟನ ಪ್ರಕಾರ ನಾಟಕದಲ್ಲಿ ನಿರ್ದೆಶಕನ ಪಾತ್ರ ತೀರಾ ಗೌಣ. ನಿಜವಾದ ನಿರ್ದೇಶಕ ಲೇಖಕನೇ. ನಾಟಕವನ್ನು ಬರೆಯುವಾಗ ಲೇಖಕ ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತವನಂತಿರಬೇಕು. ಶುದ್ಧ ಸಂಭಾಷಣೆಗಳು, ರಂಗಸ್ಥಳದಲ್ಲಿರಬೇಕು. ನಟರು ತಮಗೊದಗಿದ ಸಾಹಿತ್ಯವನ್ನು, ಅದೇ ಪ್ರಧಾನವಾಗಿರುವಂತೆ ರಂಗಸ್ಥಳದಲ್ಲಿ ತರಬೇಕು. ಚಿತ್ರಕಲಾ ಪ್ರದರ್ಶನದಲ್ಲಿ ಕಲಾಕೃತಿಗಳು ಹೇಗೆ ಪ್ರದರ್ಶಿಸಲ್ಪಟ್ಟಿರುತ್ತವೆಯೋ ಹಾಗೆಯೇ ರಂಗಸ್ಥಳದ ಮೇಲೆ ನಾಟಕ ಒಂದೇ ಕಾಣಬೇಕು. ನಟರಲ್ಲ, ನಿರ್ದೇಶಕನಲ್ಲ. ಬೆಕೆಟ್ಟನ 'ಬ್ರೆಥ್' ಎಂಬ ೧೨೦ ಶಬ್ದಗಳ ನಾಟಕವೊಂದುಂಟು! ಶಬ್ದಗಳೆಂದರೆ ಧ್ವನಿಗಳು ಬೆಳಕು ಮತ್ತು ಗಲಭೆ ನಾಟಕದ ಸಂಭಾಷಣೆಗಳೇ ನಟರಾಗುವ ಪ್ರಯೋಗವನ್ನು ಅವನು ನಡೆಯಿಸಿಯೇ ಇದ್ದಾನೆ.

ರಂಗಸ್ಥಳ ತೀರಾ ಚಿಕ್ಕದಾಗಿರಬೇಕು. ನಟರ ಚಲನವಲನಕ್ಕೆ ಹೆಚ್ಚು ಸ್ಥಳ ಸಿಕ್ಕರೆ ನಾಟಕದ ಪ್ರದರ್ಶನವಾಗುವದಿಲ್ಲ; ನಟರ ಪ್ರದರ್ಶನವಾಗುತ್ತದೆ. ಪಾತ್ರ ನಿರ್ವಹಣೆಗೆ ಅಡ್ಡಿಯಾಗದಷ್ಟು ಸ್ಥಳ ವಿದ್ದರೆ ಸಾಕು.

ಬೆಕೆಟ್ ನಾಟಕಗಳ ಮುಖ್ಯಾಂತರ ಮಾನವನ

ಅನಿಸಿಕೆ ಮತ್ತು ದೃಷ್ಟಿಕೋನಗಳಿಗೆ ವಿದ್ಯುತ್ ಶಾಖ ಕೊಟ್ಟಿದ್ದಾನೆ.

೧೯೫೯ರಲ್ಲಿ ಟ್ರಿನಿಟಿ ಕಾಲೇಜು ಅವನಿಗೆ ಗೌರವ ಡಾಕ್ಟರೇಟ್ ಕೊಟ್ಟಿತು. ೧೯೬೧ರಲ್ಲಿ ಅಂತಾರಾಷ್ಟ್ರೀಯ ಪ್ರಕಾಶಕರ ಬಹುಮಾನವನ್ನು ಆತ ಬಾರ್ಗಿಸ್‌ರೊಂದಿಗೆ ಹಂಚಿಕೊಂಡ.

ಅವನ ಜನಪ್ರಿಯತೆ ಹೆಚ್ಚಿತು. ಅವನಿಗೆ ವಿಶ್ರಾಂತಿ ಕಡಿಮೆಯಾಯಿತು. ಬರೆಯುವುದು ಸಾಧ್ಯವಾಗತೊಡಗಿತು. ಪ್ಯಾರಿಸ್ಸಿನಲ್ಲಿ ದೊಡ್ಡ ಮನೆಯೊಂದನ್ನು ಕೊಂಡುಕೊಂಡಿದ್ದ. ಜನರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಉಸ್ಸಿ ಎಂಬ ಹಳ್ಳಿಯಲ್ಲಿ ಗುಡಿಸಲೊಂದನ್ನು ಕಟ್ಟಿಕೊಂಡು ಅಲ್ಲಿ ವಾಸಿಸತೊಡಗಿದ. ಅದರ ಸುತ್ತಲಿನ ತೋಟವನ್ನು ತಾನೇ ಮಾಡಿದ. ಯಾವುದೂ ಕಾಣದಷ್ಟು




"ಒಂದು ಸಾರಿ ಪಕ್ಷ ಬಿಟ್ಟು ಹೋದ ಮೇಲೆ ಮತ್ತೆ ಸೇರಿಸಿಕೊಳ್ಳಲಿಕ್ಕೆ ಇದೇನು ಮಾಪದ ರಾಜಕೀಯ ಅಂತ ತಿಳಕೊಂಡ್ರಾ ?"

ಎತ್ತರವಾದ ಗೋಡೆಗಳನ್ನು ಮನೆಯ ಸುತ್ತಲೂ ಹಾಕಿಕೊಂಡ. ಬರೆಯಬೇಕೆಂದು ಕಂಡಾಗ ಸುರಕ್ಷಾನೆಯನ್ನು ಪ್ಯಾರಿಸ್ಸಿನಲ್ಲಿ ಬಿಟ್ಟು ಅಲ್ಲಿಗೆ ಹೋಗುತ್ತಿದ್ದ.

೧೯೬೯, ಅಕ್ಟೋಬರ್ ೨೧ರಂದು ದೂರವಾಣಿಯ ಮುಖಾಂತರ ಆತನಿಗೆ ಸಾಹಿತ್ಯದ ಬಗ್ಗೆ ನೊಬೆಲ್ ಪಾರಿತೋಷಕ ದೊರಕಿದ ಸುದ್ದಿ ಬಂದಿತು. ಆಗ ಆತ ಗೆಳೆಯನಿಗೆ ಪತ್ರ ಬರೆಯುತ್ತ ಕುಳಿತಿದ್ದ. ಬರೆಯುವುದನ್ನು ಮುಗಿಸಿ ಕೋಣೆಯಲ್ಲಿ ಅಚೆ ಈಚೆ ತಿರುಗಾಡತೊಡಗಿದ. ಅತನಿಗೆ ಗಾಬರಿಯಾಗಿತ್ತು; ಆಶ್ಚರ್ಯವಾಗಿತ್ತು ಸಂತೋಷದ ಲಕ್ಷಣ ಕೊಂಚವೂ ತೋರಿಬರಲಿಲ್ಲ. ೧೯೬೪ರಲ್ಲಿ ಜೇನ್ ಪಾಲ್ ಸಾರ್ತ್ರ್ ನೋಬಲ್ ಬಹುಮಾನವನ್ನು ತಿರಸ್ಕರಿಸಿದ್ದ. "ತಾನಾಗಿ ಬಂದ ಗೌರವವನ್ನು ತಿರಸ್ಕರಿಸುವುದು ಮಾನವೀಯ ಸಭ್ಯತೆಯಾಗಲಾರದು" ಎಂದ ಬೆಕೆಟ್. ಪಾರಿತೋಷಕವನ್ನು ಸ್ವೀಕರಿಸಲು ಆತ ಸ್ವೀಡನ್ನಿನ ಅಕಾಡಮಿಯ ಎದುರು ಹೋಗಲಿಲ್ಲ. ಲೇಖಕ ಸ್ವತಃ ಹೋಗಲಿಲ್ಲವಾದರೆ ಆ ದೇಶದ ರಾಯಭಾರಿ ಆ ಸಮಾರಂಭಕ್ಕೆ ಹಾಜರಾಗಿ ಪ್ರಶಸ್ತಿಯನ್ನು ಸ್ವೀಕರಿಸಬೇಕು. ಆದರೆ ಬೆಕೆಟ್ ತನ್ನ ಪರವಾಗಿ ಪ್ರಕಾಶಕ ಜೆರೋವಮ್ ಲಿಂಡನ್‌ಗೆ ಹಾಜರಾಗಿ ಪ್ರಶಸ್ತಿ ಸ್ವೀಕರಿಸುವಂತೆ ವಿನಂತಿಸಿಕೊಂಡ!

ಇಪ್ಪತ್ತು ವರ್ಷಗಳ ಹಿಂದೆ ಅತ್ಯಿತ್ತಲಾಗಿ ಬದುಕಿದ ಬೆಕೆಟ್‌ನಿಗೆ ನೋಬೆಲ್ ಪಾರಿತೋಷಕ ತಂದ ಹಣ ತನ್ನದೆಂದು ಅನಿಸಲೇ ಇಲ್ಲ. ಅದರ ಬಹುಭಾಗವನ್ನು ಅವಶ್ಯವಿದ್ದ ಲೇಖಕರು, ನಟರು, ಪ್ರಕಾಶಕರು, ನಿರ್ದೇಶಕರು, ಸ್ನೇಹಿತರಿಗೆ ಹಂಚಿಬಿಟ್ಟ. ಆತನ ಹತ್ತಿರ ತೊಂದರೆಯಲ್ಲಿದ್ದವರು ಹೇಳಿಕೊಳ್ಳುವ ಪ್ರಸಂಗ ಬರುತ್ತಿರಲೇ ಇಲ್ಲ. ಆತ ಉಳಿದವರ ಕಷ್ಟವನ್ನು ಪೂರ್ವಭಾವಿಯಾಗಿಯೇ ಅರಿತು ಸಹಾಯಮಾಡುತ್ತಿದ್ದ. ಅಷ್ಟೇ ಅಲ್ಲದೇ, ಅವರು ಏನಾದರೂ ತಿಳಿದುಕೊಂಡಾರೆಂದು ತಾನೇ ಸಣ್ಣವನಾಗಿ ನಡೆದುಕೊಳ್ಳುತ್ತಿದ್ದ.

ಬೆಕೆಟ್‌ನನ್ನು ಇಂದು ವಿಮರ್ಶಕರು ಪ್ರಸಿದ್ಧ ಕಾದಂಬರಿಕಾರರಾದ ಜೇಮ್ಸ್ ಜಾಯ್ಸ್, ಫ್ರಾಸ್ಟ್, ಮಾನ್, ಫಾಕ್ನರ್ ಮತ್ತು ಕಾಫ್ಕಾರ ಸಾಲಿನಲ್ಲಿ ಎಣಿಸುತ್ತಾರೆ. ಆದರೆ ಬೆಕೆಟ್‌ನ ಅತ್ಯುಚ್ಚ, ಅನನ್ಯ ನಾಟಕ ಪ್ರತಿಭೆಗೆ ಸರಿಸಾಟಿಯಾದವನು ಮತ್ತೊಬ್ಬನಿಲ್ಲವೆನ್ನುತ್ತಾರೆ. ಬರವಣಿಗೆಯನ್ನೇ ಶುದ್ಧ ಕರ್ಮವನ್ನಾಗಿ ಸ್ವೀಕರಿಸಿ, ತನ್ನೆಲ್ಲ ವೈಯಕ್ತಿಕ ಸುಖ, ಸಮಾಧಾನಗಳನ್ನು ಅದಕ್ಕೆ ಬಲಿಗೊಟ್ಟು ಅದರಲ್ಲಿಯೇ ಲೀನನಾದ ಮಹಾ ಸಾಹಿತ್ಯ ತಪಸ್ವಿಯೆಂದು ಬೆಕೆಟ್‌ನನ್ನು ಇಂದು ಗೌರವಿಸುತ್ತಿದ್ದಾರೆ. ✲



## ೩೦ ದಿನಗಳ ಫೆಬ್ರುವರಿ

ಕ್ರಿ. ಶ. ೨೦೦೦ನೇ ವರ್ಷದಲ್ಲಿ ಫೆಬ್ರುವರಿ ತಿಂಗಳಲ್ಲಿ ೩೦ ದಿನ ಬರುತ್ತದೆ. ಆ ದಿನ ಹುಟ್ಟಿದವರಿಗೆ ಪುನಃ ಹುಟ್ಟಿದ ದಿನ ಆಚರಿಸಿಕೊಳ್ಳುವ ಅವಕಾಶ ಬರುವುದು ಇನ್ನೊಂದು ಸಾವಿರ ವರ್ಷಗಳಾದ ಮೇಲೆಯೆ. ಸಾವಿರ ವರ್ಷಕ್ಕೆ ಒಂದು ಸಲ ಫೆಬ್ರುವರಿ ತಿಂಗಳಲ್ಲಿ ೩೦ ದಿನಗಳಿರುತ್ತದೆ.

ಸಂಗ್ರಹ: ಕೆ. ಎ. ರಂಗನಾಥರಾವ್

Printed & published by B. V. Jigjinni, Receiver for movable property of Loka Shikshana Trust, at Samyukta Karnataka Press, Koppikar Road, Hubli–580 020. Rept : Bombay : V. Satyamurthy Phone : 522412; Calcutta : H. Majumdar 46–4233; Madras : K. A. Subramanian Phone : 842201; New Delhi : P. R. Chopra Phone : 714130.

KASTURI PRICE: 2-00 Regd. No. K.
Registered with the Regisirar of Newspapers for India under No. .